# ಹೊಸತು




## ನೆಮ್ಮದಿಯ ನಾಳೆ ನಮ್ಮದು




**ಚಿತ್ರಗಳು :** ನಾಮದೇವ ಕಾಗದಗಾರ, ಕಮಲಂ ಅರಸು,
ವಿ. ಗೋಪಾಲ್, ಜಿ. ಎಂ. ಬೊಮ್ನಳ್ಳಿ

**ಮುಖಪುಟ :** ಅಂತರ್ಜಾಲದಿಂದ

**ವಿನ್ಯಾಸ :** ನವಕರ್ನಾಟಕ ವಿನ್ಯಾಸ

**ಕಚೇರಿ ಸಹಕಾರ :** ಜಿ. ವಿ. ತೇಜೋವತಿ


## ಈ ತಿಂಗಳು

ಭಾಗ್ಯಗಳ ಹೊಳೆ ಹರಿಸಿ ಅಂತೂ ಇಂತೂ ಸಿದ್ದರಾಮಯ್ಯ ನೇತೃತ್ವದ ಕಾಂಗ್ರೆಸ್ ಸರಕಾರ ನಾಲ್ಕು ವರ್ಷ ಅಧಿಕಾರ ನಡೆಸಿ ಆಯಿತು. ಸಾಧನೆಗಳ ಸಮಾವೇಶ ಆಚರಿಸಿತು. 'ನಮ್ಮ ಸಾಧನೆಗಳೇ ನಮಗೆ ಶ್ರೀರಕ್ಷೆ ಮತ್ತೆ ಅಧಿಕಾರಕ್ಕೆ ಬರಲು' ಎಂದು ಕೊಚ್ಚಿಕೊಂಡಿದ್ದಾರೆ ಮುಖ್ಯಮಂತ್ರಿ. ಪತ್ರಿಕೆಗಳಲ್ಲಿ ಪುಟಗಟ್ಟಲೆ ಜಾಹೀರಾತು ನೀಡಿದ್ದಾರೆ, ಮಾಧ್ಯಮಗಳಿಗೆ ಸಂದರ್ಶನ ನೀಡಿದ್ದಾರೆ, ಅಷ್ಟೇ ಉದಾರವಾಗಿ ಜಾಹೀರಾತು ಹಂಚಿದ್ದಾರೆ. ಇನ್ನು ಮುಂದೆಲ್ಲ ಚುನಾವಣೆಯ ಮೇಲೇ ಕಣ್ಣು. ಮುಖ್ಯಮಂತ್ರಿಯಾಗಿ ಮುಂದುವರಿಯಲು ಸಿದ್ದರಾಮಯ್ಯಗೆ ಅವಕಾಶವೂ ಇಲ್ಲ, ಅರ್ಹತೆಯೂ ಇಲ್ಲ. ಅಂಥ ಹೇಳಿಕೊಳ್ಳುವಂಥ ಸಾಧನೆಯೂ ಇಲ್ಲ. ಕಾಂಗ್ರೆಸ್ ಪಕ್ಷದಲ್ಲಿ ಯಾವತ್ತಿನಂತೆ ಅತೃಪ್ತಿಯ ಹೊಗೆಯಾಡುತ್ತಿರುವುದು ಹೊಸ ವಿಷಯವೇನಲ್ಲ. ಪಕ್ಷದ ಅಧ್ಯಕ್ಷ ಗಾದಿ, ಮುಖ್ಯಮಂತ್ರಿಯಾಗುವುದಕ್ಕೆ ಸಾಲು ಸಾಲು ನಾಯಕರು ಸಿದ್ಧರಾಗಿದ್ದಾರೆ. ಮುಂದಿನ ವರ್ಷ ನಡೆಯುವ ಚುನಾವಣೆಯಲ್ಲಿ ಏನಾಗುತ್ತದೋ ನೋಡಬೇಕು. ಭಾಜಪ ಅಂತೂ ಕಾಂಗ್ರೆಸ್ ಮುಕ್ತ ದೇಶದ ಕನಸು ಕಾಣುತ್ತಿದೆ. ಮೋದಿ–ಷಾ ಜೋಡಿ ಅದಕ್ಕಾಗಿ ಪಣತೊಟ್ಟಿದೆ.

ಎಡಪಕ್ಷಗಳು ಪರ್ಯಾಯವಾಗುವ ಲಕ್ಷಣಗಳೇನೂ ಇಲ್ಲದ ಈ ರಾಜ್ಯದಲ್ಲಿ ಕಾಂಗ್ರೆಸ್, ಭಾಜಪ, ಜೆಡಿಎಸ್‌ಗಳದ್ದೇ ಕಸರತ್ತು ಅಧಿಕಾರಕ್ಕೆ. ಮೂರೂ ಪಕ್ಷಗಳಲ್ಲಿ ಗುಂಪುಗಾರಿಕೆ ಅಸಮಾಧಾನ ತುಂಬಿ ತುಳುಕಾಡುತ್ತಿದೆ. ಉಪಚುನಾವಣೆಗಳಲ್ಲಿ ಜಯಗಳಿಸಿದ ಮಾತ್ರಕ್ಕೆ ಕಾಂಗ್ರೆಸ್ಸಿಗೇ ಅಧಿಕಾರ ಎಂದು ಬೀಗುವಂತಿಲ್ಲ. ಪಕ್ಷದ ಹೈಕಮಾಂಡ್‌ನಲ್ಲೇ ಎಲ್ಲವೂ ಸರಿಯಾಗಿಲ್ಲ. ಕರ್ನಾಟಕದ ಉಸ್ತುವಾರಿಗೆ ಬೇರೊಬ್ಬರು ನೇಮಕಗೊಂಡಿದ್ದಾರೆ. ಈತ ಏನೇನು ತೇಪೆ ಹಾಕುತ್ತಾರೊ ನೋಡಬೇಕು. ಭಾಜಪದಲ್ಲಿ ಈಶ್ವರಪ್ಪ ಗುಂಪು ಯಡಿಯೂರಪ್ಪ ಗುಂಪಿನ ಮಧ್ಯೆ ಹಣಾಹಣಿ ಮುಂದುವರಿದಿದೆ. ವರಿಷ್ಠರು ಹಾಕಿದ ಹೊಲಿಗೆ ಮತ್ತೆ ಹರಿಯುತ್ತಿದೆ. ಮುಖ್ಯಮಂತ್ರಿ ಕನಸು ಕಾಣುತ್ತಿರುವವರ ಪಟ್ಟಿ ಬೆಳೆಯುತ್ತಲೇ ಇದೆ. ಕುಮಾರಸ್ವಾಮಿ, ಯಡಿಯೂರಪ್ಪ, ಈಶ್ವರಪ್ಪ, ಕಾಂಗ್ರೆಸ್ಸಿಗರು ಹೀಗೆ ನಾಲ್ಕಾರು ಜನ ಹಂಬಲಿಸುತ್ತಿದ್ದಾರೆ. ರಾಜ್ಯ ಈ ಎಲ್ಲರ ಆಡಳಿತ ವೈಖರಿಯನ್ನು ಸವಿದಿದೆ. ಒಬ್ಬರನ್ನು ಮೀರಿಸಿ ಇನ್ನೊಬ್ಬರು ಭ್ರಷ್ಟಾಚಾರ, ದುರಾಡಳಿತ, ಸಂದರ್ಭ ಸಾಧಕತನಕ್ಕೆ ಹೆಸರಾಗಿದ್ದಾರೆ. ಇದಕ್ಕೆಲ್ಲ ಮುಕ್ತಿ ಯಾವಾಗ ಎನ್ನುವುದೇ ಜನರ ಮುಂದಿರುವ ಪ್ರಶ್ನೆ. ಪ್ರಜಾಪ್ರಭುತ್ವದಲ್ಲಿ ವಿಶ್ವಾಸವಿರುವ ಜಾತ್ಯತೀತ ಪಕ್ಷಗಳೆಲ್ಲ ಚುನಾವಣೆಗೆ ಮುನ್ನವೇ ಒಂದುಗೂಡಿ ಚುನಾವಣೆ ಎದುರಿಸಿದರೆ ಭಾಜಪವನ್ನು ದೂರ ಇರಿಸುವುದು ಕಷ್ಟವೇನಲ್ಲ. ಆದರೆ ಕತ್ತಿಗೆ ಗಂಟೆ ಕಟ್ಟುವವರಾರು ಎನ್ನುವುದೇ ಮುಖ್ಯ. ಇನ್ನೂ ವರ್ಷ ಇದೆಯಲ್ಲ, ನೋಡೋಣ.

✳ ✳ ✳

ನ್ಯಾಯಾಂಗದಲ್ಲಿ ನಡೆಯುತ್ತಿರುವ ಜಟಾಪಟಿ ಅದರ ಘನತೆಗೆ, ಜನರು ಇರಿಸಿರುವ ವಿಶ್ವಾಸಕ್ಕೆ, ನಂಬಿಕೆಗೆ ತಕ್ಕುದಾಗಿಲ್ಲ. ಈಚಿನ ವರ್ಷಗಳಲ್ಲಿ ಜನಪರವಾದ ತೀರ್ಪುಗಳು ನ್ಯಾಯಾಲಯಗಳಿಂದ ಹೊರಬಿದ್ದಿರುವುದು ಅಪರೂಪವಾಗುತ್ತಿದೆ. ನ್ಯಾಯವಿತರಣೆಯಲ್ಲಿ ಆಗುತ್ತಿರುವ ವಿಳಂಬ ಗಾಬರಿ ಹುಟ್ಟಿಸುವಂಥದ್ದಾಗಿದೆ. ಐದು ವರ್ಷಗಳಾದ ಮೇಲೆ ನಿರ್ಭಯ ಪ್ರಕರಣದಲ್ಲಿ ಮರಣದಂಡನೆ ಶಿಕ್ಷೆ ಪ್ರಕಟವಾಗಿದೆ. ಇನ್ನು ಅಪರಾಧಿಗಳನ್ನು ನೇಣಿಗೇರಿಸಲು ಎಷ್ಟು ಕಾಲವಾದೀತೋ ! ಬಾಬರಿ ಮಸೀದಿ ಧ್ವಂಸ ಪ್ರಕರಣ ಇಪ್ಪತ್ತೈದು ವರ್ಷಗಳಷ್ಟು ಹಳೆಯದು. ಈಗ ಸರ್ವೋಚ್ಚ ನ್ಯಾಯಾಲಯ ಆರೋಪಿಗಳ ವಿಚಾರಣೆ ನಡೆಸಲು ಮ್ಯಾಜಿಸ್ಟ್ರೇಟ್ ಕೋರ್ಟಿಗೆ ಆದೇಶ ನೀಡಿದೆ. ಇನ್ನೂ ಈ ಆರೋಪಿಗಳಿಗೆ – ಎಲ್ಲರೂ ಪ್ರತಿಷ್ಠಿತರೆ – ಶಿಕ್ಷೆ ಯಾವಾಗ ಆಗುತ್ತದೋ ಕಾಯಬೇಕು. ಹಲವಾರು ಪ್ರಕರಣಗಳು ಹಾಗೆಯೇ ತೀರ್ಪು ಕಾಣದೆ ಸುಪ್ರೀಮ್ ಕೋರ್ಟಿನಲ್ಲಿ ಕೊಳೆಯುತ್ತಿವೆ. ಅವುಗಳ ಪೈಕಿ ತ್ರಿವಳಿ ತಲಾಖ್ ಕೂಡ ಒಂದು. ಅಡ್ಡಗೋಡೆಯ ಮೇಲೆ ದೀಪ ಇರಿಸುವ ತೀರ್ಪು ನೀಡುವುದು ನ್ಯಾಯಾಲಯಕ್ಕೆ ಹಿಂದಿನಿಂದ ಬಂದ ರೂಢಿ. ಅದೇ ಮುಂದುವರಿಯಬಹುದೇನೋ ವಿವಾದಾತ್ಮಕ ವಿಷಯಗಳಲ್ಲಿ.

*(೭ನೇ ಪುಟಕ್ಕೆ )*



ತಿಂಗಳ ಪತ್ರಿಕೆ

**ಹೊಸತು**

ನೆಮ್ಮದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ

ಸಂಪುಟ-೧೮ ಸಂಚಿಕೆ-೧೧ ಜೂನ್ ೨೦೧೭

■ ***ಗೌರವ ಸಂಪಾದಕ***

ಜಿ. ರಾಮಕೃಷ್ಣ

■ ***ಸಂಪಾದಕ-ಮುದ್ರಕ-ಪ್ರಕಾಶಕ***

ಸಿದ್ದನಗೌಡ ಪಾಟೀಲ

■ ***ಸಹಸಂಪಾದಕರು***

ಇಂದಿರಾ ಕುಮಾರಿ

ಸಿ. ಆರ್. ಕೃಷ್ಣರಾವ್

ಎನ್. ಗಾಯತ್ರಿ

ಎಸ್. ಸುರೇಂದ್ರ

■ ***ವ್ಯವಸ್ಥಾಪಕ***

ಎ. ರಮೇಶ ಉಡುಪ

■ ***ಮುದ್ರಣ***

**ಶ್ರೀ ವಿನಾಯಕ ಪ್ರಿಂಟರ್ಸ್**
೨೩೮/೧೧, ೬೦ನೇ ಅಡ್ಡರಸ್ತೆ
೫ನೇ ಬ್ಲಾಕ್, ರಾಜಾಜಿನಗರ
ಬೆಂಗಳೂರು - ೫೬೦ ೦೧೦

■ ***ಹೊಸತು ಕಚೇರಿಯ ವಿಳಾಸ***




**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ , ಅಂ. ಪೆ. ೫೧೫೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ : ೨೨೧೬೧೯೧೧, ೨೨೧೬೧೯೧೨
**e-mail : navakarnataka@gmail.com**
**hosathu@gmail.com**
**hosathu.nkp@gmail.com**
**URL : www.navakarnataka.com**
**http : //navakarnataka.blogspot.in**
**http : //hosathumonthly.blogspot.in**



# ಸಂಪಾದಕೀಯ

## ಶೈಕ್ಷಣಿಕ ಕ್ಷೇತ್ರದ ಗೊಂದಲಗಳು

ಕರ್ನಾಟಕ ಸರಕಾರ ಆರನೇ ತರಗತಿಯಿಂದ ಹತ್ತನೇ ತರಗತಿವರೆಗೆ ಇಂಗ್ಲಿಷ್ ಮಾಧ್ಯಮದಲ್ಲಿಯೂ ಕಲಿಕೆ ಆರಂಭಿಸುವ ಪ್ರಯೋಗಕ್ಕೆ ಮುಂದಾಗಿದೆ. ಹೈಸ್ಕೂಲ್ ಮಟ್ಟದಲ್ಲಿ ವಿದ್ಯಾರ್ಥಿಗಳನ್ನು ಸರಕಾರಿ ಶಾಲೆಗಳಲ್ಲಿಯೇ ಉಳಿಸಿಕೊಳ್ಳುವ ಸಲುವಾಗಿ ಈ ಪ್ರಯೋಗ ಎಂದು ಹೇಳಿಕೊಂಡಿದೆ. ವಾಸ್ತವದಲ್ಲಿ ಇಂಗ್ಲಿಷ್ ಒಂದು ಭಾಷೆಯಾಗಿ ಈಗಾಗಲೇ ಕಲಿಸಲ್ಪಡುತ್ತಿದೆ. ಆದರೆ ಇಂಗ್ಲಿಷ್ ಭಾಷೆಯ ಪರಿಣಾಮಕಾರಿ ಕಲಿಕೆಯ ಕೊರತೆ ಹಲವಾರು ಗೊಂದಲಗಳನ್ನು ಹುಟ್ಟುಹಾಕಿದೆ. ಖಾಸಗಿ ಶಾಲೆಗಳ ಪೈಪೋಟಿಯನ್ನು ಎದುರಿಸಲು ಇಂಗ್ಲಿಷ್ ಮಾಧ್ಯಮವನ್ನು ಆರಂಭಿಸುವುದಾಗಿ ಹೇಳಲಾಗಿದೆ. ಇಂಗ್ಲಿಷ್ ಒಂದು ಭಾಷೆಯನ್ನೇ ಪರಿಣಾಮಕಾರಿಯಾಗಿ ಕಲಿಸಲಾಗದವರು ಎಲ್ಲ ವಿಷಯಗಳನ್ನು ಅದ್ಹೇಗೆ ಆಂಗ್ಲ ಮಾಧ್ಯಮದಲ್ಲಿ ಕಲಿಸಲು ಸಾಧ್ಯ ಎನ್ನುವುದರ ಕುರಿತು ಗಂಭೀರವಾಗಿ ಯೋಚಿಸಬೇಕು. ಹಿಂದೆ ಇಂಗ್ಲಿಷ್‌ಅನ್ನು ಒಂದು ಭಾಷೆಯನ್ನಾಗಿ ಕಲಿತು ಉಳಿದ ವಿಷಯಗಳನ್ನು ಮಾತೃಭಾಷೆಯಲ್ಲಿಯೇ ಕಲಿತು ಅಪಾರ ಪಾಂಡಿತ್ಯ ಪಡೆದು ವಿಶ್ವವಿಖ್ಯಾತರಾದವರ ಸಂಖ್ಯೆ ನಮ್ಮ ದೇಶದಲ್ಲಿ, ರಾಜ್ಯದಲ್ಲಿ ಅಪಾರವಾಗಿದೆ. ವಿಷಯ ಗ್ರಹಿಕೆಯನ್ನು ಮಾಧ್ಯಮದಿಂದ ಅಳೆಯಲಾಗುವುದಿಲ್ಲ. ವಿಷಯ ಗ್ರಹಿಕೆಗೆ ಮಾತೃಭಾಷೆಯೇ ಅತ್ಯುತ್ತಮ ಮಾಧ್ಯಮ ಎಂದು ಸಾಬೀತಾದರೂ ಕಲಿಕಾ ಮಾಧ್ಯಮ ಕುರಿತು ಗೊಂದಲಗಳು ಪರಿಹಾರ ಕಂಡಿಲ್ಲ. ಸರಕಾರಗಳು, ಶಿಕ್ಷಣ ಇಲಾಖೆ ಮಾಧ್ಯಮಕ್ಕಿಂತ ಈಗಿರುವ ಶಿಕ್ಷಣದ ಕಲಿಕೆಯ ಗುಣಮಟ್ಟದ ಕುರಿತು ಗಂಭೀರವಾಗಿ ಯೋಚಿಸಬೇಕಿದೆ. ಒಂದೆಡೆ ಶಿಕ್ಷಣ ಕ್ಷೇತ್ರದಲ್ಲಿ ಇಂಗ್ಲಿಷ್ ಮಾಧ್ಯಮದ ದಾಳಿ, ಇನ್ನೊಂದೆಡೆ ಸಾರ್ವಜನಿಕ ಮತ್ತು ಆಡಳಿತಾತ್ಮಕ ಕ್ಷೇತ್ರದಲ್ಲಿ ಹಿಂದಿ ಭಾಷೆಯ ದಾಳಿ ವ್ಯಾಪಕವಾಗಿ ನಡೆದಿರುವ ಸಂದರ್ಭದಲ್ಲಿ ಪ್ರಾದೇಶಿಕ ಭಾಷೆ ಮತ್ತು ಸಂಸ್ಕೃತಿ ಅವನತಿಯತ್ತ ಸಾಗುತ್ತಿವೆ. ಇದು ಮುಂದೊಂದು ದಿನ ಭಾರತದ ಒಕ್ಕೂಟ ವ್ಯವಸ್ಥೆಗೆ ಅಪಾಯವನ್ನು ತರಲಿದೆ ಎನ್ನುವ ಸಂಗತಿಯನ್ನು ಸರಕಾರಗಳು ಮತ್ತು ಶಿಕ್ಷಣ ಇಲಾಖೆ ಗಂಭೀರವಾಗಿ ಗಮನಿಸಬೇಕು.

ಈ ಬಾರಿಯ ಹತ್ತನೇ ತರಗತಿ ಹಾಗೂ ಪಿ.ಯು.ಸಿ. ಫಲಿತಾಂಶಗಳನ್ನು ಗಮನಿಸಿದಾಗ ಆತಂಕವಾಗುತ್ತದೆ. ಕಳೆದ ಏಳು ವರ್ಷಗಳಲ್ಲಿ ಎಸ್.ಎಸ್.ಎಲ್.ಸಿ. ಫಲಿತಾಂಶ ಕುಸಿದಿದೆ ಎಂದು ಶಿಕ್ಷಣ ಇಲಾಖೆಯ ವರದಿಗಳು ಹೇಳುತ್ತವೆ. ದ್ವಿತೀಯ ಪಿ.ಯು.ಸಿ. ಫಲಿತಾಂಶ ಸಹ ಕಳೆದ ಆರು ವರ್ಷಗಳಿಗೆ ಹೋಲಿಸಿದರೆ ಕುಸಿತ ಕಂಡಿದೆ. ಪಿ.ಯು. ಪರೀಕ್ಷೆಯಲ್ಲಿ ೬,೭೯,೦೬೧ರಷ್ಟು ವಿದ್ಯಾರ್ಥಿಗಳು ಪರೀಕ್ಷೆ ಬರೆದರೆ ಉತ್ತೀರ್ಣರಾದವರು ೩,೫೫,೬೯೨ ಮಾತ್ರ. ಅಂದರೆ ತೇರ್ಗಡೆ ಪ್ರಮಾಣ ಪ್ರತಿಶತ ೫೨.೩೮. ಅಂದರೆ ಹತ್ತತ್ತಿರ ಅರ್ಧದಷ್ಟು ವಿದ್ಯಾರ್ಥಿಗಳು ಫೇಲ್ ಆಗಿದ್ದಾರೆ. ಮಾಧ್ಯಮ ಯಾವುದೇ ಇರಲಿ, ಇದು ನಮ್ಮ ಶಿಕ್ಷಣ ವ್ಯವಸ್ಥೆ ತಲುಪಿರುವ ಸ್ಥಿತಿಯನ್ನು ತೋರಿಸುತ್ತಿದೆ. ಅದರಲ್ಲೂ ಕಲಾವಿಭಾಗದಲ್ಲಿ ಪಾಸಾದವರು ಪ್ರತಿಶತ ೩೫.೦೫ ಮಾತ್ರ. ಸಾಮಾನ್ಯವಾಗಿ ಕಲಾ ವಿಭಾಗದ ವಿದ್ಯಾರ್ಥಿಗಳು ಅನುತ್ತೀರ್ಣಗೊಳ್ಳುವುದು ಇಂಗ್ಲಿಷ್ ವಿಷಯದಲ್ಲಿ. ಶಿಕ್ಷಣ ಸಾರ್ವತ್ರಿಕವಾಗುತ್ತಿರುವ ಸಂದರ್ಭದಲ್ಲಿಯೇ ಅದರ ಗುಣಮಟ್ಟ ಕುಸಿಯುತ್ತಿರುವುದನ್ನು ಗಮನಿಸಬೇಕು.

ಎಸ್.ಎಸ್.ಎಲ್.ಸಿ. ಮತ್ತು ಪಿ.ಯು.ಸಿ. ಪರೀಕ್ಷೆಗಳಲ್ಲಿ ವಿದ್ಯಾರ್ಥಿನಿಯರು ಮತ್ತು ಗ್ರಾಮೀಣ ಭಾಗದ ವಿದ್ಯಾರ್ಥಿಗಳು ಹೆಚ್ಚು ಪ್ರಮಾಣದಲ್ಲಿ ಉತ್ತೀರ್ಣರಾಗುತ್ತಿರುವುದು ಶೈಕ್ಷಣಿಕ ದೃಷ್ಟಿಕೋನದಿಂದ ಗಮನಾರ್ಹವಾದದ್ದು. ಖಾಸಗಿ ಶಿಕ್ಷಣ ಸಂಸ್ಥೆಗಳ ಜೊತೆ ಪೈಪೋಟಿಗೆ ಹೊರಟ ಸರಕಾರ ಎಸ್.ಎಸ್.ಎಲ್.ಸಿ. ಪರೀಕ್ಷೆಗಳಲ್ಲಿ ಶೂನ್ಯ ಸುತ್ತಿದ ಶಾಲೆಗಳ ಸಂಖ್ಯೆಗಳನ್ನು ಗಮನಿಸಬೇಕು. ೫ ಸರಕಾರಿ ಶಾಲೆಗಳು, ೪ ಅನುದಾನಿತ ಶಾಖೆಗಳು, ೫೧ ಖಾಸಗಿ ಶಾಲೆಗಳು ಶೂನ್ಯ ಫಲಿತಾಂಶ ಹೊಂದಿವೆ. ಜಿಲ್ಲಾವಾರು ಫಲಿತಾಂಶ ಗಮನಿಸಿದರೆ ವ್ಯತ್ಯಾಸ ಹೆಚ್ಚಿದೆ. ಮೊದಲ ಸ್ಥಾನದಲ್ಲಿರುವ ಉಡುಪಿ ಜಿಲ್ಲೆಗೂ ಕೊನೆ ಸ್ಥಾನದಲ್ಲಿರುವ ಬೀದರ ಜಿಲ್ಲೆಗೂ ನಡುವಿರುವ ವ್ಯತ್ಯಾಸ ಗಮನಿಸಿದರೆ ಶೈಕ್ಷಣಿಕವಾಗಿ ಹಿಂದುಳಿದ ಜಿಲ್ಲೆಗಳ ಕುರಿತು ವಿಶೇಷ ಕಾಳಜಿ ವಹಿಸುವ ಅವಶ್ಯಕತೆ ಇದೆ.

ಸಾಮಾನ್ಯವಾಗಿ ಫಲಿತಾಂಶಗಳು ಪ್ರಕಟವಾದಾಗ ಅತಿ ಹೆಚ್ಚು ಅಂಕ ಪಡೆದ ವಿದ್ಯಾರ್ಥಿಗಳ ಕುಟುಂಬದ ಹಿನ್ನೆಲೆ ಸಾಧಾರಣವಾಗಿರುತ್ತದೆ. ಕಷ್ಟಪಟ್ಟು ಅಧ್ಯಯನ ಮಾಡುವ ಇಂಥ ವಿದ್ಯಾರ್ಥಿಗಳು ಟ್ಯೂಶನ್ ಪಿಡುಗಿನಿಂದ ದೂರವಿದ್ದವರು ಎಂಬುದು ಸಮಾಧಾನಕರ ವಿಷಯ. ಕೂಲಿಕಾರರ ಮಕ್ಕಳು, ಕೂಲಿ ಮಾಡುವ ಮಕ್ಕಳು, ಬಡರೈತರ ಮಕ್ಕಳು, ಗ್ರಾಮಾಂತರ ಪ್ರದೇಶದ ಮಕ್ಕಳು ಈ ಟ್ಯೂಶನ್ ಕೃಪೆ ಇಲ್ಲದೆ ಕ್ಲಾಸ್ ರೂಮ್‌ನಲ್ಲಿ ಕೇಳಿದ ಪಾಠ, ಸ್ವಯಂ ಪರಿಶ್ರಮದ ಅಧ್ಯಯನ ಅವರ ಯಶಸ್ಸಿಗೆ ಕಾರಣವಾಗಿವೆ. ಈ ಬಾರಿಯ ಎಸ್.ಎಸ್.ಎಲ್.ಸಿ. ಹಾಗೂ ಪಿ.ಯು.ಸಿ. ಫಲಿತಾಂಶಗಳಲ್ಲಿ ಹೆಚ್ಚಿನ ಅಂಕ ಪಡೆದ ಬಹುತೇಕ ವಿದ್ಯಾರ್ಥಿ ವಿದ್ಯಾರ್ಥಿನಿಯರು ತಾವು ಟ್ಯೂಶನ್‌ಗೆ ಹೋಗದೇ ಅಂಥ ಸಾಧನೆ ಮಾಡಿದ್ದಾಗಿ ಹೇಳಿದ್ದಾರೆ. ಪರೀಕ್ಷಾ ಭಯ ಹುಟ್ಟಿಸಿ ವಿದ್ಯಾರ್ಥಿಗಳನ್ನು ಟ್ಯೂಶನ್ ಕ್ಲಾಸ್‌ಗೆ ಸೇರುವಂತೆ ಮಾಡುವ ವ್ಯವಸ್ಥಿತ ಮಾಫಿಯಾ ರಾಜ್ಯದಲ್ಲಿ ತುಂಬಿದೆ. ಮೊದ ಮೊದಲು ೫೦-೬೦ ವಿದ್ಯಾರ್ಥಿಗಳಿಗೆ ಟ್ಯೂಶನ್ ಹೇಳುತ್ತಿದ್ದವರು ಇಂದು ದೊಡ್ಡ ಕಾಲೇಜುಗಳನ್ನೇ ಆರಂಭಿಸಿದ್ದಾರೆ. ಲಕ್ಷಗಟ್ಟಲೆ ಫೀ ಪಡೆದು ಶಿಕ್ಷಣ ಕ್ಷೇತ್ರವನ್ನು ವ್ಯಾಪಾರಿವಲಯವಾಗಿಸಿದ್ದಾರೆ. ಪಾಲಕರು ತಮ್ಮ ಮಕ್ಕಳ ಬಾಲ್ಯವನ್ನೇ ಕಡೆಗಣಿಸಿ ಟ್ಯೂಶನ್ ಹಾವಳಿಗೆ ಬಲಿ ಕೊಡುತ್ತಿದ್ದಾರೆ. ಈ ಎಲ್ಲ ಶಿಕ್ಷಣ ಕ್ಷೇತ್ರದ ಪಿಡುಗುಗಳನ್ನು ತೊಡೆದು ಹಾಕಬೇಕಾದದ್ದು ಸರಕಾರಗಳ ಜವಾಬ್ದಾರಿ. ಕೇವಲ ಶಾಲಾ ಕಾಲೇಜುಗಳ ಕಟ್ಟಡಗಳಿಗೆ ಅನುದಾನ ಬಿಡುಗಡೆ, ಶಿಕ್ಷಕರ ನೇಮಕಾತಿ ಮಾಡಿದರೆ ಸಾಲದು. ಪರಿಣಾಮಕಾರಿಯಾದ ಶಿಕ್ಷಣದ ಮಾರ್ಗಗಳನ್ನು ಕಂಡುಕೊಳ್ಳಬೇಕು. ಒಂದೆಡೆ

ಕೂಲಿನಾಲಿ ಮಾಡಿ ರ್‍ಯಾಂಕ್ ಪಡೆವ ವಿದ್ಯಾರ್ಥಿಗಳು, ಇನ್ನೊಂದೆಡೆ ಪರೀಕ್ಷೆಗೆ ಕುಳಿತವರಲ್ಲಿ ಹೆಚ್ಚು ಕಡಿಮೆ ಅರ್ಧದಷ್ಟು ವಿದ್ಯಾರ್ಥಿಗಳು ಅನುತ್ತೀರ್ಣಗೊಳ್ಳುತ್ತಿರುವುದು ಅಸಮಂಜಸವಾದ ಬೆಳವಣಿಗೆ ಎನಿಸುತ್ತಿಲ್ಲವೆ ? ನಮ್ಮ ಶಿಕ್ಷಣ ಸಚಿವರು 'ಪರೀಕ್ಷೆಯಲ್ಲಿ ಕಠಿಣ ಸುಧಾರಣೆಗಳನ್ನು ತಂದಾಗ ಫಲಿತಾಂಶ ಕುಸಿಯುವುದು ಸಾಮಾನ್ಯ' ಎಂದು ಹೇಳಿದ್ದಾರೆ. ಶಿಕ್ಷಣ ಸಚಿವರ ಇಂಥ ಹೇಳಿಕೆ ಅವರ ಬೇಜವಾಬ್ದಾರಿತನವನ್ನು ತೋರಿಸುತ್ತದೆ. ಫಲಿತಾಂಶಗಳ ವಿಶ್ಲೇಷಣೆ ಮಾಡಿ ಕುಸಿತಕ್ಕೆ ಕಾರಣಗಳನ್ನು ಕಂಡುಕೊಂಡು ಶಿಕ್ಷಣದ ಗುಣಮಟ್ಟ ಹೆಚ್ಚಿಸುವತ್ತ ಗಮನ ಹರಿಸಬೇಕು.

ಹೂಡಿಕೆದಾರರ ಬಗೆಗೆ ವಹಿಸಿದಷ್ಟು ಕಾಳಜಿಯನ್ನು ನಮ್ಮ ಕೇಂದ್ರ ಸರಕಾರ ಶಿಕ್ಷಣದ ಬಗ್ಗೆ ವಹಿಸುತ್ತಿಲ್ಲ ಎನ್ನುವುದು ಇತ್ತೀಚೆಗೆ ಸಿ.ಬಿ.ಎಸ್.ಸಿ. ನಡೆಸಿದ ಪ್ರವೇಶ ಅರ್ಹತಾ (ನೀಟ್) ಪರೀಕ್ಷೆಗಳ ಅಧ್ವಾನಗಳಿಂದಲೇ ತಿಳಿಯುತ್ತದೆ. ಸರಕಾರಗಳ ಈ ಪ್ರವೃತ್ತಿ ಖಾಸಗಿ ಶಾಲಾ, ಕಾಲೇಜು, ವಿಶ್ವವಿದ್ಯಾಲಯಗಳ ಅಭಿವೃದ್ಧಿಗೆ ಪೂರಕವಾಗಿದೆ. ಶಿಕ್ಷಣವನ್ನು ನಿಧಾನವಾಗಿ ಸಾರ್ವಜನಿಕ ವಲಯದಿಂದ ಖಾಸಗಿವಲಯಕ್ಕೆ ಹಸ್ತಾಂತರಿಸುವ ಹುನ್ನಾರಗಳನ್ನು ವಿದ್ಯಾರ್ಥಿ ಸಮುದಾಯ, ಪೋಷಕರು ಮತ್ತು ಶಿಕ್ಷಣ ತಜ್ಞರು ಅರ್ಥಮಾಡಿಕೊಂಡು ಸಾರ್ವತ್ರಿಕ, ಸಾರ್ವಜನಿಕ ಶಿಕ್ಷಣ ವ್ಯವಸ್ಥೆಯ ಪರವಾಗಿ ಧ್ವನಿ ಎತ್ತಬೇಕು.

ಸಿದ್ಧನಗೌಡ ಪಾಟೀಲ

## 'ನಿರ್ಭಯಾ' ತೀರ್ಪು – ಚಳುವಳಿ ಮತ್ತು ಕಾನೂನು ಹೋರಾಟ

೨೦೧೪ರ ಮಾರ್ಚ್ ೧೩ರಂದು ನಿರ್ಭಯ ಅತ್ಯಾಚಾರ ಮತ್ತು ಕೊಲೆ ಪ್ರಕರಣದ ನಾಲ್ವರು ತಪ್ಪಿತಸ್ಥರಿಗೆ ದೆಹಲಿಯ ಹೈಕೋರ್ಟ್ ನೀಡಿದ್ದ ಮರಣದಂಡನೆಯ ಶಿಕ್ಷೆಯನ್ನು ೨೦೧೭ರ ಮೇ ೫ರಂದು ಸುಪ್ರೀಂ ಕೋರ್ಟಿನ ದೀಪಕ್ ಮಿಶ್ರಾ ನೇತೃತ್ವದ ಪೀಠ ಎತ್ತಿ ಹಿಡಿಯುವುದರ ಮೂಲಕ ಅತ್ಯಾಚಾರ ಅಪರಾಧಕ್ಕೆ ಗಲ್ಲು ಶಿಕ್ಷೆ ಕೊಟ್ಟ ಮೊದಲ ಪ್ರಕರಣವಾಗಿ ಚರಿತ್ರೆಯನ್ನು ನಿರ್ಮಿಸಿದೆ. 'ಮಾನವೀಯತೆಗೆ ಬೆಲೆಯೇ ಇಲ್ಲದ ಬೇರೊಂದು ಜಗತ್ತಿನಲ್ಲಿ ಈ ಪ್ರಕರಣ ನಡೆದಿದೆ ಎಂಬಂತೆ ತೋರುತ್ತಿದೆ' ಎಂಬ ತೀರ್ಪಿನ ಹೇಳಿಕೆಯು ಈ ಪ್ರಕರಣದ ರೌದ್ರತೆಯನ್ನು ಪರಿಚಯಿಸುವುದಲ್ಲದೆ, ಅದು ಹೇಗೆ ಸಾಮಾಜಿಕ ವಿಶ್ವಾಸವನ್ನು ಧ್ವಂಸಗೊಳಿಸಿದೆ ಎಂಬುದನ್ನು ಗುರುತಿಸಿದೆ. ಮರಣದಂಡನೆಯ ಶಿಕ್ಷೆಯು ಅತ್ಯಾಚಾರಕ್ಕೆ ಮದ್ದಲ್ಲ, ಎಂಬುದನ್ನು ಒಪ್ಪುವ ಮಹಿಳಾವಾದಿಗಳೂ ಕೂಡ ಈ ಕೃತ್ಯದ ಭಯಾನಕತೆಯ ಹಿನ್ನೆಲೆಯಲ್ಲಿ ಸುಪ್ರೀಂ ಕೋರ್ಟಿನ ಈ ತೀರ್ಪನ್ನು ಸ್ವಾಗತಿಸಿದ್ದಾರೆ. ಸಂತ್ರಸ್ತೆಯ ನೊಂದ ತಾಯಿ ತಂದೆಯರೂ ಈ ತೀರ್ಪಿಗೆ ತಮ್ಮ ಸಮಾಧಾನ ವ್ಯಕ್ತಪಡಿಸಿದ್ದಾರೆ.

ಮಹಿಳೆಯರ ವಿರುದ್ಧ ಹೆಚ್ಚುತ್ತಿರುವ ದೌರ್ಜನ್ಯ ತಡೆಗೆ ಜನರ ಚಿಂತನಾ ಕ್ರಮವೇ ಬದಲಾಗಬೇಕಾದ ಅಗತ್ಯ ಇದೆ. ಲಿಂಗತ್ವ ನ್ಯಾಯದ ಹೋರಾಟದಲ್ಲಿ ಜಯ ಗಳಿಸಲು ಕಠಿಣ ಕಾನೂನು ಮತ್ತು ಶಿಕ್ಷೆ ಮಾತ್ರ ಸಾಕಾಗದು ಎಂದು ನಿರ್ಭಯಾ ಅಪರಾಧಿಗಳ ಮರಣ ದಂಡನೆ ಎತ್ತಿ ಹಿಡಿದ ಸುಪ್ರೀಂ ಕೋರ್ಟ್ ನ್ಯಾಯಪೀಠ ಹೇಳಿತು. ಹಾಗೆಯೇ ಸರ್ಕಾರಕ್ಕೆ ಕೆಲವೊಂದು ಕಿವಿ ಮಾತುಗಳನ್ನೂ ಹೇಳಿದೆ: ಸಾರ್ವಜನಿಕ ಸಾರಿಗೆ ವಾಹನಗಳಲ್ಲಿ ಲಿಂಗ ಸಮಾನತೆಯ ಜಾಗೃತಿಗಾಗಿ ಫಲಕ ಅಳವಡಿಸಬೇಕು, ಬೀದಿ ದೀಪಗಳನ್ನು ಅಳವಡಿಸಿ, ಬಸ್ ನಿಲ್ದಾಣಗಳಲ್ಲಿ ಸಾಕಷ್ಟು ಬೆಳಕು ಇರುವಂತೆ ನೋಡಿಕೊಳ್ಳಬೇಕು, ಉದ್ಯಾನಗಳು ಮತ್ತು ಬೀದಿಗಳಲ್ಲಿ ಪೊಲೀಸ್ ಮತ್ತು ಭದ್ರತಾ ಸಿಬ್ಬಂದಿ ನಿಯೋಜಿಸಬೇಕು ಮತ್ತು ಮಹಿಳೆಯರ ತುರ್ತು ನೆರವಿಗೆ ಮೊಬೈಲ್ ಆ್ಯಪ್ ಅಭಿವೃದ್ಧಿ ಪಡಿಸಬೇಕು, ಎಂಬಂತಹ ಸಲಹೆಗಳನ್ನು ಸುಪ್ರೀಂ ಕೋರ್ಟ್ ನೀಡಿದೆ. ಅಲ್ಲದೆ, ಲಿಂಗತ್ವ ಸಮಾನತೆಯನ್ನು ಕಲಿಕಾ ವಿಷಯವಾಗಿ ಪಠ್ಯಕ್ಕೆ ಸೇರಿಸಬೇಕೆಂದು ನ್ಯಾಯಮೂರ್ತಿ ಆರ್. ಭಾನುಮತಿ ಹೇಳಿದ್ದಾರೆ. ಪ್ರಕರಣ ನಡೆದ ಐದು ವರ್ಷ ಐದು ತಿಂಗಳಲ್ಲಿ ಅಂತಿಮ ತೀರ್ಪು ಹೊರಬಿದ್ದ ಈ ಪ್ರಸಂಗ ಏಕವ್ಯಕ್ತಿ ಪ್ರಕರಣವಾಗಿ ಉಳಿಯದೆ ಮಹಿಳಾ ಚಳುವಳಿಯ ಇತಿಹಾಸದಲ್ಲಿ ಮೈಲಿಗಲ್ಲಾಗಿ ಮಹಿಳಾ ಪ್ರಶ್ನೆಯ ಹಲವಾರು ಪ್ರಶ್ನೆಗಳು ಚರ್ಚೆಗೆ ಬರುವುದಕ್ಕೆ ವೇದಿಕೆಯನ್ನು ಸೃಷ್ಟಿಸಿತು. ೧೯೭೨ರಲ್ಲಿ ನಡೆದ ಮಥುರಾ ಪ್ರಕರಣವು ಭಾರತದ ಕ್ರಿಮಿನಲ್ ಕಾನೂನಿನ ಇತಿಹಾಸಕ್ಕೆ ತಿದ್ದುಪಡಿ ತಂದು ೧೯೮೩ರ ಕ್ರಿಮಿನಲ್ ಲಾ ಆ್ಯಕ್ಟ್‌ಗೆ ಕಾರಣವಾದಂತೆ, ನಿರ್ಭಯಾ ಪ್ರಕರಣದ ತೀರ್ಪು ಹೆಣ್ಣಿನ ಮೇಲಿನ ದೌರ್ಜನ್ಯದ ವ್ಯಾಖ್ಯೆಯನ್ನು ವಿಸ್ತರಿಸಿತು. ಬಾಲ ನ್ಯಾಯ ಕಾಯ್ದೆಗೂ ತಿದ್ದುಪಡಿಯನ್ನು ತಂದು ೧೬–೧೮ ವರ್ಷದ ಬಾಲಕರು ಹೀನಕೃತ್ಯಗಳನ್ನು ಎಸಗಿದರೆ ಅವರನ್ನು ಭಾರತೀಯ ದಂಡ ಸಂಹಿತೆಯಡಿಯಲ್ಲಿಯೇ ವಿಚಾರಣೆ ನಡೆಸುವಂತೆ ತಿದ್ದುಪಡಿಯನ್ನು ತರಲಾಯಿತು.

೨೦೧೨ರ ಡಿಸೆಂಬರ್ ೧೬ರಂದು ದೆಹಲಿಯಲ್ಲಿ ನಡೆದ ನಿರ್ಭಯಾಳ ಮೇಲಿನ ಅತ್ಯಾಚಾರ ಪ್ರಕರಣದ ನಂತರದಲ್ಲಿ ಅದು ಬೀರಿದ ಪ್ರಭಾವ ಮತ್ತು ಪರಿಣಾಮ ಅಗಾಧವಾದದ್ದು. ಇದು ಸಾಕಷ್ಟು ಕಾನೂನಾತ್ಮಕ ಬದಲಾವಣೆಗಳನ್ನು ತರುವುದರ ಜೊತೆಗೆ ಸಮಾಜದಲ್ಲಿ ನಡೆಯುತ್ತಿರುವ ಲೈಂಗಿಕ ಹಿಂಸೆಯನ್ನು ಕುರಿತಂತೆ ಸಮಾಜದ ಗ್ರಹಿಕೆಯ ದಿಕ್ಕನ್ನು ಬದಲಾಯಿಸಿತು. ಮೊದಲ ಬಾರಿಗೆ ಇಂತಹ ಪ್ರಕರಣವನ್ನು ಇಡೀ ರಾಷ್ಟ್ರ ಎದ್ದು ನಿಂತು ಪ್ರತಿಭಟಿಸಿತು. ಲೈಂಗಿಕ ಹಿಂಸೆಯನ್ನು ಕುರಿತಂತೆ ಕಾನೂನು ಮತ್ತು ಪೊಲೀಸ್ ಸುಧಾರಣೆ ಬೇಕೆಂದು ಕೇಳಿದವರು ಕೇವಲ ಸ್ತ್ರೀವಾದಿಗಳು ಮಾತ್ರವಾಗದೆ, ಅದು ಎಲ್ಲಾ ಪ್ರಜ್ಞಾವಂತರ ಕೋರಿಕೆಯಾಗಿತ್ತು. ಕಾಮುಕರ ಕ್ರೌರ್ಯಕ್ಕೆ ಬಲಿಯಾದ ಹೆಣ್ಣಿನ ಮೇಲೆ ನಡೆದ ಪಶುತ್ವದ ರೌದ್ರ ನರ್ತನ ದೇಶದ ಉದ್ದಗಲಕ್ಕೂ ಜನಸಾಮಾನ್ಯರು ಮಿಡಿಯುವಂತೆ ಮಾಡಿತು. ನಾಗರಿಕ ಸಮಾಜದ ಜನಸಾಮಾನ್ಯರು ಈ ಸಾಮೂಹಿಕ ಅತ್ಯಾಚಾರವನ್ನು ಪ್ರತಿಭಟಿಸಲು ಬೀದಿಗಿಳಿದಿದ್ದರು. ಡಿಸೆಂಬರ್ ೨೧ರಂದು ದೆಹಲಿಯ ರೈಸಿನಾ ಹಿಲ್ ಮತ್ತು



ತಿಂಗಳ ಪತ್ರಿಕೆ
ಹೊಸತು
ನೆಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ

■ ಸಮಾಲೋಚಕ ಮಂಡಲಿ

ಟಿ. ಆರ್. ಅನಂತರಾಮು
ಎಚ್. ಎಸ್. ಗೋಪಾಲ ರಾವ್
ಸಿ. ಆರ್. ಚಂದ್ರಶೇಖರ್
ವಿ. ಚಂದ್ರಶೇಖರ ನಂಗಲಿ
ಜಿ. ನಾಗಕುಮಾರ್
ನೇಮಿಚಂದ್ರ,
ಪ್ರಕಾಶ್ ಸಿ. ರಾವ್
ಬರಗೂರು ರಾಮಚಂದ್ರಪ್ಪ
ಕೆ. ಮರುಳಸಿದ್ದಪ್ಪ
ಮುರಳಿಧರ್
ವಿಜಯಾ
ಎಲ್. ಹನುಮಂತಯ್ಯ

■ ಚಂದಾ ವಿವರಗಳು

| | |
|---|---|
| ಬಿಡಿ ಸಂಚಿಕೆ | ₹ ೨೦/- |
| ವಾರ್ಷಿಕ ಚಂದಾ | ₹ ೨೫೦/- |
| ಮೂರು ವರ್ಷಕ್ಕೆ | ₹ ೫೦೦/- |

■ ನವಕರ್ನಾಟಕ ಶಾಖೆಗಳು

೫ನೇ ಮುಖ್ಯ ರಸ್ತೆ , ಗಾಂಧಿನಗರ
ಬೆಂಗಳೂರು – ೫೬೦ ೦೦೯
✆ : ೦೮೦-೨೨೨೫೧೩೮೨

ಕೆಂಪೇಗೌಡ ರಸ್ತೆ
ಬೆಂಗಳೂರು – ೫೬೦ ೦೦೯
✆ : ೦೮೦-೨೨೨೦೩೧೦೬

ಕೆ. ಎಸ್. ಆರ್. ರಸ್ತೆ
ಮಂಗಳೂರು – ೫೭೫ ೦೦೧
✆ : ೦೮೨೪-೨೪೪೧೦೦೬

ಶರಾವತಿ ಕಟ್ಟಡ, ಬಲ್ಮಠ
ಮಂಗಳೂರು – ೫೭೫ ೦೦೧
✆ : ೦೮೨೪-೨೪೨೫೧೬೧

ರಾಮಸ್ವಾಮಿ ವೃತ್ತ
ಮೈಸೂರು – ೫೭೦ ೦೨೪
✆ : ೦೮೨೧-೨೪೨೪೦೯೪

ಸ್ಟೇಷನ್ ರಸ್ತೆ
ಕಲಬುರಗಿ – ೫೮೫ ೧೦೨
✆ : ೦೮೪೭೨-೨೨೪೩೦೨

ಜಂತರ್‌ಮಂತರ್‌ನಲ್ಲಿ ನಡೆದ ಬೃಹತ್ ಪ್ರತಿಭಟನೆಯಲ್ಲಿ ಸಾವಿರಾರು ಮಂದಿ ಪೊಲೀಸರೊಂದಿಗೆ ಹೊಡೆದಾಟಕ್ಕೆ ಇಳಿದರು. ಈ ಪ್ರತಿಭಟನೆಯ ಧ್ವನಿ ಕೊಲ್ಕತ್ತಾ, ಮುಂಬೈ, ಬೆಂಗಳೂರು ಮುಂತಾದ ಪ್ರಮುಖ ನಗರಗಳಲ್ಲೂ ಪ್ರತಿಧ್ವನಿಸಿತು. ಇಲ್ಲೆಲ್ಲಾ ಬೃಹತ್ ಪ್ರತಿಭಟನೆಗಳು ನಡೆದವು. ಆನ್‌ಲೈನ್‌ನಲ್ಲಿ ಸಹಿ ಮಾಡಿ ಸಾವಿರಾರು ಜನರು ಪ್ರತಿಭಟಿಸಿದರು. ಹಿಂದೆಂದೂ ನಡೆದಿರದಂತಹ ಸಾರ್ವಜನಿಕ ಪ್ರತಿಭಟನೆ ಈ ಸಂದರ್ಭದಲ್ಲಿ ಮೂಡಿಬಂತು. ಮಾಧ್ಯಮ ಮತ್ತು ಸಾಮಾಜಿಕ ಜಾಲತಾಣಗಳು ಜನಾಭಿಪ್ರಾಯ ರೂಪಿಸಲು ಮತ್ತು ಸರ್ಕಾರದ ಮೇಲೆ ಒತ್ತಡ ತರುವ ಪ್ರಯತ್ನ ಮಾಡಿದವು.

ಭಾರತ ಸರ್ಕಾರ ೨೦೧೨ರ ಡಿಸೆಂಬರ್ ೨೨ರಂದು ನ್ಯಾಯಾಧೀಶ ವರ್ಮಾ ಸಮಿತಿಯನ್ನು ನೇಮಕ ಮಾಡಿತು. ಈ ಸಮಿತಿಯ ನೇತೃತ್ವವನ್ನು ಭಾರತದ ಮಾಜಿ ಉಚ್ಚ ನ್ಯಾಯಾಧೀಶರಾದ ನ್ಯಾಯವಾದಿ ಜೆ. ಎಸ್. ವರ್ಮಾ ವಹಿಸಿದ್ದರು. ಜಸ್ಟಿಸ್ ಲೀಲಾ ಸೇಠ್ ಮತ್ತು ಗೋಪಾಲ ಸುಬ್ರಮಣಿಯಂ ಈ ಸಮಿತಿಯ ಸದಸ್ಯರಾಗಿದ್ದರು. ಲೈಂಗಿಕ ಹಿಂಸೆಯನ್ನು ಕುರಿತಂತೆ ಚಾಲ್ತಿಯಲ್ಲಿರುವ ಕ್ರಿಮಿನಲ್ ಕಾನೂನಿಗೆ ತಿದ್ದುಪಡಿಯನ್ನು ಸೂಚಿಸುವ ವರದಿಯನ್ನು ೩೦ ದಿನಗಳೊಳಗೆ ಸಲ್ಲಿಸಲು ಇವರನ್ನು ಕೋರಲಾಯಿತು. ಈ ಮುಂಚೆಯೂ ಲೈಂಗಿಕ ದೌರ್ಜನ್ಯವನ್ನು ಕುರಿತಂತೆ ಕಾನೂನು ರೂಪಿಸಲು ಹಲವಾರು ಸಮಿತಿಗಳು ನೇಮಕವಾಗಿದ್ದರೂ ಈ ಸಮಿತಿ ಅವೆಲ್ಲಕ್ಕಿಂತ ಭಿನ್ನವೂ, ವಿಶಿಷ್ಟವೂ ಆಗಿತ್ತು. ಮೊದಲ ಬಾರಿಗೆ ಇದೊಂದು ಎಲ್ಲರಿಗೂ ತೆರೆದುಕೊಂಡ ಸಮಿತಿಯಾಗಿತ್ತು. ಅದು ಆರಂಭವಾದ ದಿನದಿಂದ ನಾಗರಿಕ ಸಮಾಜದ ಮನ್ನಣೆಯನ್ನು ಪಡೆಯಿತು. ಕಾನೂನು ವೃತ್ತಿಪರರು, ಸರ್ಕಾರೇತರ ಸಂಘಟನೆಗಳು ಮತ್ತು ಮಹಿಳಾ ಗುಂಪುಗಳನ್ನು ಅವರ ಅಭಿಪ್ರಾಯ, ಜ್ಞಾನ, ತಿಳುವಳಿಕೆ, ಅನುಭವಗಳನ್ನು ಹಂಚಿಕೊಂಡು ಕ್ರಿಮಿನಲ್ ಕಾನೂನಿಗೆ ಅಳವಡಿಸಬಹುದಾದ ತಿದ್ದುಪಡಿಗಳನ್ನು ಸೂಚಿಸಲು ಕೋರಲಾಯಿತು. ಇದರ ಫಲವಾಗಿ ಜನಸಾಮಾನ್ಯರಿಂದ ಮತ್ತು ಮಹಿಳಾ ಸಂಘಟನೆಗಳಿಂದ ೬೦೦೦ಕ್ಕೂ ಹೆಚ್ಚು ಇ–ಮೇಲ್‌ಗಳ ಮೂಲಕ ಸಲಹೆಗಳು ಹರಿದುಬಂದವು. ಅವನ್ನೆಲ್ಲಾ ಕ್ರೋಡೀಕರಿಸಿ, ವಿಶ್ಲೇಷಿಸಿ ಸೃಷ್ಟಿಯಾದ ನ್ಯಾಯಮೂರ್ತಿ ವರ್ಮಾ ಸಮಿತಿ ವರದಿಯು ಭಾರತೀಯ ರಾಜಕೀಯ ಇತಿಹಾಸದಲ್ಲಿಯೇ ಒಂದು ಇತಿಹಾಸವನ್ನು ಸೃಷ್ಟಿಸಿತು. ಮಹಿಳಾ ಚಳುವಳಿ ಚರ್ಚಿಸುತ್ತಿದ್ದ ಹಲವಾರು ಪ್ರಶ್ನೆಗಳನ್ನು ಈ ಸಮಿತಿ ಗಂಭೀರವಾಗಿ ಪರಿಗಣಿಸಿತು. ಅತ್ಯಾಚಾರಕ್ಕೆ ಬಲಿಪಶುವಾದವರಿಗೆ ಸಂಬಂಧಪಟ್ಟಂತೆ 'ಲಜ್ಜೆ' ಮತ್ತು 'ಮರ್ಯಾದೆ'ಯೆಂಬ ಪದಸಂಪತ್ತನ್ನು ಪುನರ್‌ರಚಿಸುವ ಕಾರ್ಯವನ್ನು ಮಾಡಬೇಕಾದ್ದು ಸಮಾಜ ಮತ್ತು ಸರ್ಕಾರ ಎನ್ನುವ ವಿಶ್ಲೇಷಣೆಯನ್ನು ನೀಡಿದ್ದಲ್ಲದೆ, ಇಂಡಿಯನ್ ಪೀನಲ್ ಕೋಡ್‌ನಡಿ ಅತ್ಯಾಚಾರವೆನ್ನುವುದು ಇತರ ಯಾವುದೇ ಅಪರಾಧದಂತೆ ಭಾವಿಸಬೇಕು. 'ಲಜ್ಜೆ–ಮರ್ಯಾದೆ' ಎಂಬ ಸೂತ್ರಕ್ಕೆ ಕಟ್ಟುಬೀಳದೆ, ಹೆಣ್ಣಿನ ಲೈಂಗಿಕ ಸ್ವಾಯತ್ತತೆಯನ್ನು ಕೇಂದ್ರೀಕರಿಸಿರುವ ಸಂಕಥನವಾಗಿರುವುದು ಈ ವರದಿಯ ದಿಟ್ಟ ನಿಲುವಾಗಿದೆ. ಗಂಡು ಮಕ್ಕಳಿಗಾಗಿ ಆಶಿಸುತ್ತಾ ಹೆಣ್ಣು ಭ್ರೂಣಹತ್ಯೆಯಲ್ಲಿ ತೊಡಗುವ ಕೌಟುಂಬಿಕ ಹಿಂಸೆಯ ವಿಸ್ತರಣೆಯೇ ದೊಡ್ಡ ಪ್ರಮಾಣದಲ್ಲಿ ಲೈಂಗಿಕ ಹಿಂಸೆಯಾಗಿ ನಡೆದಾಗ 'ಅತ್ಯಾಚಾರ'ವಾಗಿಬಿಡುತ್ತದೆ, ಎನ್ನುವ ಒಳನೋಟಗಳನ್ನು ಈ ವರದಿ ಒಳಗೊಂಡಿತ್ತು. 'ಅತ್ಯಾಚಾರ'ದ ವ್ಯಾಖ್ಯಾನದೊಳಗೆ ವಿವಾಹದೊಳಗಿನ ಅತ್ಯಾಚಾರವನ್ನು ತರುವ ಮೂಲಕ ಪಿತೃಪ್ರಾಧಾನ್ಯತೆಯ ಮೂಲಸತ್ವಕ್ಕೆ ಪೆಟ್ಟು ಕೊಟ್ಟಿತು. ಲೈಂಗಿಕ ಅಲ್ಪಸಂಖ್ಯಾತರ ಬವಣೆಯನ್ನು ಈ ವರದಿ ಪರಿಗಣಿಸಿತು.

ಜಸ್ಟಿಸ್ ವರ್ಮಾ ಸಮಿತಿಯ ವರದಿಯಲ್ಲಿ ಕಾಣಿಸಿರುವ ಸತ್ಯಗಳು, ಚರ್ಚೆಗೊಳಗಾದ ವಿಷಯಗಳು, ನೀಡಿರುವ ಸಲಹೆ ಸೂಚನೆಗಳು ಕಾನೂನು ರಚನೆಕಾರರಿಗೆ ಮತ್ತು ಪಾಲಕರಿಗೆ, ನೀತಿ ನಿರೂಪಕರಿಗೆ ಮಾರ್ಗದರ್ಶಿ ಬೆಳಕಾಗಬೇಕಿದೆ. ಸುಪ್ರೀಂ ಕೋರ್ಟಿನ ತೀರ್ಪಿನಲ್ಲಿ ಹೇಳಿರುವಂತೆ ಲಿಂಗತ್ವ ನ್ಯಾಯವು ಶಾಲಾ ಅಧ್ಯಯನದ ಪಠ್ಯವೂ ಆಗಿ ಸಾಮಾಜಿಕ ಜಾಗೃತಿಯ ವಿಷಯವಾದರೆ, ಅತ್ಯಾಚಾರವು ಮಹಿಳೆಯರಿಗೆ ಸಂಬಂಧಿಸಿದ ವಿಚಾರ ಮಾತ್ರವಾಗದೆ, ಮಾನವ ಹಕ್ಕುಗಳ ವಿಚಾರ ಎಂದೆನಿಸಿಕೊಳ್ಳುತ್ತದೆ.

ಗಾಯತ್ರಿ . ಎನ್.




# ಇಂಕ್ವಿಲಾಬ್ ಜಿಂದಾಬಾದ್

ನಾಲ್ಕು ದಿಕ್ಕೂ ಚರ್ಮದ ಗೋಡೆ,
ಎಲುಬಿನ ಕಂಬಿ, ಪರಕೀಯರೆಸೆದ
ಹುಕುಮಿನ ಚಾಟಿ, ಸತ್ತ ಹಾಗೆ ಮಲಗುವಂತೆ
ಜಬರಿಸಲು ತೂಗಾಡುವ ನೇಣು.
ಎಂದೋ ಹೂಳಿದ್ದಾರೆ ಗೋರಿಯಲ್ಲಿ
ಗೋಣನು ಮುರಿದು ನನ್ನನು ಈ ಸೆರೆಮನೆಯಲ್ಲಿ.
ಅಂದು ಅಂದುಕೊಂಡಿದ್ದೆ : ಇಂದು ನನ್ನ ಬಿಡುಗಡೆ.
ಹಾಗಾಗಲಿಲ್ಲ, ಮತ್ತೆ ಮತ್ತೆ ಕೊಲ್ಲುವುದಕೆಲ್ಲಿ ತಡೆ !
ಗೋರಿಯನ್ನಗೆದು ಸತ್ತಂಥ ನನ್ನನು
ಮತ್ತೆ ಎಚ್ಚರಿಸಿ ಸೆಳೆಯುತ್ತಿದ್ದಾರೆ ಗಲ್ಲಿಗೆ.
ಇವರಿಗೆ ಗೊತ್ತಿಲ್ಲದಿರಬಹುದು : ನಾಳೆಯ
ಈ ಹುತಾತ್ಮನೆದೆ ಗೋರಿಯ ಮೇಲುರಿವ
ಸ್ವಾತಂತ್ರ್ಯದ ಜ್ಯೋತಿಯು ಕೆಚ್ಚಿನ ಜ್ವಾಲೆಯಾಗಿ
ಸುಟ್ಟುಡುಗಲಿದೆ ಕೊಲ್ಲುವಾ ಗಲ್ಲು;
ಮುಟ್ಟಲಿದೆ ದಿಕ್ಕುದಿಕ್ಕಿಗೆ ಇದರ ಗುಲ್ಲು.
ಇಂಕ್ವಿಲಾಬ್
ಜಿಂದಾಬಾದ್
ಇಂಕ್ವಿಲಾಬ್
ಜಿಂದಾಬಾದ್

**ಸೋಮನಾಥ ಗೀತಯೋಗಿ**
ಮು/ಪೋ : ಸಾಲೋಟಗಿ, ಇಂಡಿ ತಾಲೂಕು, ವಿಜಯಪುರ ಜಿಲ್ಲೆ

*(ಈ ತಿಂಗಳು ೩ನೇ ಪುಟದಿಂದ)*

ನ್ಯಾಯಾಲಯಗಳ ನೇಮಕಾತಿ ವಿಚಾರದಲ್ಲಿ ಭಾಜಪ ಸರಕಾರ ತನ್ನದೇ ಆದ ನಿಲುವನ್ನು ಹೊಂದಿದೆ. ಅದನ್ನು ತನ್ನ ಸುಪರ್ದಿಗೆ ತೆಗೆದುಕೊಳ್ಳಲು ಮೋದಿ ಸರಕಾರ ಅಪೇಕ್ಷಿಸುತ್ತಿದೆ. ಕೊಲೀಜಿಯಮ್ ವ್ಯವಸ್ಥೆ ಮುಂದುವರಿಯುವುದಕ್ಕೆ ಸರಕಾರ ತಕರಾರು ಎತ್ತಿದೆ. ಹಾಗಾಗಿ ನ್ಯಾಯಾಧೀಶರುಗಳ ನೇಮಕಾತಿ ತಡ ವಾಗುತ್ತಿದೆ. ಸಾವಿರಾರು ವೇಕೆನ್ಸಿಗಳು ಭರ್ತಿಯಾಗಿಲ್ಲ, ಮೊದಲೇ ವಿಳಂಬ, ಅದರ ಮೇಲೆ ಕೊಸರು ಎಂಬಂತೆ ಇದು ಬೇರೆ. ಇಂಥ ಪರಿಸ್ಥಿತಿಯಲ್ಲಿ ಕಲ್ಕತ್ತಾ ಹೈಕೋರ್ಟಿನ ನ್ಯಾಯಮೂರ್ತಿ ಪ್ರಕರಣ ಬೀದಿ ಜಗಳದಂತೆ ಕಾಣುತ್ತಿರುವುದೀಗ ಬೇಸರದ ಸಂಗತಿ. ಇದರಲ್ಲಿ ಯಾರದು ತಪ್ಪು, ಯಾರದು ಸರಿ ಎಂದು ತೀರ್ಮಾನಿಸುವುದು ಸರಿಯಾಗದು. ಈಗ ನ್ಯಾಯಮೂರ್ತಿ ಕರ್ಣನ್‌ರನ್ನು ಸುಪ್ರೀಮ್ ಕೋರ್ಟು ಶಿಕ್ಷೆಗೆ ಗುರಿಪಡಿಸಿದೆ. ಆತನನ್ನು ಬಂಧಿಸಲು ಪೊಲೀಸರು ತಡಕಾಡುತ್ತಿದ್ದಾರೆ. ಇಷ್ಟೆಲ್ಲ ಹಗರಣ ಆಗಬೇಕಾಗಿತ್ತೇ ಎನ್ನುವುದೇ ಸಾರ್ವಜನಿಕರ ಮುಂದಿರುವ ಪ್ರಶ್ನೆ. ನ್ಯಾಯಮೂರ್ತಿಗಳೇ ಕಚ್ಚಾಡ ತೊಡಗಿದರೆ ಜನಸಾಮಾನ್ಯರ ಪಾಡೇನು ?

✳ ✳ ✳

ಒಂದು ಕಾಲದಲ್ಲಿ ಭ್ರಷ್ಟಾಚಾರದ ವಿರುದ್ಧ ಹೋರಾಟದಲ್ಲಿ ಮುಂಚೂಣಿಯಲ್ಲಿದ್ದ ಅರವಿಂದ ಕೇಜ್ರಿವಾಲ್ ಈಗ ಅವರೇ ಆರೋಪಿಯಾಗಿ ಕಾಣಿಸಿಕೊಳ್ಳುತ್ತಿದ್ದಾರೆ. ಭ್ರಷ್ಟಾಚಾರದ ಆರೋಪ ಅವರ ಮೇಲೆ ಹೊರಿಸಿರುವವರೂ ಅವರ ಆಮ್ ಆದ್ಮಿ ಪಾರ್ಟಿಯವರೇ. ಅಧಿಕಾರ ಕೈಗೆ ಸಿಕ್ಕಮೇಲೆ ಎಲ್ಲವೂ ಹಾಗೆಯೇ ಏನೋ ! ಆರೋಪದಲ್ಲಿ ಹುರುಳಿದೆಯೇ ಅಥವಾ ಅದು ಬೇರೆ ಪಕ್ಷಗಳ ಕುತಂತ್ರದ ಫಲವೋ ಎಂಬುದನ್ನು ಈಗಲೇ ಹೇಳಲಾಗುತ್ತಿಲ್ಲ. ಭ್ರಷ್ಟಾಚಾರ ವಿರುದ್ಧ ಹೋರಾಟ ನಡೆಸಲೆಂದೇ ಹುಟ್ಟಿಕೊಂಡ ಪಕ್ಷ 'ಆಆಪ'. ರಾಜಕೀಯ ಅಧಿಕಾರವಿಲ್ಲದೆ ಭ್ರಷ್ಟಾಚಾರ ತಡೆಯಲಾಗದು ಎಂದುಕೊಂಡೇ ಪಕ್ಷ ಕಟ್ಟಿ ದೆಹಲಿಯಲ್ಲಿ ಅಧಿಕಾರಕ್ಕೇರಿದರು ಕೇಜ್ರಿವಾಲ್. ದೆಹಲಿ ಆಡಳಿತ ಎಂದರೆ ಕೇಂದ್ರ ಸರಕಾರದ ಕೃಪೆಯಿಂದಲೇ ನಡೆಯುವಂಥದ್ದು. ಬೇರೆ ರಾಜ್ಯಗಳಿಗೆ ಇರುವ ಸ್ವಾತಂತ್ರ್ಯವೂ ಕೂಡ ಇಲ್ಲ ರಾಜಧಾನಿ ಸರಕಾರಕ್ಕೆ. ಎಲ್ಲವೂ ಕೇಂದ್ರದ ಏಜೆಂಟ್ ಲೆಫ್ಟಿನೆಂಟ್ ಗವರ್ನರ್ ಮೂಲಕವೇ ನಡೆಯಬೇಕು. ಇದು ಮುಖ್ಯಮಂತ್ರಿ ಕೇಜ್ರಿವಾಲ್‌ಗೂ ಚೆನ್ನಾಗಿ ಗೊತ್ತು. ಇದ್ದುದರಲ್ಲೇ ಜನಹಿತಕಾರ್ಯ ಕೈಗೊಳ್ಳಲು ಅವಕಾಶವಿದ್ದರೂ ಎರಡೂ ಅಧಿಕಾರ ಕೇಂದ್ರಗಳ ಮಧ್ಯೆ ಏರ್ಪಟ್ಟ ಕಂದರದಿಂದ ಯಾವುದೂ ಮುಂದುವರಿಯಲಿಲ್ಲ. ಆಆಪದ ಹುಟ್ಟೇ ಆಕಸ್ಮಿಕ. ಅದು ಅಖಿಲ ಭಾರತ ಪಕ್ಷವಾಗಿ ಮುಂದೆ ಬರಲು ಸಾಧ್ಯವೇ ಇರಲಿಲ್ಲ ಏಕವ್ಯಕ್ತಿ ಕೇಂದ್ರಿತವಾಗಿದ್ದುದರಿಂದ. ನಮ್ಮ ರಾಜಕೀಯ ವ್ಯವಸ್ಥೆಯಲ್ಲಿ ಈ ಪಕ್ಷ ಒಂದು ಪಾಸಿಂಗ್ ಫೇಸ್ ಏನೋ ಎನಿಸುತ್ತಿದೆ.

✳ ✳ ✳

ಕಳೆದ ಏಪ್ರಿಲ್ ೧೩ರಂದು ಅಮೆರಿಕ ಹನ್ನೊಂದು ಟನ್ ತೂಕದ ಬೃಹದಾಕಾರದ ಬಾಂಬು ಒಂದನ್ನು ಆಫ್ಘಾನಿಸ್ತಾನದ ನಂಗರ್‌ಹಾರ್ ಪ್ರಾಂತದ ಶಂಕಿತ ಇಸ್ಲಾಮಿಕ್ ಸ್ಟೇಟ್ ಉಗ್ರರ ತಾಣದ ಮೇಲೆ ಹಾಕಿತು. 'ಮದರ್ ಆಫ್ ಆಲ್ ಬಾಂಬ್ಸ್' ಎಂದು ಕರೆದ ಈ ಬಾಂಬು ದಾಳಿಯ ಪರಿಣಾಮ ಬೇರೆ ವಿಷಯ. ಆದರೆ, ಅಮೆರಿಕದ ದಾಳಿಕೋರ ಶಕ್ತಿಗೆ ಅದು ಉದಾಹರಣೆ. ಎರಡನೇ ಮಹಾಯುದ್ಧ ಮುಗಿದಾಗ ಪರಮಾಣು ಬಾಂಬು ದಾಳಿ ನಡೆಸಿದ ಅಮೆರಿಕ ಈಗ ಬೇಕೆಂದಾಗ, ಬೇಕಾದ ಕಡೆ ದಾಳಿ ನಡೆಸಬಲ್ಲೆ ಎಂಬುದನ್ನು ತೋರ್ಪಡಿಸಿದೆ ನಾನೇ 'ಜಗತ್ತಿನ ಪೊಲೀಸ್' ಎಂದು ಕೊಚ್ಚಿಕೊಳ್ಳಲು. ಡೊನಾಲ್ಡ್ ಟ್ರಂಪ್ ಅಧಿಕಾರಕ್ಕೇರುವ ಮುನ್ನ 'ಅಮೆರಿಕ ಫಾರ್ ಅಮೆರಿಕನ್ಸ್' ಎಂದು ಘೋಷಿಸಿ, ಎಲ್ಲ ತಕರಾರುಗಳಿಂದ ದೂರ ಇರುವ ಇಂಗಿತ ತೋರಿದ್ದರು. ಆದರೆ ಈಗ ಅಧಿಕಾರಕ್ಕೇರಿದ ಮೇಲೆ ಆಗುತ್ತಿರುವುದೇ ಬೇರೆ. ಸಿರಿಯಾದ ಮೇಲೆ ಬಾಂಬು ದಾಳಿ ನಡೆಸಿದ್ದು ನೆನಪು ಮಾಡಿಕೊಂಡರೆ ಸಾಕು. ಟ್ರಂಪ್ ಆಡಳಿತದಲ್ಲಿ ಮಿಲಿಟರಿ ಕೈಗಾರಿಕಾ ಸಂಕೀರ್ಣದ ಕೈವಾಡ ಎದ್ದುಕಾಣುತ್ತಿದೆ. ಅವರ ಸಂಪುಟದಲ್ಲಿ ಹಲವು ನಿವೃತ್ತ ಜನರಲ್‌ಗಳಿರುವುದೇ ಅದಕ್ಕೆ ಸಾಕ್ಷಿ. ಹಾಗೆಯೇ ಅವರು ಮಂಡಿಸಿರುವ ಮೊದಲ ಬಜೆಟ್‌ನಲ್ಲಿ ಸಿಂಹಪಾಲನ್ನು ರಕ್ಷಣಾ ಇಲಾಖೆಗೆ ನೀಡಿದ್ದಾರೆ. ಒಟ್ಟು ೬೩೯ ಬಿಲಿಯನ್ ಡಾಲರುಗಳನ್ನು ಮೀಸಲಾಗಿರಿಸಿದ್ದಾರೆ. ಇದು ೨೦೦೧ರಲ್ಲಿದ್ದುದಕ್ಕಿಂತ ದುಪ್ಪಟ್ಟು ಆಗಿದೆ. ಪ್ರಪಂಚದಲ್ಲಿ ಎಲ್ಲ ದೇಶಗಳೂ ರಕ್ಷಣೆಗಾಗಿ ಖರ್ಚು ಮಾಡುತ್ತಿರುವ ಮೊತ್ತ ೧೬೮೬ ಟ್ರಿಲಿಯನ್ ಡಾಲರುಗಳು ಎಂದು ಅಂದಾಜಿಸಲಾಗಿದೆ. ಇದರಲ್ಲಿ ಅಮೆರಿಕದ ಪಾಲು ಶೇಕಡ ೩೬ ಎಂದು ಹೇಳಲಾಗಿದೆ. ಯಾರೇ ಅಧಿಕಾರಕ್ಕೆ ಬಂದರೂ ಅಮೆರಿಕದಲ್ಲಿ ಮಿಲಿಟರಿ ಕೈಗಾರಿಕಾ ಸಮುಚ್ಚಯವನ್ನು ಎದುರುಹಾಕಿಕೊಳ್ಳಲು ಸಾಧ್ಯವಿಲ್ಲದಂಥ ಪರಿಸ್ಥಿತಿ ಇದೆ. ಅದಕ್ಕೆ ಉದಾಹರಣೆ ರಿಯಲ್ ಎಸ್ಟೇಟ್ ಉದ್ಯಮಿ ಡೊನಾಲ್ಡ್ ಟ್ರಂಪ್.

✳ ✳ ✳

ಕಳೆದೆರಡು ದಶಕಗಳಲ್ಲಿ ನಮ್ಮ ದೇಶವು ಪರೀಕ್ಷೆಗಳ ಸರಮಾಲೆಗಳಿಗೆ ಹೆಸರಾಗುತ್ತಾ ಬಂದಿದೆ. ಮಗು ಒಂದನೆಯ ತರಗತಿಗೆ ಪ್ರವೇಶ ಪಡೆಯಲು ಪರೀಕ್ಷೆಗೆ ಗುರಿಯಾಗುವ ಸಂದರ್ಭ ನಮ್ಮದು. ಯಾವುದೋ ಉದ್ಯೋಗದಲ್ಲಿ ನೆಲೆಗೊಳ್ಳುವ ವೇಳೆಗೆ ಆ ಮಗು ಏನಿಲ್ಲವೆಂದರೂ ೨೫–೩೦ ಪ್ರವೇಶ ಪರೀಕ್ಷೆಗಳಲ್ಲಿ ಪಾಲ್ಗೊಂಡಿರುತ್ತದೆ. ಪರೀಕ್ಷೆಗಳು ನಮ್ಮನ್ನು ನಾಶದತ್ತ ಕೊಂಡೊಯ್ಯುತ್ತಿವೆ. ವಿದ್ಯಾರ್ಥಿಗಳ ಘನತೆಗೆ ಚ್ಯುತಿ ತರುವಂತಹ ಅನೇಕ ಪರೀಕ್ಷೆಗಳು ದಿನಂಪ್ರತಿ ನಡೆಯುತ್ತಿವೆ. ಶಿಕ್ಷಣ ಕ್ಷೇತ್ರಕ್ಕೆ ಇದೊಂದು ಪಿಡುಗು.

ಇತ್ತೀಚೆಗಷ್ಟೆ ದೇಶವ್ಯಾಪಿಯಾಗಿ ನಮ್ಮಲ್ಲಿ "ನೀಟ್" ಪರೀಕ್ಷೆ ಜರುಗಿತು. ಅಖಿಲ ಭಾರತ ಮಟ್ಟದ ಪ್ರವೇಶ ಪರೀಕ್ಷೆ ಇದು. ಇಂಜಿನಿಯರಿಂಗ್, ಮೆಡಿಕಲ್, ಮುಂತಾದ ಉನ್ನತ ಶಿಕ್ಷಣ ಕ್ಷೇತ್ರಗಳಲ್ಲಿ ಅಧ್ಯಯನಕ್ಕೆ ಆಯ್ಕೆಗೊಳ್ಳಲು ಈ 'ನೀಟ್' ಪರೀಕ್ಷೆ ಬರೆಯುವುದು ಅನಿವಾರ್ಯ. ಆದರೆ ಪರೀಕ್ಷೆಯು ಅಪೇಕ್ಷಿತ ಮಟ್ಟದಲ್ಲಿ ನೀಟಾಗಂತೂ ನಡೆಯದಿದ್ದುದು ಇತ್ತೀಚಿನ ಒಂದು ಅನುಭವ. ಪರೀಕ್ಷೆಗಳ ಮಹಾಪೂರದಲ್ಲಿ ಈ 'ನೀಟ್'ಗೆ ಒಂದು ಅನನ್ಯ ಸ್ಥಾನ ನೀಡಲಾಗಿದೆ. ಎಲ್ಲ ಪರೀಕ್ಷೆಗಳೂ "ರಾಷ್ಟ್ರಮಟ್ಟದಲ್ಲಿ" ನಡೆಯಬೇಕೆಂಬುದು ಈಗಿನ ಒಂದು ದುಷ್ಟ ತೀರ್ಮಾನ. ಅದರಿಂದ ಹೆಚ್ಚಿನ ಪ್ರಯೋಜನ ದೊರಕುವುದು ಉತ್ತರ ರಾಜ್ಯಗಳವರಿಗೆ ಮಾತ್ರ. ಆಯಾ ರಾಜ್ಯಗಳ ಪ್ರತ್ಯೇಕ ಪಠ್ಯಕ್ರಮ ಮತ್ತು ಪರೀಕ್ಷಾ ವಿಧಾನ ಕ್ರಮೇಣ ಇಲ್ಲವಾಗಿ ಒಂದೇ ಕೇಂದ್ರೀಕೃತ ಪದ್ಧತಿ ಜಾರಿಗೆ ಬರುವುದು ಅನಗತ್ಯವಾದ ಹೊರೆ. ಅದು ಹಿಂದಿ ಮಾಧ್ಯಮದತ್ತ ದಾಪುಗಾಲು ಹಾಕಲು ಒಂದು ಯೋಜನೆ ಕೂಡ. ನಮ್ಮ ರಾಜ್ಯದ ವಿದ್ಯಾರ್ಥಿಗಳಿಗಿಂತಲೂ ಬೇರೆ ರಾಜ್ಯಗಳ ವಿದ್ಯಾರ್ಥಿಗಳು ಹೆಚ್ಚಿನ ಪ್ರವೇಶ ಪಡೆಯುವಂತಾಗುವ ಸನ್ನಿವೇಶ ದೂರವಿಲ್ಲ. ಅಂದರೆ, ನಮ್ಮ ರಾಜ್ಯವು ಸ್ಥಾಪಿಸಿರುವ ಕಾಲೇಜುಗಳಲ್ಲಿ ನಮ್ಮ ರಾಜ್ಯದ ವಿದ್ಯಾರ್ಥಿಗಳು ಕಡಿಮೆ ಪ್ರಮಾಣದಲ್ಲಿರುವಂತಾಗುವುದು ಏಕ ಕೇಂದ್ರೀಕೃತ ನೀಟ್ ಪರೀಕ್ಷೆಯ ಫಲಿತಾಂಶ.

ವಿದ್ಯಾರ್ಥಿಗಳು ಮತ್ತು ಪೋಷಕರು ನೀಟ್ ಪರೀಕ್ಷೆ ನಡೆಸಿದ ಸಿಬಿಎಸ್ಸಿ ಬೋರ್ಡ್ ಪ್ರಕಟಿಸಿದ್ದ ಸೂಚನೆಗಳನ್ನು ಮೊದಲೇ ಓದಿಕೊಳ್ಳಬೇಕಾಗಿತ್ತು. ಹಾಗೆ ಮಾಡದೆ ಪರೀಕ್ಷಾ ಕೇಂದ್ರಗಳಿಗೆ ತೆರಳಿ ಅತ್ಯಂತ ಹೀನಾಯವಾದ ಅನುಭವ ಪಡೆದರು. ಇಡೀ ಪರೀಕ್ಷೆಯು ಇಂದಿನ ವಿದ್ಯಾರ್ಥಿ–ವಿದ್ಯಾರ್ಥಿನಿಯರನ್ನು ಅಪರಾಧಿಗಳಾಗಬಲ್ಲಂತಹ ಕುತಂತ್ರಿಗಳು ಎಂಬ ರೀತಿಯಲ್ಲಿ ನಡೆಸಿಕೊಂಡದ್ದು ಖಂಡನೀಯ. ಅವರ ತಪಾಸಣೆಯು ಅಮೆರಿಕಾದ ಏರ್‌ಪೋರ್ಟ್‌ಗಳ ಭದ್ರತಾ ಸಿಬ್ಬಂದಿ ನಡೆಸುವ ತಪಾಸಣೆಯನ್ನು ಮೀರುವಂತಿತ್ತು. ಯುವಕ–ಯುವತಿಯರನ್ನು ಸಾರಾಸಗಟಾಗಿ ಅಪರಾಧಿ ಮನೋಭಾವದವರೆಂದು ಎಣಿಸಿದ್ದು

## ಅಭಿನಂದನೆ...

ಖ್ಯಾತ ಪರಿಸರ ವಿಜ್ಞಾನ ಲೇಖಕ ಹಾಗೂ ಪತ್ರಕರ್ತರಾದ ಶ್ರೀ ನಾಗೇಶ್ ಹೆಗಡೆ ಅವರಿಗೆ ೨೦೧೬ನೇ ಸಾಲಿನ 'ಟಿಎಸ್ಸಾರ್ ಸ್ಮಾರಕ ಪತ್ರಿಕೋದ್ಯಮ ಪ್ರಶಸ್ತಿ'ಯು ಲಭಿಸಿದೆ. ಅವರಿಗೆ 'ಹೊಸತು' ಹಾಗೂ 'ನವಕರ್ನಾಟಕ'ದ ಅಭಿನಂದನೆಗಳು.

## ಅಭಿನಂದನೆ...

ವನ್ಯಜೀವಿ ತಜ್ಞರಾದ ಸಂಜಯ್ ಗುಬ್ಬಿ ಅವರಿಗೆ 'ಗ್ರೀನ್ ಆಸ್ಕರ್' ಎಂದು ಖ್ಯಾತಿ ಪಡೆದಿರುವ 'ವೈಟ್ಲಿ ಪ್ರಶಸ್ತಿ'ಯು ಲಭಿಸಿದೆ. ಅವರಿಗೆ 'ಹೊಸತು' ಹಾಗೂ 'ನವಕರ್ನಾಟಕ'ದ ಅಭಿನಂದನೆಗಳು.

ಅಕ್ಷಮ್ಯ. ದೇಶದ ಬಗ್ಗೆ, ದೇಶದ ಪರೀಕ್ಷೆಗಳ ಬಗ್ಗೆ ಮತ್ತು ಪರೀಕ್ಷೆಗಳ ವ್ಯವಸ್ಥಾಪಕರ ಬಗ್ಗೆ ಅವರಲ್ಲಿ ಕ್ರೋಧವು ಅಂಕುರಿಸಿದರೆ ಆಶ್ಚರ್ಯವಿಲ್ಲ. ನಮ್ಮ ವಿದ್ಯಾರ್ಥಿ ಸಮುದಾಯದ ವ್ಯಕ್ತಿತ್ವಕ್ಕೆ ಭಂಗ ತರುವಂತಹ ರೀತಿಯಲ್ಲಿ ನಾವು ಪರೀಕ್ಷೆಗಳನ್ನು ನಡೆಸಿದರೆ ದೇಶದ ಬಗ್ಗೆ ಅವರಿಗೆ ಅಭಿಮಾನ ಮೂಡುವ ಬದಲು ಹೇಸಿಗೆಯುಂಟಾಗುವ ಸಂಭವವಿದೆ; ಆಮೇಲೆ ಮತ್ತೆ ಅವರನ್ನೇ ದೂಷಿಸುವ ಪರಿಪಾಠ ಬೆಳೆಯುತ್ತದೆ. ಇಂತಹ ಪರೀಕ್ಷಾ ಕ್ರಮವನ್ನು ಕೂಡಲೆ ರದ್ದುಗೊಳಿಸಬೇಕು. ಸಂಚಾರ ದಟ್ಟಣೆಗೆ ಹೆಸರಾದ ಬೆಂಗಳೂರಿನಲ್ಲಿ ವಿದ್ಯಾರ್ಥಿಗಳು ಪರೀಕ್ಷಾ ಕೇಂದ್ರಕ್ಕೆ ತಲುಪಲು ಒಂದು ನಿಮಿಷ ತಡವಾದರೂ ಅವರನ್ನು ಪರೀಕ್ಷೆಯಿಂದ ಹೊರಹಾಕಲಾಗಿದೆ. ಮತ್ತೆ ಪರೀಕ್ಷೆ ಬರೆಯಲು ಒಂದು ವರ್ಷ ಕಾಯಬೇಕು. ಒಂಬತ್ತು ಗಂಟೆಗೆ ಪರೀಕ್ಷೆಯಾದರೆ ಅವರು ೮.೩೦ಕ್ಕೆ ಹಾಜರಿರಬೇಕೆಂದು ಸೂಚಿಸಲಾಗಿತ್ತು. ೮.೩೧ಕ್ಕೆ ಬಂದವರನ್ನು ಒಳಕ್ಕೆ ಬಿಡಲಿಲ್ಲ. ಕೆಲವು ಕೇಂದ್ರಗಳಲ್ಲಿ ವಿದ್ಯಾರ್ಥಿನಿಯರ ಒಳ-ಉಡುಪನ್ನು ಬದಲಾಯಿಸುವ ಕ್ರೂರ ಆಜ್ಞೆಗಳನ್ನು ನೀಡಲಾಯಿತು. ವಿದ್ಯಾರ್ಥಿನಿಯರ ಓಲೆ, ಸರ, ಬಳೆ, ಇವನ್ನೆಲ್ಲಾ ಕಳಚಲಾಯಿತು. ಇದೆಂತಹ ಅರ್ಥರಹಿತ ವ್ಯವಸ್ಥೆಯೆಂದು ತೋಚುವುದಿಲ್ಲವೆ ? ಉದ್ದತೋಳಿನ ಅಂಗಿ ತೊಟ್ಟಿದ್ದ ಹುಡುಗರು ಅಂಗಿಗಳ ತೋಳುಗಳನ್ನು ಕತ್ತರಿಸಿ ಹಾಕಬೇಕಾಯಿತು. ಚಪ್ಪಲಿಯ ಬದಲು ಶೂ ಹಾಕಿಕೊಂಡಿದ್ದವರನ್ನು ಹೊರಗೆ ನಿಲ್ಲಿಸಲಾಯಿತು. ಇಂತಹ ಮೂರ್ಖತನದ ಕ್ರೂರ ತಪಾಸಣಾ ನಿಯಮಗಳಿಂದ ಯುವಕ-ಯುವತಿಯರು ನೊಂದಿದ್ದಾರೆ, ರೋಸಿಹೋಗಿದ್ದಾರೆ. "ನೀವು ಮೂಲತಃ ಅಪರಾಧಿ ಮನೋಭಾವದವರು" ಎಂದು ಸಮಾಜ ಅವರಿಗೆ ಹೇಳಿದೆ. ಇದು ಸರ್ವಥಾ ಅನಂಗೀಕಾರಾರ್ಹವಾದ್ದು.

ಒಂದು ಪರೀಕ್ಷೆಗೆ ಇಷ್ಟು ಮಹತ್ವ ನೀಡುವುದು ಶಿಕ್ಷಣದ ವ್ಯಾಪಾರೀಕರಣದ ಪರಿಣಾಮ. ಹುಟ್ಟಿದಾರಭ್ಯ ಸಾಯುವವರೆಗೆ ಹೀಗೆ ಪರೀಕ್ಷೆಗಳಿಗೆ ತಮ್ಮನ್ನು ತಾವು ಒಡ್ಡುತ್ತಲೇ ಹೋಗುವ ವಿದ್ಯಾರ್ಥಿಗಳನ್ನು ಯಂತ್ರಗಳನ್ನಾಗಿ ಮಾಡಹೊರಡುವುದು ಅಸಹ್ಯ ಎನಿಸದಿದ್ದರೆ ನಮ್ಮಲ್ಲೇನೋ ಕೊರತೆ ಇರುವುದರ ಸೂಚನೆ. ಇಷ್ಟು ವರ್ಷಗಳ ಕಾಲ ಕೇಂದ್ರೀಕೃತ ಪರೀಕ್ಷಾ ಕ್ರಮ ಇರಲಿಲ್ಲವಲ್ಲ, ಏನು ಅನಾಹುತ ನಡೆದುಹೋಗಿತ್ತು ? ಸಂಶಯ ಪಿಶಾಚಿಯ ಸಂಸ್ಕೃತಿಯನ್ನು ಕಿತ್ತೊಗೆದು ನಮ್ಮ ವಿದ್ಯಾರ್ಥಿ-ವಿದ್ಯಾರ್ಥಿನಿಯರನ್ನು ಗೌರವದಿಂದ ನಡೆಸಿಕೊಳ್ಳಬೇಕಾದ್ದು ಸಾಮಾಜಿಕ ಕರ್ತವ್ಯ. ಅವರ ಘನತೆಯನ್ನು ಸದಾ ನಿಕೃಷ್ಟವೆಂದು ಭಾವಿಸುತ್ತಾ ಹೋದರೆ ಆದರಣೀಯ ಸಾಮಾಜಿಕ ಸಂಬಂಧಗಳು ಸಾಧ್ಯವಾಗುವುದಿಲ್ಲ. ಮೊದಲು ನೀಟ್ ಮುಂತಾದ ಕೇಂದ್ರೀಕೃತ ಪರೀಕ್ಷಾ ವಿಧಾನವನ್ನು ರದ್ದುಗೊಳಿಸಿ ರಾಜ್ಯಗಳ ಸ್ವಾಯತ್ತತೆಗೆ ಒತ್ತು ನೀಡಬೇಕು. ಇಲ್ಲವಾದರೆ ಕಲ್ಲು ಎಸೆಯುವ ಯುವಕ-ಯುವತಿಯರ ಸಂಖ್ಯೆ ನಮ್ಮ ದೇಶದಲ್ಲಿ ಹೆಚ್ಚಾದೀತು.



# ನಮ್ಮ ಆತ್ಮೀಯ ಡಾ॥ ಕೆ. ಎಲ್. ಗೋಪಾಲಕೃಷ್ಣಯ್ಯ



'ಹೊಸತು' ಪತ್ರಿಕೆಯ ಸಹಸಂಪಾದಕರಲ್ಲೊಬ್ಬರಾದ ಡಾ॥ ಕೆ. ಎಲ್. ಗೋಪಾಲಕೃಷ್ಣಯ್ಯ ೧೨ನೇ ಮೇ, ಶುಕ್ರವಾರದಂದು ನಿಧನರಾಗಿದ್ದಾರೆ. 'ನವಕರ್ನಾಟಕ' ಮತ್ತು 'ಹೊಸತು' ಬಳಗ ಗೌರವದಿಂದ ಅವರನ್ನು ನೆನೆಯುತ್ತಾ ಕಂಬನಿಗರೆಯುತ್ತದೆ. ಅವರಿಗೆ ೮೩ ವರ್ಷ ವಯಸ್ಸಾಗಿತ್ತು, ಎರಡು ವಾರಗಳ ಕಾಲ ಅನಾರೋಗ್ಯಕ್ಕೆ ತುತ್ತಾಗಿದ್ದರು. ೧೯೬೧ರಲ್ಲಿ ಮೈಸೂರು ವಿಶ್ವವಿದ್ಯಾನಿಲಯದಿಂದ ಎಂ.ಎ. ಪದವಿ ಪಡೆದ ಶ್ರೀಯುತರು ಬೆಂಗಳೂರಿನ ಜಯನಗರದ ನ್ಯಾಷನಲ್ ಕಾಲೇಜಿನಲ್ಲಿ ಸುಮಾರು ೩೦ ವರ್ಷ ಕನ್ನಡ ಪ್ರಾಧ್ಯಾಪಕರಾಗಿದ್ದರು. ಅದಕ್ಕೆ ಮುನ್ನ ಕೆ.ಜಿ.ಎಫ್.ನ ಕಾಲೇಜಿನಲ್ಲಿ ಕೆಲವು ವರ್ಷಗಳ ಕಾಲ ಅಧ್ಯಾಪಕರಾಗಿದ್ದರು. 'ತಿರುವುಗಳು' ಎಂಬ ಕಾದಂಬರಿ, 'ಸಾಹಿತ್ಯ ಸಂವಾದ' ಎಂಬ ವಿಮರ್ಶಾ ಗ್ರಂಥ (ವಿಶ್ರಾಂತ ಪ್ರಕಾಶನ, ೧೯೯೩), ಪಾಲ್ ಸ್ವೀಝಿ ಮತ್ತು ಲಿಯೊ ಹ್ಯೂಬರ್‌ಮನ್‌ರ 'ಸಮಾಜವಾದ ಪರಿಚಯ' ಎಂಬ ಗ್ರಂಥದ ಕನ್ನಡ ಅನುವಾದ (ಬೆಂಗಳೂರು ವಿಶ್ವವಿದ್ಯಾಲಯ, ೧೯೮೩), ಎಸ್. ಎಲ್. ಭೈರಪ್ಪನವರ ಕೃತಿಗಳನ್ನು ಕುರಿತಾದ ಮೌಲಿಕ ವಿಮರ್ಶಾ ಗ್ರಂಥ 'ಡಾ॥ ಎಸ್. ಎಲ್. ಭೈರಪ್ಪನವರ ಕಾದಂಬರಿಗಳೊಡನೆ ಧರ್ಮ-ಕರ್ಮ-ಜಿಜ್ಞಾಸೆ' (ನವಕರ್ನಾಟಕ) ಮುಂತಾದವು ಅವರ ಪ್ರಮುಖ ಕೃತಿಗಳು. ಭಾಷಾಶಾಸ್ತ್ರದಲ್ಲಿ ವಿಶೇಷ ಪರಿಣತಿ ಹೊಂದಿದ್ದ ಈ ವಿದ್ವಾಂಸರು 'ನವಕರ್ನಾಟಕ ಪ್ರೌಢಶಾಲಾ ಕನ್ನಡ ಕೈಪಿಡಿ' (೯ ಮುದ್ರಣಗಳು) ಮತ್ತು 'ಭಾಷೆಯ ಬೆಳಕು' (೩ ಮುದ್ರಣಗಳು) ಎಂಬ ಕೃತಿಗಳನ್ನು ರಚಿಸಿಕೊಟ್ಟಿದ್ದಾರೆ. 'ಭೌತವಾದೀಯ ಚಿಂತನೆಗಳು' (೨ ಮುದ್ರಣಗಳು) ಮತ್ತು 'ಇತಿಹಾಸದ ರಾಜಕೀಯ' (೩ ಮುದ್ರಣಗಳು) ಅವರ ಇನ್ನೆರಡು ಮಹತ್ವದ ಕೃತಿಗಳು. 'ಹೊಸತು' ಪತ್ರಿಕೆಯೂ ಸೇರಿದಂತೆ ಹಲವು ನಿಯತಕಾಲಿಕೆಗಳಲ್ಲಿ ಪ್ರೊ॥ ಕೆಎಲ್‌ಜಿ ತಮ್ಮ ವಿದ್ವತ್ಪೂರ್ಣ ಲೇಖನಗಳನ್ನು ಪ್ರಕಟಿಸಿದ್ದಾರೆ. ಈಚಿನ ದಿನಗಳಲ್ಲಿ ಅವರಿಗೆ ಪ್ರಿಯವಾದ ಪುರಾಣ ಕಥಾನಕಗಳ ತೌಲನಿಕ ಅಧ್ಯಯನದಲ್ಲಿ ನಿರತರಾಗಿದ್ದ ಕೆಎಲ್‌ಜಿ 'ದ ಪ್ರೆಗ್ನೆಂಟ್ ಪ್ರಿನ್ಸ್' ಎಂಬ ಪುಸ್ತಕವನ್ನು ಕುರಿತು ವಿಮರ್ಶಾತ್ಮಕ ಲೇಖನ ಬರೆದುಕೊಡುವ ಆಶಯವನ್ನು ವ್ಯಕ್ತಪಡಿಸಿದ್ದರು. ಶ್ರೇಷ್ಠ ಅಧ್ಯಾಪಕರಾಗಿ, ಸಂಶೋಧಕರಾಗಿ ಮತ್ತು ಲೇಖಕರಾಗಿ ವಿಶೇಷ ಮನ್ನಣೆಗೆ ಪಾತ್ರರಾಗಿದ್ದ ಡಾ॥ ಗೋಪಾಲಕೃಷ್ಣಯ್ಯ ನವಕರ್ನಾಟಕ ಪ್ರಕಾಶನಕ್ಕೆ ಆಗಾಗ್ಗೆ ಉಪಯುಕ್ತ ಸಲಹೆ ಮತ್ತು ನೆರವು ನೀಡಿ ಸಹಕರಿಸಿದ್ದಾರೆ. 'ಹೊಸತು' ಪತ್ರಿಕೆಯಲ್ಲಿ ಹಲವಾರು ಲೇಖನಗಳನ್ನು ಪ್ರಕಟಿಸುವುದಲ್ಲದೆ ಅದರ ಸಂಪಾದಕ ಮಂಡಲಿಯಲ್ಲಿದ್ದು ಅಪಾರ ಕೆಲಸಗಳಲ್ಲಿ ಪಾಲ್ಗೊಂಡಿದ್ದಾರೆ. ಅವರ ಕೊಡುಗೆಯನ್ನು ಕೃತಜ್ಞತೆಯಿಂದ ನೆನೆಯುತ್ತೇವೆ ಮತ್ತು ಅವರ ಕುಟುಂಬದವರಿಗೆ ನಮ್ಮ ಸಾಂತ್ವನ ತಿಳಿಸುತ್ತೇವೆ.

*– ಸಂ.*




✉ ೨೦೧೬ರ ಏಪ್ರಿಲ್ 'ಹೊಸತು' ಸಂಚಿಕೆಯನ್ನು ಭಾರತರತ್ನ ದಿವಂಗತ ಬಿ. ಆರ್. ಅಂಬೇಡ್ಕರ್ ಅವರ ಕುರಿತು ಬರೆದ ಹಲವು ಲೇಖನ, ಬರಹಗಳ ವಿಶೇಷ ಸಂಚಿಕೆಯಾಗಿ ಹೊರತಂದಿರುವುದು ಅತ್ಯಂತ ಅಭಿನಂದನೀಯ, ಶ್ಲಾಘನೀಯ ಕೆಲಸ.

ಸಂಪಾದಕೀಯವೇ ಸಂಚಿಕೆಯ ಕಿರೀಟವೂ ಹೌದು. ಅದರ ಮೂಲ ಸಹ. 'ವ್ಯಕ್ತಿ'ಯನ್ನು ಅಪ್ಪಿಕೊಂಡು 'ವ್ಯಕ್ತಿತ್ವ' ದೂರಮಾಡುತ್ತಿರುವ ವ್ಯವಸ್ಥೆಯನ್ನು ಎಲ್ಲರೂ ಅರ್ಥಮಾಡಿಕೊಳ್ಳಬೇಕು. ಇಲ್ಲದಿದ್ದರೆ ಪುನಃ ಯಥಾಸ್ಥಿತಿ ಮುಂದುವರಿಯುವುದರಲ್ಲಿ ಸಂಶಯವಿಲ್ಲ.

ಅಂಬೇಡ್ಕರ್ ಅವರಿಂದಾಗಿಯೇ ಎಚ್ಚರಗೊಳ್ಳುತ್ತಿರುವ ಹಿಂದುಳಿದ, ದಲಿತ, ಅಲ್ಪಸಂಖ್ಯಾತ, ಮಹಿಳಾ ಸಮುದಾಯಗಳು ಗಮನಿಸಬೇಕಾದದ್ದು ಏನೆಂದರೆ ಇವರೆಲ್ಲಾ ಅಂಬೇಡ್ಕರ್ ಅವರ ತ್ರಿ–ಸೂತ್ರಗಳ ಅಡಿ – ಶಿಕ್ಷಣ, ಸಂಘಟನೆ – ಹೋರಾಟ – ಬರಬೇಕು ಮತ್ತು ಅಂಬೇಡ್ಕರ್ ಅವರ ವಿಚಾರಗಳಿಗೆ ಬದ್ಧರಾಗಿ ಕಾರ್ಯನಿರ್ವಹಿಸಬೇಕು. ಇನ್ನೂ ೧೫–೧೬ನೇ ಶತಮಾನದ ಮಾನಸಿಕ ಸ್ಥಿತಿಯಲ್ಲಿರುವ ಈ ಸಮುದಾಯಗಳು ೨೧ನೇ ಶತಮಾನಕ್ಕೆ ಯಾವಾಗ ಬರಬೇಕು? ಅಂಬೇಡ್ಕರರಂತೆ ಹಗಲಿರುಳು ದುಡಿದು ಪರ್ಯಾಯ ವ್ಯವಸ್ಥೆಗೆ ನಾಂದಿ ಹಾಡಬೇಕು. ಅದು ಆಗುತ್ತಿದೆಯೇ?

*ಕಲಬುರಗಿ* **ಬಿ. ಆರ್. ಅಣ್ಣಾಸಾಗರ**

## ಬಡವರು ಮಾತ್ರ ಬಾಡಿಗೆ ತಾಯಿಗಳಾಗಬೇಕೆ?

ಆಧುನಿಕಯುಗದಲ್ಲೂ ಪುರುಷಪ್ರಧಾನವೇ ಆಗಿರುವ ಸಮಾಜದಲ್ಲಿ ಹೆಣ್ಣು ಜನನದಿಂದ ಮರಣದವರೆಗೂ ವಿವಿಧ ಸಮಸ್ಯೆಗಳನ್ನು ಎದುರಿಸುತ್ತಿದ್ದಾಳೆ. ಮಾನವ ವೈಜ್ಞಾನಿಕವಾಗಿ ಬೆಳೆದರೂ, ಉನ್ನತ ಶಿಕ್ಷಣ ಪಡೆದರೂ, ವರದಕ್ಷಿಣೆ, ಬಾಲ್ಯವಿವಾಹ, ಲೈಂಗಿಕ ಕಿರುಕುಳ, ವಿಧವಾ ವಿವಾಹ, ಉದ್ಯೋಗ ಮತ್ತು ಆರೋಗ್ಯ ಸಂಬಂಧಿ ಸಮಸ್ಯೆಗಳು ಹೊಸ ರೂಪ ಪಡೆದು ಪಾರಮ್ಯ ಮೆರೆಯುತ್ತಿವೆ. ಮಹಿಳೆ ಆರ್ಥಿಕವಾಗಿ ಎಷ್ಟೇ ಬಲಾಢ್ಯಳಾದರೂ, ಉನ್ನತ ಹುದ್ದೆ ಅಲಂಕರಿಸಿದರೂ ಇಂಥ ಸಮಸ್ಯೆಗಳಿಂದ ಆಕೆಗೆ ಈಗಲೂ ಮುಕ್ತಿ ದೊರೆಯುತ್ತಿಲ್ಲ. ಆದಾಗ್ಯೂ ಮಹಿಳೆಯರ ಸಮಸ್ಯೆಗಳನ್ನು ಸರ್ವೇಸಾಮಾನ್ಯ ಎಂಬಂತೆ ನೋಡುವ ದೃಷ್ಟಿಕೋನ ಬದಲಾಗದಿರುವುದು ವಿಪರ್ಯಾಸ.

ಈಗ ಹೊಸದಾಗಿ ಎದ್ದಿರುವ ಬಾಡಿಗೆ ತಾಯ್ತನ ಎಂಬ ಅಲೆ ಎಲ್ಲಿಗೆ ಕರೆದೊಯ್ಯುವುದೋ ತಿಳಿಯದು. ಮಗುವೊಂದನ್ನು ರೂಪಿಸಿ, ಒಂಬತ್ತು ತಿಂಗಳು ತನ್ನೊಳಗೇ ಪೋಷಿಸಿ ನಂತರ ಈ ಜಗತ್ತಿಗೆ ಅದನ್ನು ತರುವುದು ಮಹಿಳೆಗೆ ಮಾತ್ರವೇ ಸಾಧ್ಯವಾಗುವ ಒಂದು ಮಹತ್ಕಾರ್ಯ. ಆದರೆ, ಕೆಲವು ಮಹಿಳೆಯರಿಗೆ ಇದು ಸಾಧ್ಯವಾಗುವುದಿಲ್ಲ. ಅವರು ಜೀವವೊಂದನ್ನು ಸೃಷ್ಟಿಸಬಲ್ಲರಾದರೂ, ರೂಪಿಸಿ, ತನ್ನದೇ ಒಡಲಲ್ಲಿ ಪೋಷಿಸಿ, ಬೆಳೆಸಿ, ಹೊರಜಗತ್ತಿಗೆ ತರಲು ಅವರಿಗೆ ಸಾಧ್ಯವಾಗುವುದಿಲ್ಲ. ಇದು ಅವರ ಒಳಾಂಗದ ರಚನೆಯಲ್ಲೇ ಇರುವ ನ್ಯೂನತೆಯ ಪರಿಣಾಮ. ಹಾಗಾಗಿ ಅವರ ದಾಂಪತ್ಯ ಫಲವನ್ನು, ಅವರು ಬೇರೊಬ್ಬ ಮಹಿಳೆಯ ಒಡಲಲ್ಲಿ ಬೆಳೆಸಿಯೇ ಬಾಹ್ಯ ಜಗತ್ತಿಗೆ ತಂದುಕೊಳ್ಳಬೇಕು. ವಿಜ್ಞಾನ, ತಂತ್ರಜ್ಞಾನದ




ಮುನ್ನಡೆಯಿಂದಾಗಿ ಇದು ಸಾಧ್ಯವಾಗಿದೆ. ಯಾವ ಮಹಿಳೆಯು ತನ್ನ ಪತಿಯದಲ್ಲದ, ಒಂದು ಜೀವವನ್ನು ತನ್ನ ಒಡಲಲ್ಲಿ ಇರಿಸಿಕೊಂಡು, ಬೆಳೆಸಿ, ಪೋಷಿಸಿ ಹೊರಜಗತ್ತಿಗೆ ತರುತ್ತಾಳೋ ಅವಳು ಬಾಡಿಗೆ ತಾಯಿ ಎನಿಸಿಕೊಳ್ಳುತ್ತಾಳೆ.

ಈ ರೀತಿ, ಬೇರೆ ಹೆಣ್ಣೊಬ್ಬಳ ದೇಹವನ್ನು ತಮ್ಮ ಮಗುವು ರೂಪುಗೊಳ್ಳುವ, ಕೆಲ ತಿಂಗಳುಗಳ ಕಾಲ ವಾಸಿಸಲು ಪಡೆಯುವ ಆ ಹೆಣ್ಣಿಗೆ ಬಾಡಿಗೆ ತಾಯಿ ಎನ್ನುತ್ತಾರೆ.

ಬಾಡಿಗೆ ತಾಯಿ ಎಂದ ಮೇಲೆ ಬಾಡಿಗೆ ಕೊಡಬೇಕಲ್ಲವೇ? ಅದರಂತೆ, ತನ್ನೊಳಗೆ ಆ ಭ್ರೂಣಕ್ಕೆ ಸ್ಥಳ ಕೊಟ್ಟು ಬೆಳೆಸಿ ಹೊರತರುವವರೆಗೂ ಆ ತಾಯಿಯ ಆರೈಕೆಗಾಗಿ ಹೆರಿಗೆ ಸಮಯದ ವೆಚ್ಚಗಳಿಗಾಗಿ, ಹಣವನ್ನೂ ಕೊಡುತ್ತಾರೆ, ಆ ಭ್ರೂಣದ ಜೀವಕ್ಕೆ ಕಾರಣರಾದ ದಂಪತಿಗಳು ಈ ರೀತಿ ಮನೆಯೊಂದನ್ನು ಬಾಡಿಗೆಗೆ ಪಡೆಯುವಂತೆ ಷರತ್ತುಬದ್ಧವಾಗಿ ಬಾಡಿಗೆಗೆ ಹೆಣ್ಣಿನ ಗರ್ಭವನ್ನು ಪಡೆಯುವ ಪದ್ಧತಿ ತಲೆಯೆತ್ತಿ ನಿಧಾನವಾಗಿ ಪ್ರಸಾರವಾಗುತ್ತಿದೆ, ಕ್ರಮೇಣ ಇದು ದಂಧೆಯ ರೂಪ ತಾಳಿದರೂ ಆಶ್ಚರ್ಯವಿಲ್ಲ.

ಈ ವ್ಯವಹಾರದಲ್ಲಿ ಹೆಣ್ಣಿನ ಇಷ್ಟ–ಕಷ್ಟಗಳನ್ನು ಬಾಡಿಗೆಗೆ ಬಸಿರನ್ನು ಹೊರುವಾಗ, ತನ್ನದಲ್ಲದ ಆ ಮಗುವನ್ನು ಹೆರುವಾಗ ಆ ತಾಯಿಗೆ ಆಗಬಹುದಾದ ದೈಹಿಕ, ಮಾನಸಿಕ ತೊಂದರೆಗಳಿಗಾಗಲಿ, ಹೆರಿಗೆ ಸಮಯದ ತೊಂದರೆಗಳಿಗೆ ಗಮನಕೊಡದೆ, ಹೆಣ್ಣೊಬ್ಬಳಿಂದ ತಮಗೆ ದೊರೆಯಬಹುದಾದ ಲಾಭಕ್ಕೆ ಅವಳಿಗೆ ಸಂಬಂಧಪಟ್ಟವರು ಹೆಚ್ಚು ಆಸೆಪಡುವ ಸಾಧ್ಯತೆಯನ್ನು ತಳ್ಳಿಹಾಕುವಂತಿಲ್ಲ. ಈಗಾಗಲೇ ಗುಟ್ಟುಗುಟ್ಟಾಗಿ ಹಾಗೆ ನಡೆಯುತ್ತಲೂ ಇರಬಹುದು. ಅಂತೂ ವಿಜ್ಞಾನದ ಮುನ್ನಡೆಯಿಂದ ಇಲ್ಲಿಯೂ ಮತ್ತೆ ಮಹಿಳೆಯ ಮೈಮನಗಳಿಗೇ ಹೊಡೆತ, ಆಘಾತ! ಅನೇಕ ಪರಿಶ್ರಮದ ಫಲವಾಗಿ ರೂಪುಗೊಂಡ ವಿಜ್ಞಾನ ಮತ್ತು ತಂತ್ರಜ್ಞಾನ ಕ್ಷೇತ್ರದ ಅಮೂಲ್ಯ ಕೊಡುಗೆಗಳು ನೈತಿಕ ಮೌಲ್ಯಗಳೇ ಇಲ್ಲದ ಕೇವಲ ಧನದಾಹಿಗಳ ಕೈಗೆ ಸಿಕ್ಕಿ ಹೀಗೆ ದುರ್ಬಳಕೆಯಾಗುತ್ತಿವೆ. ಈ ದುರ್ಬಳಕೆಗೆ ಬಲಿಯಾಗುತ್ತಿರುವುದು ಮಹಿಳೆಯೇ ಎಂಬುದು ಅತೀವ ನೋವಿನ ಹಾಗೂ ಅತ್ಯಂತ ಅಪಮಾನದ ಸಂಗತಿ.

ಒಟ್ಟಾರೆ, ಇಂದಿನ ಸಮಾಜ ಆಧುನಿಕತೆಯ ತುತ್ತತುದಿಯಲ್ಲಿದ್ದರೂ ಲಿಂಗಸಂಬಂಧಿ ಪೂರ್ವಾಗ್ರಹಗಳಿಂದ ಮಹಿಳೆ ಈಗಲೂ ದೌರ್ಜನ್ಯ ಮತ್ತು ಕಿರುಕುಳಕ್ಕೊಳಗಾಗುತ್ತಿರುವುದು ನಿಜಕ್ಕೂ ನಾಗರಿಕ ಸಮಾಜ ತಲೆತಗಿಸುವಂತಹದ್ದು.

*ಶಂಕರಘಟ್ಟ* **ಬಲಭೀಮ**

## ಪಾತಾಳದ ಗಂಗೆ ತರುವುದಕ್ಕಿಂತ ಆಕಾಶ ಗಂಗೆ (ಮಳೆನೀರು) ಹಿಡಿದಿಟ್ಟುಕೊಳ್ಳುವುದೇ ಲೇಸು

ಹಿಂದೆ ನಮ್ಮ ಪೂರ್ವಿಕರು ಮಳೆ ನೀರಿನ ಸಂಗ್ರಹ, ಬಳಕೆ ಮತ್ತು ಗಳಿಕೆ ಬಗ್ಗೆ ಸಾಕಷ್ಟು ಮುತುವರ್ಜಿ ವಹಿಸಿದ್ದರು. ಇದಕ್ಕೆ ನಿದರ್ಶನ ಅವರು ನಿರ್ಮಿಸಿದ ಕೆರೆ, ಬಾವಿ, ಹೊಲದ ಬದುವಿಗಿದ್ದ ಮದಗದ ಕಟ್ಟೆಗಳು, ಆ ಬದುವು ಅಳಿಯದ ಹಾಗೆ ಬದುವಿನುದ್ದಕ್ಕೂ ನೆಟ್ಟಮರಗಳು. ಮರಗಳು ಹೊಲದ ಮೇಲ್ಮೈನ ಫಲವತ್ತಾದ ಮಣ್ಣನ್ನು ಸಂರಕ್ಷಿಸುತ್ತಿದ್ದುದಲ್ಲದೆ ಬಿದ್ದ ಮಳೆ ನೀರನ್ನು ನಿಲ್ಲಿಸಿ ನೆಲದಲ್ಲಿ ಇಂಗುವಂತೆ ಮಾಡುತ್ತಿದ್ದವು. ಇದರಿಂದ ಅಂತರ್ಜಲ ಹೆಚ್ಚಾಗಿ ಕೆರೆಗಳು, ಬಾವಿಗಳು ಸದಾ ನೀರಿನಿಂದ ಸಮೃದ್ಧವಾಗಿರುತ್ತಿದ್ದವು.

ಪ್ರಸ್ತುತ ಕರ್ನಾಟಕ ಸರ್ಕಾರವು ಪಾತಾಳ ಗಂಗೆಯನ್ನು ತರುವ ಪ್ರಯತ್ನಕ್ಕಿಂತಲೂ ಆಕಾಶ (ಮಳೆ ನೀರನ್ನು) ಗಂಗೆಯನ್ನು ಹಿಡಿದಿಟ್ಟುಕೊಳ್ಳುವ ಪ್ರಯತ್ನ ಮಾಡುವುದೇ ಉತ್ತಮ. ಪಾತಾಳ ಗಂಗೆಯನ್ನು ತರಲು ಖರ್ಚು ಮಾಡುವ ಕೋಟ್ಯಂತರ ರೂಪಾಯಿಗಳ ಈ ಯೋಜನೆಗಳು ಸುಸ್ಥಿರ ಮಾದರಿಯ ಪರಿಸರಕ್ಕೆ ಮಾರಕವಾಗದ ರೀತಿಯಲ್ಲಿ ರೂಪುಗೊಳ್ಳಬೇಕು.

ಪಾತಾಳ ಗಂಗೆಯನ್ನು ತರುವ ಇಂತಹ ಯೋಜನೆಗಳು ನಮಗೆ ಸರಿಯೆನಿಸಿದರೂ, ಕಾಲಾನು

ಕ್ರಮೇಣ ಅವು ತರಲಿರುವ ಅಪಾಯಗಳನ್ನು ಕೂಡ ನಾವು ಲೆಕ್ಕಕ್ಕೆ ತೆಗೆದುಕೊಳ್ಳಬೇಕು. ಇದಕ್ಕೊಂದು ಚಿಕ್ಕ ಉದಾಹರಣೆ ನೀಡಬಹುದು. ತುಂಗಭದ್ರಾ ಎಡದಂಡೆ ಕಾಲುವೆಗುಂಟ ಸಾವಿರಾರು ಎಕರೆ ಭೂಮಿಯಲ್ಲಿ ನೀರಾವರಿ ಉಪಯೋಗವನ್ನು ಪಡೆಯುತ್ತಿದ್ದಾರೆ. ಈ ಕಾಲುವೆಯ ಹರಿಯುವ ನೀರಿನಲ್ಲಿ ಅಪರಿಚಿತ ಮನುಷ್ಯನ ಹೆಣ ಯಾರದಾದರೂ ಹೊಲದ ಹತ್ತಿರ ತೇಲಿಕೊಂಡು ಬಂದು ನಿಂತಿರುವಾಗ, ಅದನ್ನು ಗಮನಿಸಿದ ಆ ಜಮೀನಿನ ರೈತ ಒಂದು ಕೋಲನ್ನು ತೆಗೆದುಕೊಂಡು ಆ ಹೆಣವನ್ನು ಮುಂದಕ್ಕೆ ನೂಕಿಬಿಡುತ್ತಿದ್ದ. ಅದು ಮುಂದೆ ತೇಲಿಕೊಂಡು ಮುಂದಿನ ಯಾರದ್ದೋ ಜಮೀನಿನ ಹತ್ತಿರ ನಿಂತು ಬಿಡುತ್ತಿತ್ತು. ಅಲ್ಲಿಯ ಜಮೀನಿನ ಆ ರೈತ ಈ ಹಿಂದಿನ ರೈತ ಮಾಡಿದ ಕೆಲಸವನ್ನೇ ಮಾಡುತ್ತಿದ್ದ. ಆ ಹೆಣ ಮತ್ತೆ ಮುಂದೆ ನೀರಿನಲ್ಲಿ ತೇಲುತ್ತಾ ಪ್ರಯಾಣ ಬೆಳೆಸುತ್ತಿತ್ತು. ಇದು ಹೀಗೆ ಮುಂದುವರಿಯುತ್ತಿತ್ತು.

ಈ ಪಾತಾಳ ಗಂಗೆ ತರುವ ಯೋಜನೆ ಕೂಡ ಅಷ್ಟೆ. ನಮ್ಮ ತಲೆಮಾರು ಮಾತ್ರ ನೀರಿನ ಅಭಾವ ಪರಿಹರಿಸಿಕೊಂಡರೆ ಸಾಲದು. ಏಕೆಂದರೆ ಕೋಟ್ಯಂತರ ರೂಪಾಯಿ ಹಣದ ಇಂತಹ ಯೋಜನೆ ಜಲ ತಜ್ಞರ ಮಾರ್ಗದರ್ಶನದಂತೆ ಸುಸ್ಥಿರ ಮಾದರಿಯ ಯೋಜನೆ ರೂಪಿಸಿ ಖರ್ಚು ಮಾಡುವುದು ಲೇಸು. ನಮ್ಮ ಮುಂದಿನ ತಲೆಮಾರಿಗೂ ಒಂದಿಷ್ಟು ಇಡುಗಂಟಿನ ರೀತಿಯಲ್ಲಿ ನೀರು, ಸುಸ್ಥಿರವಾದ ಪರಿಸರವನ್ನು ಉಳಿಸಿಡಬೇಕು.

ಬರುವ ಮುಂದಿನ ಮಳೆಗಾಲಕ್ಕಿಂತ ಮುಂಚೆ ನಾವು ಮಾಡಬಹುದಾದ ಸರಳ ವಿಧಾನವೆಂದರೆ, ಮಳೆ ನೀರನ್ನು ಸಂಗ್ರಹಿಸುವ, ಇಂಗಿಸುವ ಕಾರ್ಯಕ್ಕೆ ಮುಂದಾದಲ್ಲಿ ಸಮಸ್ಯೆಗೆ ಸಾಕಷ್ಟು ಪರಿಹಾರ ಕಂಡುಕೊಂಡಂತೆಯೇ ಸರಿ. ಈಗಾಗಲೇ ಚಾಲ್ತಿಯಲ್ಲಿ ಇರುವ ಕೃಷಿ ಹೊಂಡಗಳ ನಿರ್ಮಾಣದ ಸಂಖ್ಯೆಯನ್ನು ಹೆಚ್ಚಿಸುವುದು, ನಾಲ್ಕು ಎಕರೆಗೆ ಒಂದು ಕೃಷಿ ಹೊಂಡ ನಿರ್ಮಾಣ, ಪ್ರತಿ ಸರ್ವೆನಂಬರಿನ ಜಮೀನಿಗೆ ಮಳೆ ನೀರು ಸಾಧ್ಯವಾದಷ್ಟು ಇಂಗುವಂತೆ ಅನುಕೂಲ ವಾಗಬಲ್ಲ ಭದ್ರವಾದ ಬದುಗಳ ನಿರ್ಮಾಣ, ಮಳೆಗಾಲ ಆರಂಭವಾದೊಡನೆ ಆ ಬದುಗಳ ಪಕ್ಕದಲ್ಲಿ ಶಾಶ್ವತವಾಗಿ ಚೆರ್ರಿ, ಮತ್ತಿತರ ಗಿಡಗಳ ಸಸಿಗಳನ್ನು ನೆಡುವುದು ಮತ್ತು ಯಾವತ್ತೂ ಉಳಿಸಿಕೊಳ್ಳುವುದು. ಈ ಚೆರ್ರಿ ಮರಗಳು ಹೆಚ್ಚು ಕಾಳಜಿಯನ್ನು ಬೇಡದ, ಹೆಚ್ಚು ನೆರಳೂ ಆಗದ, ಅನೇಕ ಹಕ್ಕಿಗಳನ್ನು ಆಕರ್ಷಿಸುವ ಸ್ವರೂಪವನ್ನು ಹೊಂದಿರುವದರಿಂದ ಅವುಗಳನ್ನು ನಾಟಿ ಮಾಡುವುದು ಒಳಿತು.

ಇದೇ ರೀತಿಯ ವಿವಿಧ ಮರಗಳನ್ನು ತಜ್ಞರ ಮಾರ್ಗದರ್ಶನದೊಂದಿಗೆ ಅವಶ್ಯಕತೆಯಿದ್ದಲ್ಲೆಲ್ಲ ನಾಟಿ ಮಾಡುವುದು ಯೋಗ್ಯ. ಇನ್ನು ಸಣ್ಣ ಸಣ್ಣ ಹಳ್ಳ, ಕೊಳ್ಳ ಮತ್ತು ಜಮೀನಿನ ಬದುವಿನಲ್ಲಿ ಹರಿದು ಹೋಗುವ ನೀರನ್ನು ಅಲ್ಲಲ್ಲಿ ಇಂಗುವಂತೆ ಮಾಡಲು ಯಾವ ಯಾವ ಪ್ರಯತ್ನಗಳು ಸಾಧ್ಯವೋ ಅಂತಹ ಪ್ರಯತ್ನಗಳನ್ನು ಮಾಡಬೇಕು. ಓಡುವ ನೀರನ್ನು ಹರಿಯುವಂತೆ, ಹರಿಯುವ ನೀರನ್ನು ತೆವಳುವಂತೆ, ತೆವಳುವ ನೀರನ್ನು ನಿಲ್ಲುವಂತೆ ಮಾಡುತ್ತ ಹೋದರೆ ನಮಗೆ ನೀರಿನ ಸಮಸ್ಯೆಗೆ ಪರಿಹಾರ ದೊರಕಿದಂತೆಯೇ ಸರಿ. ರಾಜಸ್ಥಾನದಲ್ಲಿ ಜಲ ಕ್ರಾಂತಿಯನ್ನು ಮಾಡಿದ ರಾಜೇಂದ್ರಸಿಂಗ್ ಅವರ ಅನುಭವವನ್ನು ಮಾದರಿಯಾಗಿ ಬಳಸಿಕೊಂಡರೆ ತಪ್ಪೇನಿಲ್ಲ.

ಈಗಾಗಲೇ ರಾಜ್ಯಾದ್ಯಂತ ಅಲ್ಲಲ್ಲಿ ಅನೇಕ ಪ್ರಜ್ಞಾವಂತರು ಕೈಗೊಂಡ ನೀರ ನೆಮ್ಮದಿಯ ಯಶಸ್ವಿ, ಅನುಭವಗಳ ಪಾಠಗಳು ಕೂಡ ನಮಗೆ ಮಾದರಿ ಯಾಗಬೇಕಾಗಿದೆ. ಈ ನಿಟ್ಟಿನಲ್ಲಿ ಆಲೋಚಿಸಿ ಕಾರ್ಯಪ್ರವೃತ್ತರಾಗಿ ಸುಸ್ಥಿರ ಯೋಜನೆಗಳನ್ನು ಅನುಷ್ಠಾನಗೊಳಿಸಿದಾಗ ಮಾತ್ರ ನಮ್ಮ ಮುಂದಿನ ತಲೆಮಾರಿಗೆ ಸಮೃದ್ಧವಾದ ಪರಿಸರವನ್ನು ನೀಡಲು ಸಾಧ್ಯವಾಗಬಲ್ಲದು.

*ಸವದತ್ತಿ* **ರಾಮರೆಡ್ಡಿ ಕೆ.**

## ಆಕಾಶ

ನೀನು

ತೆರೆದ ಆಕಾಶ

ವಾಗು –

ನಿನಗೋ ಕಾಣುವುದು

ಇನ್ನೊಂದು

ಅವಕಾಶ

**ವ. ಉಮೇಶ ಕಾರಂತ**
ಮಂಗಳೂರು – ೫೭೫ ೦೦೧

## ಚಿಕಿತ್ಸೆಯ ಹೊಣೆಗಾರಿಕೆ

ಚಿಕಿತ್ಸೆಯ ಸಾಧಕ–ಬಾಧಕಗಳಿಗೆಲ್ಲ ವೈದ್ಯರೇ ಹೊಣೆಗಾರರೆಂದು ಅನೇಕರು ಭಾವಿಸುತ್ತಾರೆ. ಚಿಕಿತ್ಸೆ ನೆವದಿಂದ ಗೂಬೆ ಕೂರಿಸುವುದಕ್ಕೆ ಪ್ರಯತ್ನಿಸುತ್ತಾರೆ. ಗ್ರಾಹಕರ ಕೋರ್ಟಿನ ಮೆಟ್ಟಲೇರುವುದಕ್ಕೂ ಜನ ಹಿಂಜರಿಯುವುದಿಲ್ಲ.

ನಿಜ, ಚಿಕಿತ್ಸೆಯಲ್ಲಿ ವೈದ್ಯರಿಗೆ ತುಂಬ ಮಹತ್ವದ ಪಾಲುಗಾರಿಕೆ ಇದೆ. ರೋಗಿಗೆ ಗುಣವಾದರೆ ದೇವ ರೊಂದಿಗೆ ಕೆಲವರಾದರೂ ವೈದ್ಯರಿಗೂ ನಮಸ್ಕಾರ ಸಲ್ಲಿಸುತ್ತಾರೆ.

ಒಂದು ವಿಚಾರವನ್ನು ಪ್ರಾರಂಭದಿಂದಲೇ ಗಮನಿಸಬೇಕು. ರೋಗಿಗಳೆನ್ನುವುದು ಒಂದು ಸ್ಥಾಯೀ ವಿಭಾಗದ ಶಿರೋನಾಮೆ ಅಲ್ಲ. ಯಾರು ಯಾವಾಗ ಬೇಕಾದರೂ ರೋಗಿಗಳಾಗಬಹುದು. ಯಾರಾದರೂ ಏಕೆ ಸ್ವತಃ ವೈದ್ಯರೇ ಕೆಲವೊಮ್ಮೆ ರೋಗಿಗಳಾಗಬಹುದು. ಹಾಗಾಗಿ ರೋಗಿಗಳೆಂದಾಗ ಯಾರಿಗೂ ಕೀಳರಿಮೆ ಬೇಡ. ವೈದ್ಯರನ್ನೇ ಆದರೂ "ಹೇಗಿದೆ ನಿಮ್ಮ ಆರೋಗ್ಯ" ಎಂದು ವಿಚಾರಿಸುವುದಕ್ಕೆ ಮುಜುಗರವೂ ಬೇಡ.

ಯಾರು ಚಿಕಿತ್ಸೆಯನ್ನು ಸ್ವೀಕರಿಸುವ ಸ್ಥಾನದಲ್ಲಿ ಇದ್ದಾರೋ ಅವರು ಈ ಕ್ಷಣಕ್ಕೆ ರೋಗಿಯೆಂದು ಗುರುತಿಸ ಲ್ಪಡುತ್ತಾರೆ ಅಷ್ಟೆ. ಚಿಕಿತ್ಸಕರಿಗೂ ಪರಿಚಾರಕರಿಗೂ ಈ ಸ್ಥಿತಿಯ ಕುರಿತಾದ ಅರಿವು ತುಂಬ ಅಗತ್ಯ.

ಉದಾಹರಣೆಗೆ, ಬಹಳ ಕಾಲದಿಂದ ಔಷಧವನ್ನು ಸ್ವೀಕರಿಸುತ್ತಿರುವ ಒಬ್ಬ ರೋಗಿ ಅಥವಾ ಏಕಕಾಲಕ್ಕೆ ಅನೇಕ ಔಷಧಿಗಳನ್ನು ಸೇವಿಸಬೇಕಾದ ಒಬ್ಬ ರೋಗಿ ಔಷಧಿಗಳ ಮೇಲೆ ಜಿಗುಪ್ಸೆ ತಾಳಬಹುದು. ವೈರಾಗ್ಯವೂ ಬರಬಹುದು. ನನಗೆ ಮದ್ದೇ ಬೇಡ ಎಂದು ಔಷಧಿಗಳನ್ನು ನಿರಾಕರಿಸಬಹುದು ಅಥವಾ ತಿಂದಂತೆ ನಟಿಸಿ ತಿನ್ನದೆ ಇರಬಹುದು. ಇಂತಹ ಸನ್ನಿವೇಶದಲ್ಲಿ ಕುಟುಂಬದವರ ಮತ್ತು ಉಪಚಾರಕರ ನಿರ್ವಹಣೆ ತುಂಬ ಮಹತ್ವದ್ದು.

ಆಸ್ಪತ್ರೆಗಳಲ್ಲಿ ಸಾಮಾನ್ಯ ಎಲ್ಲರೂ ಗಮನಿಸ ಬಹುದಾದ ಒಂದು ದೃಶ್ಯ – ಇದ್ದಕ್ಕಿದ್ದ ಹಾಗೆ ಒಬ್ಬರನ್ನು ನಾಲ್ಕಾರು ಮಂದಿ ಆಧರಿಸಿ ಅಥವಾ ಎತ್ತಿಕೊಂಡು ಬಂದು ಆಸ್ಪತ್ರೆಯ ಒಂದು ಮಂಚದ ಮೇಲೆ ಮಲಗಿಸಿ ಬಿಡುತ್ತಾರೆ. ವೈದ್ಯರನ್ನು 'ಎಮರ್ಜನ್ಸಿ, ಬೇಗ ಬನ್ನಿ' ಎಂದು ಒತ್ತಾಯಿಸಿದಾಗ ಇತರ ರೋಗಿಗಳನ್ನು ಕೈ ಬಿಟ್ಟು ನಿರ್ವಾಹವಿಲ್ಲದೆ ಅಲ್ಲಿಗೆ ಧಾವಿಸಬೇಕಾಗುತ್ತದೆ. ಒಟ್ಟಿಗೆ ಬಂದವರು ಮಗ ಸೊಸೆ ಅಳಿಯಂದಿರಂತಹ ನಿಕಟ ಬಂಧುಗಳೇ ಆಗಿರುತ್ತಾರೆ. ಆದರೆ ಪ್ರಶ್ನೆ ಮಾಡಿದರೆ ಅವರಿಗೆ ಏನೂ ಗೊತ್ತಿರುವುದಿಲ್ಲ. 'ಏನಾಯಿತು?' "ಗೊತ್ತಿಲ್ಲ ಡಾಕ್ಟ್ರೇ, ನಡೆಯುತ್ತ ಇದ್ದವರು ಬಿದ್ದಿರಬೇಕು. ನಾವು ಮನೆಯಲ್ಲಿರಲಿಲ್ಲ" "ಅವರಿಗೆ ಕಾಯಿಲೆ ಏನಾದರೂ ಇತ್ತೆ ?" "ಹೌದು, ಬಿ.ಪಿ. ಶುಗರ್ ಮತ್ತು ಹಾರ್ಟಿನ ಕಾಯಿಲೆ ಇತ್ತು" "ಅದಕ್ಕೆ ಏನು ಔಷಧಿ ತೆಗೆದುಕೊಳ್ಳುತ್ತಿದ್ದರು ?" "ಗೊತ್ತಿಲ್ಲ ಡಾಕ್ಟ್ರೆ ಎಲ್ಲಾ ಅವರೇ ತಕ್ಕೊಳ್ಳುವುದು" "ಇವತ್ತು ಏನನ್ನು ತೆಗೊಂಡಿದ್ದಾರೆ ?" "ಅದೇ ಗೊತ್ತಿಲ್ಲ (ನಾವು ಕೊಟ್ಟರೆ ಅವರಿಗೆ ಆಗುವುದಿಲ್ಲ ಅಥವಾ ಅವರು ಹೇಳಿದ ಹಾಗೆ ಕೇಳುವುದಿಲ್ಲ ಎನ್ನುವ ಕುಂಟು ಪಂಕ್ತಿ ಪಕ್ಕದಿಂದ ಕೇಳಿಸುತ್ತದೆ) 'ಮದ್ದಿನ ಚೀಟಿ ಏನಾದರೂ ಇದೆಯಾ?' "ಇಲ್ಲ ಅದು ಮನೆಯಲ್ಲೇ ಇದೆ. ಅದೆಲ್ಲ ಹೋಗಲಿ ಡಾಕ್ಟ್ರೆ ನೀವು ಬೇರೆಯೇ ಔಷಧಿ ಕೊಡಿ." ಇಂತಹ ಸನ್ನಿವೇಶದಲ್ಲಿ ಅದು ಮಿತವಾದ ಸೌಕರ್ಯವಿರುವ ಆಸ್ಪತ್ರೆಯಲ್ಲಾದರೆ ಡಾಕ್ಟ್ರು ಏನು ಮಾಡಬೇಕು ?

ಇಂದಿನ ಧಾವಂತದ ಯುಗದಲ್ಲಿ ಯಾರಿಗೂ ಪುರುಸೊತ್ತಿರುವುದಿಲ್ಲ. ಅಪ್ಪ ಅಮ್ಮನನ್ನು ನೋಡುವುದಕ್ಕೆ ಮಾತಾಡುವುದಕ್ಕೆ ವ್ಯವಧಾನವಿಲ್ಲ. ಹೊತ್ತು ಹೊತ್ತಿಗೆ ಔಷಧಿಯನ್ನು ಕೊಡುವವರು ಯಾರೂ ಇರುವುದಿಲ್ಲ. ದೂರದ ಊರಿನಲ್ಲಿ, ಪರದೇಶದಲ್ಲಿರುವವರು ಫೋನ್‌ನಲ್ಲಿ ಆರೋಗ್ಯದ ಬಗ್ಗೆ ವಿಚಾರಿಸಿ ಪುಕ್ಕಟೆ ಸಲಹೆಗಳನ್ನು ಕೊಟ್ಟರೆ ತಮ್ಮ ದೊಡ್ಡ ಹೊಣೆಗಾರಿಕೆ ಮುಗಿಯಿತು ಎಂದು ಭಾವಿಸುತ್ತಾರೆ. ಆಸ್ಪತ್ರೆಗೆ ಅಪರೂಪಕ್ಕೊಮ್ಮೆ ಕರೆದು ತರುವುದೇ ಅವರ ಮಹಾನ್ ಸಾಧನೆ ! ಇಂಥವರು ವೈದ್ಯರ ಮೇಲೆ ಕರ್ತವ್ಯಲೋಪದ ಆರೋಪ ಹೊರಿಸುವುದು ಎಂದರೆ ಎಂತಹ ಆಭಾಸ !

*ಮಂಜೇಶ್ವರ* **ಡಾ|| ರಮಾನಂದ ಬನಾರಿ**




# ೯. ತತ್ತ್ವಶಾಸ್ತ್ರದ ಸೋಗಿನಲ್ಲಿ ಮತಧರ್ಮ

ಜಿ. ರಾಮಕೃಷ್ಣ

**ಭಾರತದಲ್ಲಿ ವೇದಾಂತ ದರ್ಶನದ ಪಂಥಗಳು ಗೀತೆಯನ್ನು ಒಂದು ಪ್ರಮುಖ ಆಕರವನ್ನಾಗಿ ಸ್ವೀಕರಿಸಿವೆ. ಉಪನಿಷತ್ತು ಮತ್ತು ಬ್ರಹ್ಮಸೂತ್ರಗಳಿಗೆ ಸಮಾನವಾದ ಸ್ಥಾನವನ್ನು ಗೀತೆಗೂ ನೀಡಲಾಗಿದೆ. ಮೂರನ್ನೂ ಸೇರಿಸಿ "ಪ್ರಸ್ಥಾನತ್ರಯ" ಎನ್ನುತ್ತಾರೆ. ತತ್ತ್ವಶಾಸ್ತ್ರ ಪ್ರಣಾಲಿಕೆಯೊಂದನ್ನು ಗೀತೆಯು ಪ್ರಸ್ತುತಪಡಿಸುತ್ತದೆಂದು ನಿರೀಕ್ಷಿಸಿದರೆ ನಿರಾಸೆಯು ಅನಿವಾರ್ಯ, ಏಕೆಂದರೆ ಅದು ಒಂದು ಮತಧರ್ಮದ ಸ್ವರೂಪ ಮತ್ತು ಆಶಯವನ್ನು ಪ್ರತಿಫಲಿಸುವಲ್ಲಿ ಹೆಚ್ಚು ಆಸಕ್ತಿ ಹೊಂದಿದೆ.**

ಗೀತೆಯ ಆರನೆಯ ಅಧ್ಯಾಯವನ್ನು ಧ್ಯಾನ ಯೋಗದ ಪ್ರತಿಪಾದನೆಗೆ ಮೀಸಲಾದ ಭಾಗವೆಂದು ಪರಿಗಣಿಸುವುದು ರೂಢಿಯಲ್ಲಿದೆ. ಎರಡನೆಯ ಅಧ್ಯಾಯದಲ್ಲಿ ಸ್ಥಿತಪ್ರಜ್ಞನ ಲಕ್ಷಣಗಳನ್ನು ಹೇಳಿರುವುದು ಈಗಾಗಲೆ ಅನೇಕ ಬಾರಿ ಪ್ರಸ್ತಾಪಿಸಿದ್ದೇವೆ. ಲಕ್ಷಣಗಳೇನೋ ಉದಾತ್ತವಾದುವೇ ಸರಿ, ಆದರೆ ಅವನ್ನು ಮೈಗೂಡಿಸಿಕೊಳ್ಳುವುದು ಹೇಗೆ? ಅವು ಸಹಜವಾಗಿಯೇ ಮೂಡಬೇಕೆಂದೇನಾದರೂ ಹೇಳಿದರೆ ಮಾನವನ ಪ್ರಯತ್ನವು ಅನಗತ್ಯವಾಗಿಬಿಡುತ್ತದೆ. ಆದ್ದರಿಂದ ಅಂತಹ ಮಾನಸಿಕ ಸ್ಥಿತಿಯನ್ನು ಯತ್ನತಃ ಸಿದ್ಧಿಸಿಕೊಳ್ಳಬೇಕೇ ವಿನಾ ಅದು ಹೇಗೋ ದಕ್ಕಿಬಿಡುತ್ತದೆ ಎನ್ನುವಂತಿಲ್ಲ. ಮನಸ್ಸಿನ ಗುಣಾತ್ಮಕ ಬದಲಾವಣೆಯ ಕಡೆಗೆ ಸಮಸ್ಥಿತಿಯನ್ನು ನಮ್ಮಲ್ಲಿ ಅಂಕುರಿಸುವಂತೆ ಮಾಡಬೇಕು. ಸ್ಥಿತಪ್ರಜ್ಞನ ಪ್ರಧಾನ ಹೆಗ್ಗುರುತೇ ಅದು. ಯಾವುದೇ ಪರಿಣಾಮವು ಅವ್ಯವಸ್ಥಿತವಾಗಿ ಉಂಟಾಗದಿರುವುದು ಪ್ರಕೃತಿಯ ಮೂಲಭೂತ ನಿಯಮಗಳಿಂದಾಗಿ. ದೈಹಿಕ ಆರೋಗ್ಯವು ರೋಗವಾಗಿ ಬದಲಾವಣೆ ಹೊಂದಬೇಕಾದರೆ ನಿರ್ದಿಷ್ಟ ಕಾರಣಗಳಿರುತ್ತವೆ. ಅವನ್ನು ಎಷ್ಟರಮಟ್ಟಿಗೆ ನಾವು ತಿಳಿಯುತ್ತೇವೋ ಅಷ್ಟರಮಟ್ಟಿಗೆ ಮಧ್ಯಪ್ರವೇಶ ಮಾಡಿ ರೋಗಿಯನ್ನು ನಿರೋಗಿಯಾಗಿ ಮಾಡಲು ಸಮರ್ಥರಾಗುತ್ತೇವೆ. ಅದರಲ್ಲಿ ಅಲೌಕಿಕವಾದುದೇನೂ ಇಲ್ಲ. ತಿಳಿವಳಿಕೆಯಿಂದ ಮಧ್ಯಪ್ರವೇಶ ಮತ್ತು ಅದರಿಂದಾಗಿ ನಿರೀಕ್ಷಿತ ಬದಲಾವಣೆಯ ಸಾಧನೆ: ಇದು ಮೂಲಸೂತ್ರ. ಮನಸ್ಸಿನ ನಿಯಂತ್ರಣಕ್ಕೂ ಇದು ಅನ್ವಯಿಸುತ್ತದೆ. ಉಪನಿಷತ್ತುಗಳ ಕಾಲದಿಂದ ಇದರ ಶೋಧನೆ ನಡೆಯುತ್ತಾ ಬಂದಿರುವುದು ನಮ್ಮ ಸಾಂಸ್ಕೃತಿಕ ಇತಿಹಾಸದ ಒಂದು ಭಾಗ. ಯೋಗಶಾಸ್ತ್ರದಲ್ಲಿ ಇದನ್ನು ವಿಶೇಷವಾಗಿ ಅಧ್ಯಯನ ಮಾಡಲಾಗಿದೆ, ಚರ್ಚಿಸಲಾಗಿದೆ. ಸದಾ ಹರಿದಾಡುವ ಪ್ರವೃತ್ತಿಯುಳ್ಳ ಮನಸ್ಸನ್ನು ಯದ್ವಾತದ್ವಾ ಹರಿದಾಡದಿರುವಂತೆ ಮಾಡುವುದು ಅಥವಾ ನಿರೋಧಿಸುವುದು 'ಯೋಗ' ಎನಿಸಿಕೊಳ್ಳುತ್ತದೆಂದು ಪತಂಜಲಿ ಹೇಳುತ್ತಾನೆ (ಯೋಗಸೂತ್ರ ೧.೨ : ಯೋಗಃ ಚಿತ್ತವೃತ್ತಿ ನಿರೋಧಃ). ಹಾಗೆ ಮಾಡಲು ನಾವು ಸಮರ್ಥರಾದರೆ ಆ ಹಂತದಲ್ಲಿ ನೋಡುವವನು, ನೋಡಲ್ಪಟ್ಟದ್ದು ಮತ್ತು ನೋಡುವ ಪ್ರಕ್ರಿಯೆ ಎಂಬ ಪ್ರತ್ಯೇಕತೆ ಉಳಿಯುವುದಿಲ್ಲ. ಇದನ್ನು ಸಂಸ್ಕೃತದಲ್ಲಿ 'ತ್ರಿಪುಟೀ' ಎನ್ನುತ್ತಾರೆ. ಜ್ಞಾತೃ (ಅಂದರೆ, ಏನನ್ನಾದರೂ ತಿಳಿಯುವವನು), ಜ್ಞೇಯ (ಅಂದರೆ, ಯಾವುದರ ಬಗ್ಗೆ ತಿಳಿಯುತ್ತೇವೋ ಅದು), ಮತ್ತು ಜ್ಞಾನ (ಅಂದರೆ, ತಿಳಿಯುವ ಪ್ರಕ್ರಿಯೆ) ಸಾಮಾನ್ಯವಾಗಿ ಭಿನ್ನ. ಮನಸ್ಸಿನ ಸಂಚಾರವನ್ನು ಸ್ಥಗಿತಗೊಳಿಸಿದಾಗ ಜ್ಞೇಯ ಮತ್ತು ಜ್ಞಾನ ಇಲ್ಲವಾಗುತ್ತವೆ. ಜ್ಞಾತೃವು ತನ್ನ ನಿಜ ಸ್ವರೂಪದಲ್ಲಿರುವುದು ಅಂತಹ ಸ್ಥಿತಿಯಲ್ಲಿ. ಪತಂಜಲಿ ಅದನ್ನು "ತದಾ ದ್ರಷ್ಟುಃ ಸ್ವ-ರೂಪೇ ಅವಸ್ಥಾನಂ" (೧.೩) ಎಂದಿದ್ದಾನೆ. ಏಕಾಗ್ರತೆಯ ಪರಮಾವಸ್ಥೆ ಎಂದರೆ ಇದೇ; ಪ್ರತ್ಯೇಕತೆಗಳು ಅಳಿಸಿಹೋಗಿ ಏಕತ್ವದ ಸಾಧನೆಯಾಗುತ್ತದೆ.

ಒಂದು 'ರುದ್ರಮನೋಹರ ದೃಶ್ಯ'ದ ಸನ್ನಿವೇಶದಲ್ಲಿ ಕುವೆಂಪು ಅವರ ಪೂವಯ್ಯನಿಗೆ ಅದು ಸಿದ್ಧಿಸುತ್ತದೆ. ಸಂಜೆ ವೇಳೆ ಬತ್ತದ ಗದ್ದೆಗಳ ಬದುಗಳ ಮೇಲೆ ಮಂಡಕ್ಕಿ ಪುರಿ ತಿನ್ನುತ್ತಾ ಹೋಗುವ ಗದಾಧರನಿಗೆ ಸಾಲುಸಾಲಾಗಿ ಹಾರುವ ಪಕ್ಷಿಗಣವನ್ನು ನೋಡಿದಾಗ ಅದು ಸಿದ್ಧಿಸುತ್ತದೆ ಮತ್ತು ನಂತರ ಅವನು ಪರಮಹಂಸನಾಗುತ್ತಾನೆ. ವರ್ಡ್ಸ್‌ವರ್ತ್‌ನಂತಹ ಕವಿಯಾದರೆ ಅದನ್ನು "ಏಕಾಂತದ ಪರಮಸುಖ" (ಬ್ಲಿಸ್ ಆಫ್ ಸಾಲಿಟ್ಯೂಡ್) ಎಂದುಬಿಡುತ್ತಾನೆ. ಅಂತಹ ಪರಮಸುಖದ ಮನಃಸ್ಥಿತಿಯನ್ನು ಊಹಿಸಿಕೊಳ್ಳಬಹುದು, ಆದರೆ ಅದನ್ನು ಪಡೆಯುವುದು ಹೇಗೆ? ಅದಕ್ಕೆ ಅಭ್ಯಾಸ (ಅಥವಾ ಪ್ರಯತ್ನ) ಮತ್ತು ವೈರಾಗ್ಯ (ಅಥವಾ ವಿಷಯಗಳಿಗೆ ಕಟ್ಟುಬೀಳದಿರುವಿಕೆ) ಅಗತ್ಯ. ಧ್ಯಾನವೂ ಒಂದು ಸಾಧನ. ಧ್ಯಾನವೆಂದರೆ ಯಾವುದೋ ದೇವರನ್ನು ಕಲ್ಪಿಸಿಕೊಳ್ಳುವ ಅಗತ್ಯವೂ ಇಲ್ಲ. ಯಾವುದೇ ಒಂದನ್ನು ಕೇಂದ್ರೀಕರಿಸಿ, ಸತತವಾಗಿ ಅದೊಂದೇ ಮನಸ್ಸಿನ ಹರಿವಿಗೆ ವಸ್ತುವಾದರೆ, ಅದೇ ಧ್ಯಾನ. "ತತ್ರ ಪ್ರತ್ಯಯ ಏಕತಾನತಾ ಧ್ಯಾನಂ" (ಯೋ.ಸೂ. ೩.೨) ಎನ್ನುತ್ತಾನೆ ಪತಂಜಲಿ. ಸಾಮಾನ್ಯವಾಗಿ ಮನಸ್ಸಿಗೆ ಏಕಕಾಲದಲ್ಲಿ ಹತ್ತಾರು ವಿಷಯಗಳು ವಸ್ತುಗಳಾಗಬಲ್ಲವು, ಆಗಿರುತ್ತವೆ. ವಿಷಯಗಳ ಸಂಖ್ಯೆ ಜಾಸ್ತಿಯಾದ್ದರಿಂದ ಗ್ರಹಿಕೆಯ ಗುಣಾತ್ಮಕತೆಯು ಕೆಳಮಟ್ಟದ್ದಾಗಿರುತ್ತದೆ; ವಿಷಯವು ಒಂದೇ ಆಗುವಂತಿದ್ದರೆ ಗ್ರಹಿಕೆಯ ಗುಣಾತ್ಮಕತೆ ವಿಶಿಷ್ಟವಾಗಿರುತ್ತದೆ. ಇದನ್ನೇ ಏಕಾಗ್ರತೆ ಎನ್ನುವುದು. "ಪರಿಮಾಣಾತ್ಮಕ ಬದಲಾವಣೆಯಿಂದ ಗುಣಾತ್ಮಕ ಬದಲಾವಣೆ" ಎನ್ನುವುದು ಅದರ ಸೂತ್ರ. ಏಕಕಾಲದಲ್ಲಿ ಮನಸ್ಸಿಗೆ ಬರುವ ವಿಷಯಗಳ ವ್ಯಾಪ್ತಿಯನ್ನು ಕನಿಷ್ಠ ಮಟ್ಟಕ್ಕೆ ಇಳಿಸುವುದು ಏಕಾಗ್ರತೆ. "ಏಕಾಗ್ರತೆಯಿಂದ ಅಧ್ಯಯನ ಮಾಡು" ಎಂದು ವಿದ್ಯಾರ್ಥಿಗಳಿಗೆ ನೀಡಲಾಗುವ ಬೋಧನೆಯ ನಿಜಾರ್ಥ ಇದೇ ಆಗಿದೆ. ಇದು ಹೊರಗಣ ಸನ್ನಿವೇಶವನ್ನು ಬದಲಾಯಿಸುವ ಪ್ರಕ್ರಿಯೆಯಲ್ಲ; ವ್ಯಕ್ತಿನಿಷ್ಠವಾಗಿ ನಾವು ಬದಲಾಗುವುದು, ಅಷ್ಟೆ. ಹೊಟ್ಟೆ ಖಾಲಿ ಇರುವಾಗ ಇಲ್ಲವೇ ವಿಪರೀತ ತುಂಬಿರುವಾಗ ಮನಸ್ಸು ಏಕಾಗ್ರತೆಯನ್ನು ಸಾಧಿಸುವುದು ಬಹುಶಃ ದುಷ್ಕರ. ಆದ್ದರಿಂದ ಆ ಸನ್ನಿವೇಶವನ್ನು ಬದಲಿಸುವ ಅಗತ್ಯವಿದ್ದೀತು. ಗೀತೆಯು ಆ ಆಯಾಮವನ್ನು ಪರೀಕ್ಷಿಸಹೋಗುವುದಿಲ್ಲ. ಸುಖ-ದುಃಖಗಳನ್ನು ಮೀರಿ ನಿಲ್ಲುವುದು, ಅವುಗಳಿಂದ ಪ್ರಭಾವಿತರಾಗದಿರುವುದು, ವ್ಯಕ್ತಿಗತ ಸಾಧನೆ. ದುಃಖದಿಂದ ಉದ್ವಿಗ್ನರಾಗದಿರುವುದು, ಸುಖದಿಂದ ಅತ್ಯುತ್ಸಾಹ ತಾಳದಿರುವುದು, ಇವೆಲ್ಲಾ ವೈಯ್ಯಕ್ತಿಕ ಮಾನಸಿಕ ಸಾಧನೆಗಳು (೨.೫೬). ಇದನ್ನು ಸ್ಥಿತಪ್ರಜ್ಞನ ಲಕ್ಷಣಗಳ ಹಿನ್ನೆಲೆಯಲ್ಲಿ ನಾವೀಗಾಗಲೆ ನೋಡಿದ್ದೇವೆ. ಗೀತೆಯ ಆರನೆಯ ಅಧ್ಯಾಯದ ಜ್ಞಾನಯೋಗವು ಅದನ್ನು ವಿಸ್ತರಿಸಿ ಹೇಳುತ್ತದೆ ಮತ್ತು ಅದರಲ್ಲಿ ಪರಾಕಾಷ್ಠೆಯನ್ನು ತಲುಪಿದವರ ವ್ಯಕ್ತಿತ್ವವು ಎಷ್ಟು ಸ್ವಚ್ಛವಾಗಿರುತ್ತದೆ ಎಂಬುದನ್ನು ನಿರೂಪಿಸುತ್ತದೆ. ಅದಕ್ಕೆ ಮೂಲವಾಕ್ಯ "ಉದ್ಧರೇತ್ ಆತ್ಮನಾ ಆತ್ಮಾನಂ" (೬.೫). ಇಲ್ಲಿ 'ಆತ್ಮನ್' ಎಂಬುದು ವ್ಯಕ್ತಿ ಮತ್ತು ಮನಸ್ಸು ಎಂಬೆರಡು ಅರ್ಥಗಳಲ್ಲೂ ಪ್ರಯೋಗವಾಗಿದೆ. "ನಮ್ಮನಮ್ಮ ಮಾನಸಿಕ ಪ್ರವೃತ್ತಿಗಳಿಂದ ನಮ್ಮನ್ನು ನಾವು ವರ್ಧಿಸಿಕೊಳ್ಳಬೇಕು" ಎಂಬುದು ಅದರ ಇಂಗಿತ. ನಮ್ಮ ಸಾಮಾಜಿಕ ಇರವಿಗೂ ನಮ್ಮ ನೆಮ್ಮದಿಗೂ ಸಂಬಂಧ ಇಲ್ಲ; ನೆಮ್ಮದಿಯಿಂದಿರುವಂತೆ ಮನಸ್ಸುಗಳನ್ನು ನಾವು ರೂಢಿಸಿಕೊಳ್ಳಬೇಕು, ಎಂದು ಇದರ ತಾತ್ಪರ್ಯ. ಸಮಾಜದ ಇರುವಿಕೆ ಮತ್ತು ಉದ್ದೇಶಿತ ವಿಕಾಸದ

ಸಂದರ್ಭದಲ್ಲಿ ಈ ತತ್ವದ ಅಪಪ್ರಯೋಗವು ಎಷ್ಟು ಹಾನಿಕರವಾಗಬಹುದೆಂಬುದನ್ನು ಅಂತಃಕರಣವಿದ್ದವರು ತಿಳಿಯುತ್ತಾರೆಂಬುದರಲ್ಲಿ ಸಂಶಯವಿಲ್ಲ. ಸಾಮಾಜಿಕ–ಆರ್ಥಿಕ ಶೋಷಣೆಯ ನಡುವೆ ನಿಶ್ಚಿಂತತೆಯಿಂದಿರು ಎಂದಂತಾಗುತ್ತದೆ. ಹಾಗೆಂದ ಮಾತ್ರಕ್ಕೆ ಮಾನಸಿಕ ಪ್ರವೃತ್ತಿಯನ್ನು ನಿರ್ಮಲವಾಗಿ ಇರಿಸಿಕೊಳ್ಳುವ ಪ್ರಯತ್ನವು ಅಪ್ರಸ್ತುತ ಎಂದರ್ಥವಲ್ಲ. "ಶರೀರ ಮತ್ತು ಮನಸ್ಸು ಹಿಡಿತದಲ್ಲಿದ್ದವರಿಗೆ ಪ್ರಶಾಂತತೆಯುಂಟು; ಅಹಿತ ಮತ್ತು ಹಿತ ಎಂಬ ಪ್ರತ್ಯೇಕ ಭಾವಗಳು ಅವರನ್ನು ಬಾಧಿಸುವುದಿಲ್ಲ. ಸುಖ–ದುಃಖ, ಮಾನ–ಅಪಮಾನ, ಎಂಬ ಭಿನ್ನತೆ ಅವರನ್ನು ಕಾಡುವುದಿಲ್ಲ" (೬.೭ : ಜಿತಾತ್ಮನಃ ಪ್ರಶಾಂತಸ್ಯ ಪರಮಾತ್ಮಾ ಸಮಾಹಿತಃ। ಶೀತೋಷ್ಣಸುಖ ದುಃಖೇಷು ತಥಾ ಮಾನಾಪಮಾನಯೋಃ ॥). ಅವರಿಗೆ ಮಣ್ಣು, ಕಲ್ಲು, ಚಿನ್ನ, ಎಲ್ಲಾ ಒಂದೇ (೬.೮ : ...ಸಮಲೋಷ್ಟಾಶ್ಮ ಕಾಂಚನಃ). ಈ ಭಾವವನ್ನು ವೈಭವೀಕರಿಸಲು ರಾಮಕೃಷ್ಣ ಪರಮಹಂಸರ ಜೀವನದ ಒಂದು ಪ್ರಸಂಗವನ್ನು ಒತ್ತುಕೊಟ್ಟು ವಿಶದೀಕರಿಸುವುದು ರೂಢಿಯಲ್ಲಿದೆ. ಹಣದ ನಾಣ್ಯಗಳನ್ನು ಮತ್ತು ಮಣ್ಣಿನ ಮುದ್ದೆಗಳನ್ನು ಒಟ್ಟಿಗೆ ಅವರು ನದಿಗೆ ಎಸೆಯು ತ್ತಿದ್ದರಂತೆ. ಅದನ್ನು ಪ್ರಾಸಂಗಿಕವಾಗಿ ಒಮ್ಮೆ ಯಾವಾಗಲಾದರೂ ಮಾಡಿದರೋ ಅಥವಾ ಸದಾ ಅದನ್ನೇ ಮಾಡುತ್ತಿದ್ದರೋ ? ಪ್ರತಿದಿನ ಹಣವನ್ನು ನದಿಗೆ ಎಸೆಯಲು ಸಾಕಾಗುವಷ್ಟು ಆದಾಯವಾದರೂ ಅವರಿಗೆಲ್ಲಿತ್ತು ! ಮುಖ್ಯ ವಿಷಯ ಅದಲ್ಲ; ಸ್ನೇಹ, ಶತ್ರುತ್ವ, ಔದಾಸೀನ್ಯ, ಎಲ್ಲವನ್ನೂ ಒಂದೇ ರೀತಿಯಲ್ಲಿ ಪರಿಗಣಿಸುವ ಮಾನಸಿಕ ಪ್ರವೃತ್ತಿಯು ಧ್ಯಾನದಂತಹ ಪರಿಕರದ ಪರಿಣಾಮ ಎಂಬುದು ಮುಖ್ಯ (೬.೯).

ಇದೆಲ್ಲಾ ಒಂದು ಪ್ರವೃತ್ತಿಯ ಪರಿಣಾಮ, ಸರಿ; ಆದರೆ ಅದು ಯಾವುದರ ಪರಿಣಾಮ ? ಅದನ್ನು ಪಡೆಯಲು ಸಾಧನ ಮಾರ್ಗ ಯಾವುದು ? ಆರನೆಯ ಅಧ್ಯಾಯದ ಉಳಿದ ಭಾಗದಲ್ಲಿ (೧೦–೩೨) ಅದನ್ನು ಹೇಳಲಾಗಿದೆ. ಆಯಕಟ್ಟಾದ ಪ್ರದೇಶದಲ್ಲಿ ಉಳಿದುಕೊಂಡು, ಅದರ ಶುಚಿತ್ವವನ್ನು ಕಾಪಾಡಿಕೊಂಡು, ಪ್ರಾಣಾಯಾಮ ಮತ್ತು ಏಕಾಗ್ರತೆಯಿಂದ ಧ್ಯಾನ ಮಾಡುವುದು ಸಾಧನ ಮಾರ್ಗ. ಇದನ್ನು ಗೀತೆಯು ಸಮಗ್ರವಾಗಿ ನಿರೂಪಿಸ ಹೋಗುವುದಿಲ್ಲ. ಭಾಗಶಃ ಕಠೋಪನಿಷತ್ತಿನಲ್ಲಿ ಅದನ್ನು ಪ್ರಸ್ತಾಪಿಸಲಾಗಿದೆ. ಯೋಗಸೂತ್ರ, ಹಠಪ್ರದೀಪಿಕಾ, ಯೋಗವಾಸಿಷ್ಠ, ಮುಂತಾದ ಗ್ರಂಥಗಳು ಅದನ್ನು ಇನ್ನೂ ವ್ಯಾಪಕವಾಗಿ ವಿಸ್ತರಿಸಿ ನಿರೂಪಿಸಿವೆ. ಗೀತೆಯು ಸಂಕ್ಷಿಪ್ತವಾಗಿ ಹೇಳುತ್ತದೆ : ಏಕಾಂತದಲ್ಲಿದ್ದು (೬.೧೦ : ...ರಹಸಿ ಸ್ಥಿತಃ), ಸಂಪತ್ತಿನ ಸಂಗ್ರಹದಲ್ಲಿ ನಿರತನಾಗದೆ (ನಿರಾಶೀಃ), ಸದಾ ಕೈಯನ್ನು ಒಡ್ಡದೆ (ಅಪರಿಗ್ರಹಃ), ಧ್ಯಾನಾಸಕ್ತನಾಗಬೇಕು. ಧ್ಯಾನಸ್ಥ ನಾಗಲು ಮೆತ್ತನೆಯ ಆಸನವನ್ನು ಸಜ್ಜುಗೊಳಿಸಿಕೊಂಡು, ಶರೀರವನ್ನು ನೇರವಾಗಿರಿಸಿಕೊಂಡು, ಸ್ಥಿರವಾಗಿ ಅದರ ಮೇಲೆ ಕೂರಬೇಕು (೬.೧೩ : ಸಮಂ ಕಾಯಶಿರೋಗ್ರೀವಂ ಧಾರಯನ್ ಅಚಲಂ ಸ್ಥಿರಃ); ಮೂಗಿನ ತುದಿಯನ್ನು ಕೇಂದ್ರೀಕರಿಸಿ ಏಕಾಗ್ರತೆಯನ್ನು ಸಾಧಿಸಬೇಕು, ಅತ್ತಿತ್ತ ಮನಸ್ಸು ಹರಿದಾಡಬಾರದು (ಸಂಪ್ರೇಕ್ಷ್ಯ ನಾಸಿಕಾಗ್ರಂ ಸ್ವಂ ದಿಶಶ್ಚ ಅನವಲೋಕಯನ್).

ಹೀಗೆ ಕೂರಬೇಕು, ಹೀಗೆ ಮಾಡಬೇಕು, ಎಂಬುದನ್ನು ಗೀತೆಯು ಬಹಳ ಸಂಕ್ಷಿಪ್ತವಾಗಿ ಹೇಳಿದೆ; ಏಕೆ ಹಾಗೆ ಕೂರಬೇಕು, ಮುಂತಾದ ಪ್ರಶ್ನೆಗಳಿಗೆ ಗೀತೆಗೂ ಮುಂಚೆಯೇ ಬಂದಿದ್ದ ಪತಂಜಲಿಯ ಯೋಗಸೂತ್ರ ಗ್ರಂಥವು ವಿವರಣೆಗಳನ್ನು ನೀಡಿದೆ. ಅನೇಕ ಪ್ರಯೋಗಗಳ ಆಧಾರದ ಮೇಲೆ ಆ ವಿವರಣೆಗಳ ಸಾಧುತ್ವವನ್ನು ೧೯೨೪ರಿಂದ ನಮ್ಮ ದೇಶದಲ್ಲಿ ಪರೀಕ್ಷಿಸುತ್ತಾ ಬಂದಿದ್ದೇವೆ. ಅದನ್ನಿಲ್ಲಿ ಲಂಬಿಸುವ ಅವಶ್ಯಕತೆ ಇಲ್ಲ. ನಾವು ಅಗತ್ಯವಾಗಿ ಗಮನಿಸಬೇಕಾದ ಸಂಗತಿ ಬೇರೆಯೇ ಇದೆ. ಏಕೆಂದರೆ, ಪತಂಜಲಿಯ ಯೋಗ ಮಾರ್ಗಕ್ಕೆ ಭಿನ್ನವಾದ ನೆಲೆಯಲ್ಲಿ ಗೀತೆಯು ಧ್ಯಾನದ ವ್ಯಾಖ್ಯಾನವನ್ನು ಬೆಳೆಸುತ್ತದೆ. ನಾಸಾಗ್ರದೃಷ್ಟಿಯು ಧ್ಯಾನಕ್ಕೆ ಒಂದು ವಿಧಾನ; ಹುಬ್ಬುಗಳ ನಡುವಿನ ಭಾಗದಲ್ಲಿ (ಭ್ರುವೋರ್ಮಧ್ಯೇ) ಕೇಂದ್ರೀಕರಿಸುವುದು ಇನ್ನೊಂದು ವಿಧಾನ. ಇವು ಸಮಾಧಿಗೆ ಹಾದಿ ಮಾಡಿಕೊಡುತ್ತವೆ. ಪತಂಜಲಿ ಮತ್ತು ಅವನ ಪಂಥದವರು ನಿರೂಪಿಸುವ ಧ್ಯಾನ–ಸಮಾಧಿಗಳಿಗೂ ಗೀತೆಯ ಧ್ಯಾನಯೋಗಕ್ಕೂ ಮೂಲಭೂತ ವ್ಯತ್ಯಾಸವೊಂದಿದೆ. ಅದು "ಈಶ್ವರ"ನಿಗೆ ಸಂಬಂಧಿಸಿದ್ದು. ಪತಂಜಲಿಯ ಧ್ಯಾನ ನಿರೂಪಣೆಯಲ್ಲಿ ದೇವರಿಗೆ ಪ್ರಾಧಾನ್ಯವಿಲ್ಲ; ದೇವರೇ ಇಲ್ಲವೆಂದರೂ ತಪ್ಪಲ್ಲ. ಯೋಗಶಾಸ್ತ್ರಕ್ಕೆ ಸಾಂಖ್ಯದರ್ಶನವು ಪೂರಕವಾದ್ದು ಮತ್ತು ಸಾಂಖ್ಯದಲ್ಲಿ ದೇವರಿಗೆ ಅಸ್ತಿತ್ವವಿಲ್ಲ – ಅದೊಂದು ಭೌತವಾದೀ ದರ್ಶನ. ಪತಂಜಲಿಯು "ಈಶ್ವರ ಪ್ರಣಿಧಾನ"ವನ್ನು ಹೇಳಿದ್ದಾನಾದ್ದರಿಂದ ಯೋಗವನ್ನು "ಸೇಶ್ವರ ಸಾಂಖ್ಯ" (ಈಶ್ವರನಿರುವ ಸಾಂಖ್ಯ) ಎನ್ನುವುದೂ ಉಂಟು. ಆದರೆ ಈಶ್ವರನನ್ನು ಕುರಿತು ಧ್ಯಾನ ಮಾಡಬೇಕೆಂಬ ಸಲಹೆಯನ್ನು ಪತಂಜಲಿ ಮುಂತಾದವರು ನೀಡಿಲ್ಲ.

ಆರಂಭದಲ್ಲಿ ನಾವು ಮಾನ್ಯ ಎಂ. ಹಿರಿಯಣ್ಣನವರು ಗೀತೆಯನ್ನು ಕುರಿತು ನೀಡಿರುವ ವ್ಯಾಖ್ಯಾನವನ್ನು ಪ್ರಸ್ತಾಪಿಸಿದ್ದುದನ್ನು ತುಸು ನೆನೆಯೋಣ. ಗೀತೆಯನ್ನು ಅವರು "ಮತಧಾರ್ಮಿಕ" ಗ್ರಂಥವೆಂದು ಪರಿಗಣಿಸಿದರೇ ವಿನಾ ದಾರ್ಶನಿಕ ಗ್ರಂಥವೆಂದಲ್ಲ. ಅವರೇಕೆ ಹಾಗೆ ಮಾಡಬೇಕಾಯಿತು ? ಅದಕ್ಕೆ ಉತ್ತರ ಗೀತೆಯ ಆರನೆಯ ಮತ್ತು ಮುಂದಿನ ಕೆಲವು ಅಧ್ಯಾಯಗಳಲ್ಲಿ ದೊರೆಯುತ್ತದೆ. ೬ನೆಯ ಅಧ್ಯಾಯದ ೧೩ನೆಯ ಶ್ಲೋಕದಲ್ಲಿ 'ಸಮಂ ಕಾಯಶಿರೋಗ್ರೀವಂ' ಮತ್ತು 'ಸಂಪ್ರೇಕ್ಷ್ಯ ನಾಸಿಕಾಗ್ರಂ' ಬಂದಿವೆಯಲ್ಲವೆ ? ೧೪ನೆಯ ಶ್ಲೋಕವು ಪತಂಜಲಿಯನ್ನು ಬಿಸುಟು "ಮಚ್ಚಿತ್ತಃ" ಮತ್ತು "ಮತ್ಪರಃ" ಎಂಬುವನ್ನು ಹೇರುತ್ತದೆ ಮತ್ತು ಇಡೀ ಗ್ರಂಥವು ಅದನ್ನೇ ಆಧಾರಸ್ತಂಭ ಮಾಡಿಕೊಂಡಿದೆ. ಈ "ನಾನು" ಮತ್ತು "ನನ್ನನ್ನು" ಎಂಬ ಭಗವಾನನ ಮಾತುಗಳು "ನನ್ನನ್ನು ಕುರಿತು ಧ್ಯಾನ ಮಾಡು" ಮತ್ತು "ನನ್ನನ್ನು ಸಾಕ್ಷಾತ್ಕರಿಸಿಕೊ" ಎಂಬತ್ತ ಸಾಗುತ್ತವೆ. ಇದು ಸ್ಪಷ್ಟವಾಗಿ ಮತಧರ್ಮದ ಹಾದಿ ಮತ್ತು ಆಶಯ; ದಾರ್ಶನಿಕ ಪರಿಪ್ರೇಕ್ಷ್ಯದಿಂದ ಬಹುದೂರ ಹೋಗಿಬಿಡುವ ಅಪಾಯ ಇಲ್ಲಿದೆ. ಗೀತೆಯಲ್ಲಿ ಅದು ನಡೆದುಹೋಗಿದೆ. ಗೀತೆಯು 'ದರ್ಶನ' ಎಂಬುದರ ವ್ಯಾಪ್ತಿಯನ್ನು ಮೀರದೆ ಇದ್ದಿದ್ದರೆ ಅದು ಹರಿಕಥೆಗಳಿಗೆ, ಗೀತಾಜ್ಞಾನ ಯಜ್ಞಗಳಿಗೆ, ಸಾಮಗ್ರಿಯಾಗುತ್ತಿರಲಿಲ್ಲ. ಗೀತೆಯ ಆಚಾರ್ಯ ಪುರುಷನಾದ ಭಗವಾನ್ ಶ್ರೀಕೃಷ್ಣನು ವಿಶ್ವದ ಸೃಷ್ಟಿಕರ್ತ, ವಿಶ್ವಕ್ಕೆಲ್ಲಾ ಸರ್ವಸ್ವ, ಅವನ ಅನುಗ್ರಹದಿಂದ ಎಲ್ಲವೂ ಸಿದ್ಧಿಸುತ್ತದೆ, ವಿಷ್ಣುವಾದ ಅವನು ಶಿಷ್ಟರ ರಕ್ಷಣೆಗಾಗಿ ಭೂಮಿಯಲ್ಲಿ ಅವತರಿಸಿದ್ದಾನೆ, ದುಷ್ಟರನ್ನು ಶಿಕ್ಷಿಸುತ್ತಾನೆ, ನಾಲ್ಕು ವರ್ಣಗಳನ್ನು ಸೃಷ್ಟಿಸಿ ಸಮಾಜದಲ್ಲಿ ಶ್ರೇಷ್ಠ–ಕನಿಷ್ಠ ಎಂಬ ಭೇದಭಾವವನ್ನು ಹುಟ್ಟುಹಾಕಿದ್ದಾನೆ, ಹೀಗೆ ಅವನ ಮಹಿಮೆಗೆ ಎಲ್ಲೆಯಿಲ್ಲ. ಗೀತೆಯು ಪ್ರಮುಖವಾಗಿ ಪ್ರತಿಪಾದಿಸುವುದು ಇದೇ ಕೃಷ್ಣನ ಸರ್ವಾಂತರ್ಯಾಮಿತ್ವವನ್ನು ಮತ್ತು ಈಗಾಗಲೆ ನಾವು ಪರಿಚಯಿಸಿಕೊಂಡಿರುವ ಸ್ವ–ಧರ್ಮದ ಪರಿಪಾಲನೆಯ ಮಹತ್ವವನ್ನು. "ನನ್ನನ್ನು ಪರಮಗುರಿಯಾಗಿಸಿಕೊಂಡು, ನನ್ನನ್ನು ಕೇಂದ್ರವಾಗಿರಿಸಿಕೊಂಡು ಧ್ಯಾನನಿರತನಾಗು" ಎನ್ನುವುದು ಕೃಷ್ಣನ ಅಂತಿಮ ಸಂದೇಶ (೬.೧೪ : ...ಮನಃ ಸಂಯಮ್ಯ ಮಚ್ಚಿತ್ತೋ ಯುಕ್ತ ಆಸೀತ ಮತ್ಪರಃ). ಎಲ್ಲವೂ ಅವನ ವಿಷಯಕವಾಗಿರಬೇಕೆಂಬುದು ಬಹುಶಃ ಅವನ ಅಹಮಿಕೆಯ ಅಭಿವ್ಯಕ್ತಿ ಇರಬೇಕು ! ಯೋಗಸಾಧನೆಯ ಅಂಗವಾಗಿ ಧ್ಯಾನ ಮಾಡುವವರಿಗೆ ಇದು ವಿಚಿತ್ರವೆನಿಸುತ್ತದೆ. ಅಲ್ಲಿ "ಚಿತ್ತವೃತ್ತಿ ನಿರೋಧ"ಕ್ಕೆ ಅಗ್ರಸ್ಥಾನ, ಪ್ರಾಣಾಯಾಮ–ಪ್ರತ್ಯಾಹಾರ–ಧಾರಣಾ–ಧ್ಯಾನಗಳು ಸಮಾಧಿ ಪೂರ್ವ ಅಭ್ಯಾಸಗಳು. ಯೋಗಾಭ್ಯಾಸಗಳ ವೈಜ್ಞಾನಿಕ ಸಂಶೋಧನೆಯಲ್ಲಿ ಆದ್ಯರಾದ ಸ್ವಾಮಿ ಕುವಲಯಾನಂದರು ಪ್ರಸ್ತುತ ಲೇಖಕನಿಗೆ ಅಭ್ಯಾಸಗಳ ಸೂಚನೆ ನೀಡುತ್ತಾ ೧೯೬೩ರಲ್ಲಿ ಒಂದು ಪ್ರಶ್ನೆ ಕೇಳಿದ್ದರು : "ಏನನ್ನು ಅಥವಾ ಯಾರನ್ನು ಕೇಂದ್ರೀಕರಿಸಿ ನೀನು ಧ್ಯಾನದ ಅಭ್ಯಾಸ ಮಾಡುತ್ತೀಯೆ ?" ಉತ್ತರ : "ಭಾರತದ ಭೂಪಟ." ಅವರು ಅದರ ಬಗ್ಗೆ ತಕರಾರು ಎತ್ತಿರಲಿಲ್ಲ. ಒಂದು ಮತಧರ್ಮದ ಪರಿಧಿಯಲ್ಲಿ



ತಾನೇ ಅಧೀಶನೆಂದು ಗೀತೆಯ ಉಪದೇಶಕ ಭಗವಾನನು ತನ್ನನ್ನು ಪ್ರತಿಷ್ಠಾಪಿಸಿಕೊಳ್ಳುತ್ತಿದ್ದಾನೆ, ಆದೇಶಿಸುತ್ತಿದ್ದಾನೆ. ಇದು ಮತಧರ್ಮದ ಗ್ರಂಥಕ್ಕೆ ಸಾಧ್ಯವಾಗುತ್ತದೆಯೇ ವಿನಾ ದಾರ್ಶನಿಕ ಗ್ರಂಥಕ್ಕಲ್ಲ. ಭಾರತದ ತಥಾಕಥಿತ ಆರು "ಆಸ್ತಿಕ" ದರ್ಶನಗಳಲ್ಲಿ ನ್ಯಾಯ, ವೈಶೇಷಿಕ, ಸಾಂಖ್ಯ ಮತ್ತು ಯೋಗ ಎಂಬ ನಾಲ್ಕು "ಪರಮಾತ್ಮ"ನ ಬಗ್ಗೆ ವಿಶೇಷ ಆಸಕ್ತಿಯನ್ನು ತೋರಿಲ್ಲ. ನ್ಯಾಯ ಮತ್ತು ಯೋಗ 'ಈಶ್ವರ'ನನ್ನು ಹೆಸರಿಸಿವೆ, ಅಷ್ಟೆ. ಪೂರ್ವಮೀಮಾಂಸಾ ದರ್ಶನದಲ್ಲಿ ಈಶ್ವರನು ಕಾಣೆಯಾಗಿದ್ದಾನೆ(ಳೆ). ಶಂಕರನ ಅದ್ವೈತ ವೇದಾಂತಕ್ಕೆ ಈಶ್ವರನ ಅಗತ್ಯವೇ ಇಲ್ಲ, ಆದರೆ ಮತಧರ್ಮದ ನೆಲೆಯಲ್ಲಿ ಅದ್ವೈತಿಗಳು ದೇವರುಗಳ ಆರಾಧನೆ ಮಾಡುತ್ತಾರೆ. ನಿಜಕ್ಕೂ ದೇವರಿಗೆ ಉಚ್ಚ ಸ್ಥಾನ ನೀಡಿ ಅವನಿಂದಲೇ ('ಅವಳಿಂದಲೇ' ಅಲ್ಲ) ಸಕಲವೂ ಜರುಗುತ್ತದೆ ಎಂದು ವಾದಿಸುವ ದರ್ಶನ ಗಳೆಂದರೆ ವಿಶಿಷ್ಟಾದ್ವೈತ ಮತ್ತು ದ್ವೈತ ವೇದಾಂತಗಳು. ಅವು ತತ್ತ್ವಶಾಸ್ತ್ರದ ಪರಿಧಿಯಿಂದ ಹೊರಹೋಗಿ ಮತಧರ್ಮಗಳಾಗಿ ವಿಕಾಸ ಹೊಂದಿವೆ. ಆದ್ದರಿಂದ ಭಗವದ್ಗೀತೆಯು ಅಂಥವರಿಗೆ ಭದ್ರವಾದ ಊರುಗೋಲಾಗಿದೆ. ಮನಸ್ಸನ್ನು ಸಮತೋಲನದಲ್ಲಿ ಇರಿಸಬೇಕೆಂಬುದು ಗೌಣವಾಗಿ, ಭಗವದ್ಭಕ್ತಿಯು ಮುನ್ನೆಲೆಗೆ ಬಂದಾಗ ಧ್ಯಾನದ ಆಯಾಮ ಮತ್ತು ವಿಧಾನಗಳು ಯಾಂತ್ರಿಕವಾಗಿಹೋಗುತ್ತವೆ. ಗೀತೆಯ ಆರನೆಯ ಅಧ್ಯಾಯವು ಇದಕ್ಕೆ ಪರಿಪೂರ್ಣ ಸಾಕ್ಷಿ ಯನ್ನೊದಗಿಸುತ್ತದೆ. ಯೋಗದ ಪರಿಕಲ್ಪನೆಯಾದ "ದ್ರಷ್ಟಾರನು(ಳು) ತನ್ನ ನಿಜ ಸ್ವರೂಪದಲ್ಲಿ ಕಾಣ ಬರುತ್ತಾನೆ(ಳೆ)" – ತದಾ ದ್ರಷ್ಟುಃ ಸ್ವರೂಪೇ ಅವಸ್ಥಾನಂ – ಎಂಬುದು ಗೀತೆಯಲ್ಲಿ ಬೇರೆಯೇ ವ್ಯಾಪ್ತಿಯನ್ನು ಹೊಂದಿದೆ. ಧ್ಯಾನದಿಂದಾಗಿ ಯೋಗಿಯು "ಶಾಂತಭಾವವನ್ನು ಹೊಂದಿ ನಿರ್ವಾಣದತ್ತ ಚಲಿಸುತ್ತಾನೆ, ನನ್ನ (ಅಂದರೆ, ಕೃಷ್ಣನ) ಸಂಸ್ಥೆಯಲ್ಲಿ(!) ಪ್ರವೇಶ ಪಡೆಯುತ್ತಾನೆ (ಅಥವಾ ನನ್ನ ಪರಿಧಿಗೆ ಸೇರಿಬಿಡುತ್ತಾನೆ)" ಎಂದು ಗೀತೆಯು ಹೇಳುತ್ತದೆ (೬.೧೫ : ಯುಂಜನ್ ಏವಂ ಸದಾತ್ಮಾನಂ ಯೋಗೀ ನಿಯತಮಾನಸಃ। ಶಾಂತಿಂ ನಿರ್ವಾಣಪರಮಾಂ ಮತ್‌ಸಂಸ್ಥಾಂ ಅಧಿಗಚ್ಛತಿ ॥). ಇಲ್ಲಿ ಬಳಸಲಾಗಿರುವ 'ನಿರ್ವಾಣ' ಎಂಬ ಪದವು ಬುದ್ಧನ 'ನಿಬ್ಬಾಣ'ವೇ ಇರಬಹುದು, ಆದರೆ ಅವುಗಳ ಪರಿಕಲ್ಪನೆ ತೀರಾ ಭಿನ್ನವಾದವು.

ಇನ್ನುಳಿದಂತೆ ಗೀತೆಯ ಆರನೆಯ ಅಧ್ಯಾಯವು ಧ್ಯಾನಕ್ಕೆ ಅಗತ್ಯವಾದ ದೈಹಿಕ ಸ್ವಾಸ್ಥ್ಯ ಮುಂತಾದವನ್ನು ಉಲ್ಲೇಖಿಸಿದೆ. ಉದಾಹರಣೆಗೆ, ಅಭ್ಯಾಸಿಯು ಯುಕ್ತವಾದ ಆಹಾರ ಸೇವಿಸಬೇಕು, ಯುಕ್ತವಾಗಿ ಓಡಾಡಿಕೊಂಡಿರಬೇಕು, ಯುಕ್ತವಾಗಿ ನಿದ್ರಿಸಬೇಕು, ಯುಕ್ತವಾಗಿ ಕೆಲಸ ಮಾಡಬೇಕು (೬.೧೭); ಅಂದರೆ, ಯಾವುದೂ ಅತಿಯಾಗಬಾರದು, ಅತಿಯಾದ ಮಿತಿಯಲ್ಲೂ ಇರಬಾರದು. ಮನಸ್ಸಿನ ನಿಯಂತ್ರಣವು ಬಲವಂತದಿಂದ ಆಗುವಂಥದಲ್ಲ. ಪಂಚಾಗ್ನಿ ತಪಸ್ಸು, ಚಳಿಗಾಲದಲ್ಲಿ ಗೋಮುಖಕ್ಕೆ ತೆರಳಿ ಗಂಗೆಯಲ್ಲಿ ಮೀಯುವುದು, ಇವೆಲ್ಲಾ ಸೊಗಸಬಹುದು, ಆದರೆ ಅವು ಯೋಗಾಭ್ಯಾಸಕ್ಕೆ ಅಗತ್ಯವಲ್ಲ, ಪೂರಕವಲ್ಲ. ಅಗತ್ಯವಾಗಿರುವುದು ಮನಸ್ಸಿನ ಸಮ ನಡೆ, ಸಮತೋಲನ; ಗಾಳಿ ಇಲ್ಲದಾಗ ಹೂಬತ್ತಿಯು ನಿಶ್ಚಲವಾಗಿ ಉರಿಯುವಂತೆ ಮನಸ್ಸು ಸ್ಥಿರ ವಾಗಿರಬೇಕು. ಚಂಚಲತೆಯು ಧ್ಯಾನಕ್ಕೆ ವಿರೋಧಿ ದಿಕ್ಕಿನದು. (೬.೧೯ : ಯಥಾ ದೀಪೋ ನಿವಾತಸ್ಥೋ ನೇಂಗತೆ...). ಇಂದ್ರಿಯಗಳು ವಿಷಯಗಳನ್ನು ಗ್ರಹಿಸುವ ಹಂತವನ್ನು ಮೀರಿದಾಗಿನ ಮನಸ್ಸಿನ ಸ್ಥಿತಿಯು ಧ್ಯಾನಸ್ಥ ಮನಸ್ಸಿನ ಸ್ಥಿತಿ. ಮಿದುಳಿನ ಕ್ರಿಯೆಗಳನ್ನು ತಿಳಿಯಲು ತಲೆಗೆಲ್ಲಾ ಕ್ಯಾಥೋಡ್‌ಗಳನ್ನು (ಋಣ ವಿದ್ಯುತ್ ದ್ವಾರಗಳನ್ನು) ಹಾಕಿ ಎಲೆಕ್ಟ್ರೋ ಎನ್‌ಕೆಫೆಲೊ ಗ್ರಾಫ್‌ನಲ್ಲಿ ಮಾಪನ ಮಾಡಿದಾಗ ಪಾರವೈಶಾಲ್ಯವು (ಆಂಪ್ಲಿಟ್ಯೂಡ್) ಹುಚ್ಚೆದ್ದು ಕುಣಿಯದೆ ಸಮತಲದಲ್ಲಿ ಇರಬೇಕು. ಸೂಜಿ ಚುಚ್ಚಿದರೆ, ಮಂಜುಗಡ್ಡೆಯ ತುಣುಕನ್ನು ತೊಡೆಯ ಮೇಲಿಟ್ಟರೆ, ಅಥವಾ ಬೇರೇನಾದರೂ ಉದ್ದೀಪನೆ ನೀಡಿದರೆ ಮನಸ್ಸು ಚುರುಕಾಗಿ ಅದಕ್ಕೆ ಸ್ಪಂದಿಸದಿರುವುದು ಆಳವಾದ ಧ್ಯಾನದ ಸೂಚನೆ. ಅಂತಹ ಪ್ರಯೋಗಗಳು ಸಾಕಷ್ಟು ನಡೆದಿವೆ. ಇಂತಹ ಸಾಧನೆಯಲ್ಲಿ ನಿಷ್ಣಾತರಾದವರು ಎಲ್ಲವನ್ನೂ ತಮ್ಮಲ್ಲಿ ಕಾಣಬಲ್ಲರು (೬.೨೯ : ...ಸರ್ವತ್ರ ಸಮದರ್ಶನಃ). ಗೀತೆಯು ಆ ಸ್ಥಿತಿಯನ್ನು ಸುದೀರ್ಘವಾಗಿ ವರ್ಣಿಸಿದೆ. ವಿಶ್ವ ಸಾಹಿತ್ಯದಲ್ಲಿ ಅದರ ಚಿತ್ರಣವು ಹಲವು ರೀತಿಗಳಲ್ಲಿ ದಾಖಲಾಗಿದೆ. ಆಸಕ್ತರು ಒಂದು ಉದಾಹರಣೆಯಾಗಿ ಬೇಕಾದರೆ ಆಂಗ್ಲಕವಿ ವರ್ಡ್ಸ್‌ವರ್ತ್‌ನ 'ಟಿಂಟರ್ನ್ ಅಬ್ಬೆ' ಕವನದ ಸಾಲುಗಳನ್ನು (೯೫–೧೦೫) ಗಮನಿಸಬಹುದು. ಗೀತೆಯ ದೃಷ್ಟಿಯಲ್ಲಿ ಧ್ಯಾನವು ಮುಕ್ತಾಯವಾಗುವುದು ಮನಸ್ಸು 'ಅವನಲ್ಲಿ' ಲೀನವಾಗುವ ಮುಖಾಂತರವೇ! (೬.೩೦ : ಯೋ ಮಾಂ ಪಶ್ಯತಿ ಸರ್ವತ್ರ ಸರ್ವಂ ಚ ಮಯಿ ಪಶ್ಯತಿ). 'ಅವನು' ಎಂಬ ಈಶ್ವರವಸ್ತು ಇಲ್ಲದೆಯೂ ಮನಸ್ಸು ಆಳವಾದ ಧ್ಯಾನಸ್ಥ ಸ್ಥಿತಿಯನ್ನು ತಲಪಬಹುದೆಂಬುದು ವೈಚಾರಿಕ ವಾಸ್ತವ ಎಂದಷ್ಟೇ ಹೇಳಿದರೆ ಸಾಕು.

ಇಷ್ಟು ಅಗಾಧವಾದ ಸಿದ್ಧಿಯು ಮನುಷ್ಯ ಮಾತ್ರ ದವರಿಗೆ ಶಕ್ಯವೇ ಎಂಬ ಅರ್ಜುನನ ಅನುಮಾನವು ಎಲ್ಲರ ಅನುಮಾನದ ಪ್ರತೀಕವೆನ್ನಬಹುದು. "ಚಂಚಲ ಮನಸ್ಸಿಗೆ ಅದು ದಕ್ಕೀತೆ? ಹೇಗೆ ತಾನೆ ಅದನ್ನು ಸಾಧಿಸಲು ಸಾಧ್ಯ? ಗಾಳಿಯ ಚಲನೆಯನ್ನು ಹಿಡಿದು ನಿಲ್ಲಿಸಿದಂತೆಯೇ ಸರಿ" ಎಂಬ ದುಗುಡ ಅರ್ಜುನನದು (೬.೩೪ : ಚಂಚಲಂ ಹಿ ಮನಃ ಕೃಷ್ಣ ಪ್ರಮಾಥಿ ಬಲವತ್ ದೃಢಂ। ತಸ್ಯಾಹಂ ನಿಗ್ರಹಂ ಮನ್ಯೇ ವಾಯೋರಿವ ಸುದುಷ್ಕರಂ ॥). ಯಾವುದೇ ನೈಜ ಯೋಗಪಟುವಿನಂತೆ ಭಗವಾನ್ ಹೇಳುತ್ತಾನೆ, "ಹೌದು, ಅದು ಅಷ್ಟು ಸರಳವಲ್ಲ; ಆದರೆ ಅಭ್ಯಾಸ – ವೈರಾಗ್ಯಗಳಿಂದ ಅದನ್ನು ಗಳಿಸಲು ಸಾಧ್ಯ" (೬.೩೫ : ...ಅಭ್ಯಾಸೇನ ತು ಕೌಂತೇಯ ವೈರಾಗ್ಯೇಣ ಚ ಗೃಹ್ಯತೇ), ಎಂದು. ಜಗ್ಗಿ ವಾಸುದೇವನಂತಹ ಕೃತ್ರಿಮ ಯೋಗಿಗಳು ತಮ್ಮನ್ನು ವೈಜ್ಞಾನಿಕ ಪ್ರಯೋಗಗಳಿಗೆ ಒಡ್ಡಿಕೊಳ್ಳಲು ಏಕೆ ಒಪ್ಪುವುದಿಲ್ಲವೆಂಬುದು ಇದರಿಂದ ಸುಲಭವಾಗಿ ತಿಳಿಯಬಹುದಲ್ಲವೆ? ಧ್ಯಾನಾಸಕ್ತರಾಗುವುದೆಂದರೆ ಅಂಥವರಿಗೆ ನಿದ್ರೆಗೆ ಜಾರುವುದೆಂದಷ್ಟೇ ಅರ್ಥ! ಸ್ವಂತದ ವಿಮಾನದಲ್ಲಿ ಸಂಚರಿಸುತ್ತಾ ಧ್ಯಾನದ ವಿಧಾನ ಮತ್ತು ಮಹತ್ವ ಕುರಿತು ನಿರರ್ಗಳವಾಗಿ ಉದ್ದುದ್ದದ ಉಪನ್ಯಾಸ ನೀಡುವುದು ಕಷ್ಟವಲ್ಲ; ಅದೊಂದು ಚಮತ್ಕಾರ, ಅಷ್ಟೆ. ಆದರೆ ಎನ್‌ಕೆಫೆಲೊ ಗ್ರಾಫ್‌ನಲ್ಲಿ ಆಂಪ್ಲಿಟ್ಯೂಡ್ ಹಿಗ್ಗಾಮುಗ್ಗಾ ಬದಲಾಗದಂತೆ ಧ್ಯಾನನಿರತರಾಗುವುದು ಅಷ್ಟೇನೂ ಸರಳವಲ್ಲ.

ಧ್ಯಾನಯೋಗಕ್ಕೆ ಭಗವಾನನ ಒಗ್ಗರಣೆ ಅನಿರೀಕ್ಷಿತವಲ್ಲ : "ತಪಸ್ಸು, ಜ್ಞಾನ ಮತ್ತು ಕರ್ಮಗಳಿ ಗಿಂತಲೂ ಯೋಗವು ಹೆಚ್ಚು ಉದಾತ್ತವಾದ್ದರಿಂದ ಯೋಗಾಭ್ಯಾಸ ಅಥವಾ ಧ್ಯಾನಯೋಗವು ಶ್ರೇಷ್ಠವಾದ್ದು. ಯೋಗಿಗಳಲ್ಲಿಯೂ ಪರಮಯೋಗಿ ಯಾದವರು ತಮ್ಮ ಮನಸ್ಸುಗಳಲ್ಲಿ ನನ್ನನ್ನು ಭಜಿಸುತ್ತಾರೆ, ನನ್ನನ್ನು ಕೇಂದ್ರೀಕರಿಸಿ ಧ್ಯಾನ ಮಾಡುತ್ತಾರೆ; ಯಾರು ಶ್ರದ್ಧೆಯಿಂದ ಇದನ್ನು ಮಾಡುತ್ತಾರೋ ಅವರೇ ನನ್ನ ಪ್ರಕಾರ ಉತ್ಕೃಷ್ಟ ಯೋಗಿಗಳು" (೬.೪೭ : ಯೋಗಿ ನಾಮಪಿ ಸರ್ವೇಷಾಂ ಮದ್ಗತೇನಾಂತರಾತ್ಮನಾ। ಶ್ರದ್ಧಾವಾನ್ ಭಜತೇ ಯೋ ಮಾಂ ಸ ಮೇ ಯುಕ್ತತಮೋ ಮತಃ ॥). ನಮ್ಮ ತಥಾಕಥಿತ ಆಸ್ತಿಕ ಮಹಾಶಯರಿಗೆಲ್ಲಾ ಈ ಮಾತು ಬಹಳ ಸ್ವಾದಿಷ್ಟ ಎನಿಸುತ್ತದೆ. ಆದರೆ ವಾಸ್ತವವೇನೆಂದರೆ ಯಾವ ದೇವರ ಹಂಗೂ ಇಲ್ಲದೆಯೂ "ಚಿತ್ತನಿರೋಧ"ದ ಭಾಗವಾಗಿ ಧ್ಯಾನದಲ್ಲಿ ತೊಡಗಲು ಯಾವ ಬಾಧಕವೂ ಇಲ್ಲ. ದೇವರಲ್ಲಿ ಕಿಂಚಿತ್ತೂ ಶ್ರದ್ಧೆ ಇಲ್ಲದವರಿಗೆ ಸಹ ಹರಿದಾಡುವ ಮನಸ್ಸಿರುತ್ತದೆ, ಅದನ್ನು ನವಿರಾಗಿ ನಿರ್ಬಂಧಿಸಲು ಅಡ್ಡಿಯಿಲ್ಲ. ದೇವರ ಮೋಹವನ್ನು ವಿಜೃಂಭಿಸುವ ಸಾಹಿತ್ಯದಲ್ಲಿ ಭಗವದ್ಗೀತೆಗೆ ವಿಶಿಷ್ಟ ಸ್ಥಾನವಿದೆ, ಆದರೆ ಅದರಿಂದ ಎಲ್ಲರೂ ಮೋಹಿತ ರಾಗಲೇಬೇಕೆಂಬ ನಿರ್ಬಂಧವೇನೂ ಇಲ್ಲ. ಹಾಗೆ ಮೋಹಿತರಾಗದೆ ಉಳಿಯುವವರನ್ನು ದೂಷಿಸಲು ಮತ್ತು ದಂಡಿಸಲು ಗೀತೆಯ ಮುಂದಿನ, ಅಂದರೆ ಏಳನೆಯ, ಅಧ್ಯಾಯವು ವೃಥಾ ಶ್ರಮಿಸುತ್ತದೆ.

ಭಗವಂತನು "ನಾನೇ ಎಲ್ಲಾ ಸೃಷ್ಟಿಸಿದೆ, ನನ್ನನ್ನು ಯಾರೂ ಸೃಷ್ಟಿಸಲಿಲ್ಲ, ನನ್ನನ್ನು ಮೊರೆಹೋಗು, ನನ್ನನ್ನು ಭಜಿಸು, ನನ್ನನ್ನೇ ಸೇರಿಕೊ, ನಾನೆಲ್ಲರಿಗೂ ರಕ್ಷಣೆ ನೀಡುತ್ತೇನೆ" ಇತ್ಯಾದಿಯಾಗಿ ಹೇಳಿಕೊಳ್ಳುವುದು ಗೀತೆಯ ಕೃಷ್ಣನಿಗೆ ಸೀಮಿತವಾದ ಸ್ವ–ಉಕ್ತಿಯಲ್ಲ. ಗೀತೆಗಿಂತಲೂ ಹೆಚ್ಚು ಪುರಾತನವಾದ ಹಳೆಯ ಒಡಂಬಡಿಕೆಯಲ್ಲಿ ಮೋಸಸ್‌ಗೆ ಭಗವಂತ ಇಂಥವೇ ಮಾತುಗಳನ್ನು ಸ್ವಲ್ಪ ಬೇರೆ ರೀತಿಯಲ್ಲಿ ಹೇಳಿದ್ದಾನೆ. ಅವನು ಸ್ವಲ್ಪ ಕ್ರೂರಿ ಸಹ; ಆದ್ದರಿಂದ "ಬೇರಾರನ್ನಾದರೂ ಪೂಜಿಸಿ ಆಶ್ರಯಿಸಲು ಹೊರಟರೆ ನಿನಗೆ ನೆಟ್ಟಗಾಗುವುದಿಲ್ಲ" ಎಂಬ ಎಚ್ಚರಿಕೆಯ ಮಾತನ್ನೂ ಹೇಳುತ್ತಾನೆ. "ನನ್ನನ್ನಲ್ಲದೆ ಬೇರಾರನ್ನೂ ಮಾನ್ಯ ಮಾಡಕೂಡದು, ಯಾವ ದೇವತೆಯ ಮೂರ್ತಿಯನ್ನೂ ಇಟ್ಟುಕೊಳ್ಳಕೂಡದು" ಎಂದು ಜೆಹೋವಾ ಹತ್ತು ಆಜ್ಞಾಸೂತ್ರಗಳನ್ನು ವಿಧಿಸಿದ್ದಾನೆ. ನಮ್ಮ ಋಗ್ವೇದದ ಕವಿಗಳು ಅವರ ದೇವತೆಗಳ ಬಾಯಲ್ಲಿ ಇಂಥದೇನನ್ನೂ ಹೇಳಿಸಲಿಲ್ಲ ಮತ್ತು ಯಾವನೋ ಒಬ್ಬ ಭಗವಂತ ವಿಶ್ವದ ಸೃಷ್ಟಿ

ಮಾಡಿದನೆಂದು ತಾವೂ ಹೇಳಲಿಲ್ಲ. ಹೀಗಿರುವಾಗ ಗೀತೆಯ ಕೃಷ್ಣನು "ನನ್ನನ್ನು ಸ್ಮರಿಸು, ನಾನು ರಕ್ಷಣೆ ನೀಡುತ್ತೇನೆ, ನನ್ನ ಪ್ರಿಯರ ಕೈ ಬಿಡುವುದಿಲ್ಲ" ಎಂದೆಲ್ಲಾ ಏಕೆ ಹೇಳಹೊರಟನೆಂಬ ವಿಸ್ಮಯವು ಸಹಜವಾಗಿದೆ. ಬಹುಶಃ "ಅಂಥವನೊಬ್ಬ ಯಾರೂ ಇಲ್ಲ" ಎಂದು ಹೇಳುವ ಪಂಥದವರ ಕಾಟವು ಗೀತೆಯ ಕರ್ತೃವಿನ ಕಾಲಕ್ಕೆ ಸ್ವಲ್ಪ ಹೆಚ್ಚೇ ಇದ್ದಿರಬೇಕು. ಜಾನಪದರಲ್ಲಂತೂ ಅಂತಹ ಭಾವನೆಯು ಸಾಕಷ್ಟು ಸಾಂದ್ರವಾಗಿದ್ದಿತು ಎಂಬುದಕ್ಕೆ ಬೌದ್ಧ ಮತ್ತು ಲೋಕಾಯತ ಪರಂಪರೆಯಲ್ಲಿ ಪುರಾವೆಗಳಿವೆ. ಅವೇ ಗೀತೆಗೆ ಪೂರ್ವಪಕ್ಷ ಮತ್ತು ಅವನ್ನು ನಿರಾಕರಿಸುವುದು ಗೀತೆಯ ಸಿದ್ಧಾಂತ. ಆರನೆಯ ಅಧ್ಯಾಯದಲ್ಲಿ ಭಗವಾನನು 'ನಾನು, ನನ್ನಿಂದ ಮತ್ತು ನನಗಾಗಿ' ಎಂಬರ್ಥ ಬರುವ ಮಾತುಗಳನ್ನು ಹೇಳಿರುವುದನ್ನು ಪ್ರಶ್ನಿಸುವವರು ಬುದ್ಧ ಮತ್ತು ಲೋಕಾಯತರು. ಏಳನೆಯ ಅಧ್ಯಾಯವು ಅವರನ್ನು ಬಹುವಾಗಿ ಛೇಡಿಸುತ್ತದೆ. ಅದಕ್ಕೆ ಪೀಠಿಕಾರೂಪದಲ್ಲಿ ಭಗವಾನನು ಪರಮಜ್ಞಾನದ ಮೂಲವನ್ನು ಹೇಳಲು ಉಪಕ್ರಮಿಸುತ್ತಾನೆ. ಅದು ಉಪನಿಷತ್ತುಗಳಲ್ಲಿ ವಿಸ್ತಾರವಾಗಿ ನಿರೂಪಿಸಲಾಗಿರುವ ತತ್ವ. "ಯಾವುದನ್ನು ತಿಳಿಯುವುದರಿಂದ ಎಲ್ಲವನ್ನೂ ತಿಳಿದಂತಾಗುವುದೋ" (ಯೇನ ಜ್ಞಾತೇನ ಸರ್ವಂ ಜ್ಞಾತಂ ಭವತಿ) ಅದನ್ನು ತಿಳಿಸಲು ತೈತ್ತಿರೀಯ ಉಪನಿಷತ್ತು ಮುಂದಾಗಿದೆ. "ಯಾವ ಸೂಕ್ಷ್ಮಾತಿಸೂಕ್ಷ್ಮ ಕಣಗಳಿಂದ ವಿಶ್ವವು ರೂಪುಗೊಂಡಿದೆಯೋ" ಅದನ್ನು ಛಾಂದೋಗ್ಯ ಉಪನಿಷತ್ತು ನಿರೂಪಿಸುತ್ತದೆ. ಗೀತೆಯು ಅದೇ ಸಂಪ್ರದಾಯವನ್ನು ಅನುಸರಿಸುತ್ತದೆ. "ಜ್ಞಾನ ಮತ್ತು ಅದರ ಸಾಕ್ಷಾತ್ಕಾರವನ್ನು ನಿನಗೆ ತಿಳಿಸುವೆ; ಯಾವುದನ್ನು ತಿಳಿಯುವುದರಿಂದ ಇನ್ನು ತಿಳಿಯಬೇಕಾದ್ದು ಏನೂ ಉಳಿದಿರುವುದಿಲ್ಲವೋ ಅದನ್ನು ತಿಳಿಸುತ್ತೇನೆ" (೭.೨ : ಜ್ಞಾನಂ ತೇ ಅಹಂ ಸವಿಜ್ಞಾನಮಿದಂ ವಕ್ಷ್ಯಾಮಿ ಅಶೇಷತಃ। ಯಜ್ಜ್ಞಾತ್ವಾ ನೇಹ ಭೂಯಃ ಅನ್ಯತ್ ಜ್ಞಾತವ್ಯಂ ಅವಶಿಷ್ಯತೇ) ಎನ್ನುತ್ತಾನೆ ಭಗವಾನ್. ಅಂತಹ ಜ್ಞಾನಕ್ಕಾಗಿ ತಹತಹಿಸುವವರು ವಿರಳ; ಹಾಗೆ ಯತ್ನಿಸುವವರಲ್ಲಿ ಕೆಲವರು ಮಾತ್ರವೇ ಅದರಲ್ಲಿ ಯಶಸ್ಸು ಗಳಿಸುತ್ತಾರೆ. (೭.೩ : ಮನುಷ್ಯಾಣಾಂ ಸಹಸ್ರೇಷು ಕಶ್ಚಿದ್ಯತತಿ ಸಿದ್ಧಯೇ। ಯತತಾಮಪಿ ಸಿದ್ಧಾನಾಂ ಕಶ್ಚಿನ್ಮಾಂ ವೇತ್ತಿ ತತ್ತ್ವತಃ॥). ಆದಿಯಲ್ಲೇ "ಎಲ್ಲವನ್ನೂ ತಿಳಿಯುವುದೆಂದರೆ ನನ್ನನ್ನು ತಿಳಿಯುವುದು" ಎಂಬುದನ್ನು ಭಗವಾನನು ಹೇಳಿಕೊಂಡಿದ್ದಾನೆ. ಪ್ರಕೃತಿಯು ಸಹ "ಅವನ" ಪ್ರಕೃತಿಯೇ ಆಗಿದೆ. ಪ್ರಕೃತಿಯಲ್ಲಿ ಎಂಟು ತತ್ವಗಳಿವೆ : ಭೂಮಿ, ನೀರು, ಅಗ್ನಿ, ವಾಯು, ಆಕಾಶ, ಮನಸ್ಸು, ಬುದ್ಧಿ ಮತ್ತು ಅಹಂಕಾರ; ಅಂದರೆ ಪಂಚಭೂತಗಳು ಮತ್ತು ಅವುಗಳಿಂದ ಮೂಡಿದ ಮೂರು ಚಿಂತನಾ ತತ್ವಗಳು (೭.೪). ಮೂಲತಃ ಇದು ಸಾಂಖ್ಯ ದರ್ಶನದ ಪ್ರತಿಪಾದನೆ. ಪ್ರಾಚೀನ ಚೀಣಾ ತತ್ವಶಾಸ್ತ್ರದಲ್ಲಿ ನೀರು, ಬೆಂಕಿ, ಮರ, ಲೋಹ ಮತ್ತು ಪೃಥ್ವಿಗಳನ್ನು ಪಂಚಭೂತಗಳೆಂದು ಹೆಸರಿಸಲಾಗಿದೆ. ವಾಯು ಮತ್ತು ಆಕಾಶ ಪಂಚಭೂತಗಳಲ್ಲಿ ಸೇರ್ಪಡೆಗೊಂಡಿಲ್ಲ. ಸಾಂಖ್ಯವು ನಮ್ಮ ದೇಶದ ಇತಿಹಾಸದಲ್ಲಿ ವಿವಿಧ ರೂಪಗಳನ್ನು ತಳೆಯುತ್ತಾ ಬಂದಿದೆ. ಮೂಲಸಾಂಖ್ಯವು ಭೌತವಾದಿ ತತ್ತ್ವಶಾಸ್ತ್ರವೆಂಬುದು ನಿಸ್ಸಂಶಯ. ಅಲ್ಲಿ ಸೃಷ್ಟಿಕರ್ತನ ಕಲ್ಪನೆಯಿಲ್ಲ – ಪ್ರಕೃತಿಯ ಭೌತ ತತ್ವಗಳು ಸ್ವತಃ ವಿಕಸಿಸುತ್ತಾ ಹೋಗುತ್ತವೆ, ಅದರ ಪರಿಣಾಮವಾಗಿ ಜಗತ್ತು, ಮಾನವ, ಮನಸ್ಸು, ಎಲ್ಲಾ ಅಸ್ತಿತ್ವಕ್ಕೆ ಬರುತ್ತವೆ. ಮೂಲತಃ ಐದು ತನ್ಮಾತ್ರಗಳು (ಅಂದರೆ ಪಂಚಭೂತಗಳ ಅತಿಸೂಕ್ಷ್ಮ ರೂಪ), ಅಹಂಕಾರ, ಮಹತ್ ಮತ್ತು ಅವ್ಯಕ್ತ, ಹೀಗೆ ಎಂಟು ತತ್ವಗಳು; ನಂತರ ಐದು ಮಹಾಭೂತಗಳು, ಐದು ಜ್ಞಾನೇಂದ್ರಿಯಗಳು, ಐದು ಕರ್ಮೇಂದ್ರಿಯಗಳು ಹಾಗೂ ಮನಸ್ಸು, ಹೀಗೆ ಹದಿನಾರು ತತ್ವಗಳು ವಿಕಸನ ಹೊಂದುತ್ತವೆ. ಒಟ್ಟು ೨೪ ತತ್ವಗಳಾದುವು. ಅವು ತಾವಾಗೇ ವಿಕಾಸಗೊಂಡಿರುವ ತತ್ವಗಳು; ಅವಕ್ಕೆ ಬಾಹ್ಯವಾದ ಒಬ್ಬ ಕರ್ತೃವಿನ ಕಲ್ಪನೆ ಸಾಂಖ್ಯದಲ್ಲಿಲ್ಲ. ನಂತರದಲ್ಲಿ 'ಪುರುಷ' ಎಂಬ ತತ್ವ ಸೇರಿಕೊಂಡು ಈಶ್ವರಕೃಷ್ಣನ "ಸಾಂಖ್ಯಕಾರಿಕೆ" ಎಂಬ ಗ್ರಂಥದ ವೇಳೆಗೆ ಸಾಂಖ್ಯದಲ್ಲಿ ೨೫ ತತ್ವಗಳಿವೆ. ಗೀತೆಯ ಭಗವಾನನ ಪ್ರಕಾರ ಪ್ರಕೃತಿಯ ೨೪ ತತ್ವಗಳು ಅಪರಾ (ಅಂದರೆ, ಅಂತಿಮವಾಗಿ ಶ್ರೇಷ್ಠವಲ್ಲದ) ತತ್ವಗಳು; ಆದ್ದರಿಂದ ಅದು 'ಅಪರಾ ಪ್ರಕೃತಿ.' "ಪರಾ ಪ್ರಕೃತಿ" ಎಂದರೆ ತಾನು. ತನ್ನಿಂದ ಜೀವಗಳು ಹೊಮ್ಮಿವೆ, ತನ್ನಿಂದ ಜಗತ್ತು ಹೊಮ್ಮಿದೆ (೭.೫ : ಅಪರಾ ಇಯಮಿತಸ್ತು ಅನ್ಯಾಂ ಪ್ರಕೃತಿಂ ವಿದ್ಧಿ ಮೇ ಪರಾಂ। ಜೀವಭೂತಾಂ ಮಹಾಬಾಹೋ ಯಯಾ ಇದಂ ಧಾರ್ಯತೇ ಜಗತ್ ॥). ಆದ್ದರಿಂದ ತಾನು ಜಗತ್ತಿನ ಸೃಷ್ಟಿಕರ್ತ; ಅದರ ಪ್ರಲಯಕ್ಕೂ ತಾನೇ ಕಾರಣ (೭.೬ : ಏತದ್ಯೋನೀನಿ ಭೂತಾನಿ ಸರ್ವಾಣಿ ಇತ್ಯುಪಧಾರಯ। ಅಹಂ ಕೃತ್ಸ್ನಸ್ಯ ಜಗತಃ ಪ್ರಭವಃ ಪ್ರಲಯಸ್ತಥಾ ॥). ಅಂದರೆ, ಜಗತ್ತು ತಾನಾಗಿಯೇ

ಕಾವ್ಯಲೋಕ

## ಎಲ್ಲೆಗಳ ಊರೋಣ

ಬತ್ತಿದ ಹೊಲದಲಿ ಹಸಿಗಾಯಗಳ ಮುಚ್ಚೋಣ
ಬಿರುಕ ಮನೆಯ ಹೊಸ್ತಿಲಲಿ ದೀಪಗಳ ಹಚ್ಚೋಣ

ಕೊಳೆತ ನೆನಪುಗಳ ನೆಲದಲ್ಲಿ ಹೂತು ಮುತ್ತಾಗಳಾಗಿಸಿ
ಹೊಗೆಯ ನಾಲಿಗೆಯಲಿ ಸತ್ಯದ ಮಾತುಗಳ ಬಿತ್ತೋಣ

ಜಾರಿಬಿದ್ದ ಜತಗಿಯಲಿ ಗೆಲುವಿನ ಗೆಜ್ಜೆ ಮೂಡಿಸಿ
ದೂರದ ಪಯಣದಲಿ ನುಡಿಯಾಗೊ ಹೆಣಿಕೆಗಳ ಕಟ್ಟೋಣ

ಚದುರಿದ ಗುರುತುಗಳ ಬಯಲಲ್ಲಿ ಚಲ್ಲಿ ಕನಸುಗಳಾಗಿಸಿ
ಮುಗಿಲ ಕಣ್ಣಿಗೆ ಮಿಂಚಿನ ಏಣಿಯಾಗಿ ಎಲ್ಲೆಗಳ ಊರೋಣ

ಒಣಗಿದ ನರಗಳ ಸೆಳೆತಕ್ಕೆ ತೇವ ಕಾವೋ ಗುರುತುಗಳಾಗಿ
ಇರುಳ ಮೈಬಣ್ಣಕ್ಕೆ ಜೀವ ಮಿಡಿವ ಗಿರಿ ರೆಕ್ಕೆಗಳ ಕಟ್ಟೋಣ

**ಕಿರಸೂರ ಗಿರಿಯಪ್ಪ ಅಸಂಗಿ**
ಕಿರಸೂರ – ಮುಖ್ಯ ಪೋಸ್ಟ್, ಬಾಗಲಕೋಟೆ ತಾಲೂಕು,
ಬಾಗಲಕೋಟೆ – ೫೮೭ ೧೧೧



ಪ್ರಕೃತಿ ತತ್ವಗಳಿಂದ ವಿಕಸನ ಹೊಂದಿಲ್ಲ, ಅದು ಭಗವಂತನಿಂದ ಸೃಷ್ಟಿಸಲಾಗಿದೆ. ಬುದ್ಧ ಮತ್ತು ಲೋಕಾಯತರು ಈ ತಿಳಿವಳಿಕೆಗೆ ಮಹಾನ್ ವಿರೋಧಿಗಳು. ಅವರಿಂದ ಭಿನ್ನವಾಗಿ ಗೀತೆಯು "ಮುತ್ತುಗಳು ದಾರದಿಂದ ಪೋಣಿಸಲ್ಪಡುವಂತೆ ಜಗತ್ತು ಅವನಲ್ಲಿ (ಅಂದರೆ, ಭಗವಂತನಲ್ಲಿ) ಪೋಣಿಸಲ್ಪಟ್ಟಿದೆ ಮತ್ತು ಅವನನ್ನುಳಿದು ಬೇರೇನೂ ಇಲ್ಲ" (೭.೭ : ಮತ್ತಃ ಪರತರಂ ನಾನ್ಯತ್ ಕಿಂಚಿದಸ್ತಿ ಧನಂಜಯ । ಮಯಿ ಸರ್ವಮಿದಂ ಪ್ರೋತಂ ಸೂತ್ರೇ ಮಣಿಗಣಾ ಇವ ॥) ಎನ್ನುತ್ತದೆ. ವೈಷ್ಣವ ಸಂಪ್ರದಾಯದ ಪ್ರಕ್ರಿಯೆಗಳಿಗೆ ಗೀತೆಯು ಎಂತಹ ಮೂಲಾಧಾರವನ್ನು ಒದಗಿಸಿದೆಯೆಂಬುದು ಇದರಿಂದ ಸ್ಪಷ್ಟವಾಗುತ್ತದೆ. ಭಗವಂತನೆಂಬ ವಸ್ತುವಿಗೆ ಅಸ್ತಿತ್ವವೇ ಇಲ್ಲವೆಂದು ನಂಬುವವರು ಕೃಷ್ಣನ ಸ್ವ-ಮಹಿಮೆಯ ಮಾತುಗಳನ್ನು ಪಕ್ಕಕ್ಕಿಟ್ಟು ಗೀತೆಯ ಹಲವಾರು ಪ್ರಮೇಯಗಳನ್ನು ಅಂತರ್ಗತಗೊಳಿಸಿಕೊಳ್ಳಲು ಅಡ್ಡಿಯಿಲ್ಲ.

ತನ್ನ ಮಹಿಮೆಯನ್ನು ಸಾರಿದ ಭಗವಾನನು ಆ ಮಹಿಮೆಯ ಲಘು ಪರಿಚಯ ಮಾಡಿಕೊಡಲು ಮುಂದಿನ ಏಳು ಶ್ಲೋಕಗಳಲ್ಲಿ (೮-೧೪) ತಾನು ಏನೇನಾಗಿದ್ದಾನೆ ಎಂದು ಪಟ್ಟಿ ಮಾಡಿದ್ದಾನೆ: ನೀರಿನ ರುಚಿ, ಸೂರ್ಯ-ಚಂದ್ರರ ಪ್ರಭೆ, ಆಕಾಶ ಮಾಧ್ಯಮದಲ್ಲಿ ಪಸರಿಸುವ ಶಬ್ದ, ಪುರುಷರ ಪುರುಷತ್ವ (ಸ್ತ್ರೀಯರ ಸ್ತ್ರೀತ್ವದ ಮಾತು ಬಂದಿಲ್ಲ), ಪೃಥ್ವಿಯ ಗಂಧ, ಸಕಲಭೂತಗಳ ಜೀವ, ಬುದ್ಧಿವಂತರ ಬುದ್ಧಿ (ದಡ್ಡರ ದಡ್ಡತನವನ್ನು ಸೇರಿಸಿಲ್ಲ), ಬಲಶಾಲಿಗಳ ಬಲ, ಜೀವಭೂತಗಳಲ್ಲಿ ಧರ್ಮದ ಅವಿರುದ್ಧತೆ (ಅಧರ್ಮಿಗಳ ಅಧರ್ಮ?), ಇತ್ಯಾದಿಗಳೆಲ್ಲಾ ಅವನೇ. ಅಷ್ಟೇಕೆ, ಸತ್ತ್ವ-ರಜಸ್-ತಮೋಗುಣಗಳ ಭಾವವು ಸಹ ಅವನದೇ. ಆದರೆ ಅವನು ಅವನ್ನೆಲ್ಲಾ ಮೀರಿ ನಿಲ್ಲುತ್ತಾನೆ, ಅವನಿಗೆ ಕ್ಷಯವಿಲ್ಲ (೭.೧೩). ಗುಣಗಳ ಮಾಯೆಯನ್ನು ಈಸಿ ಜಯಿಸಬೇಕಾದರೆ ಅವನಲ್ಲಿ ಆಶ್ರಯ ಪಡೆಯಬೇಕು (೭.೧೪).

ಇಲ್ಲಿಂದ ಮುಂದಕ್ಕೆ ಅವನನ್ನು ಆಶ್ರಯಿಸದವರ ದೂಷಣೆ ಇದೆ. ಅಂಥವರು ಇದ್ದುದರಿಂದಲೇ ಗೀತೆಯನ್ನು ಬರೆದು ಪ್ರಚುರಪಡಿಸಬೇಕಾಗಿ ಬಂದಿತೆಂದು ತೋರುತ್ತದೆ. ಭೌತವಾದಿಗಳು ಜಗತ್ತನ್ನು ಭಗವಂತನ ಸೃಷ್ಟಿಯೆಂದು ಹೇಳುವುದಿಲ್ಲ; ಅವರದು ಸಾಂಖ್ಯದ ನಿಲುವು. ಈಗಂತೂ ದಿನಂಪ್ರತಿ ಜಗತ್ತೆಂಬುದು ವಿಸ್ತಾರ ಗೊಳ್ಳುತ್ತಲೇ ಇದೆ. ತಾನೇನೇನು ಸೃಷ್ಟಿ ಮಾಡಿದ್ದಾನೆಂದು ಭಗವಂತನಿಗೇ ತಿಳಿಯಲಾಗದಷ್ಟು ವೇಗವಾಗಿ ಹೊಸ ಬ್ರಹ್ಮಾಂಡಗಳು ಮಾನವನ ದೃಷ್ಟಿ ಪಥದಲ್ಲಿ ಗೋಚರವಾಗುತ್ತಿವೆ. ಸಾವಿರಾರು ಜ್ಯೋತಿರ್ವರ್ಷಗಳ ದೂರದಲ್ಲಿರುವ ಕಾಯಕಗಳು ಇನ್ನೂ ಎಷ್ಟಿವೆಯೋ! ಅವನ್ನೆಲ್ಲಾ ಯಾವನೂ ಮಾಡಲಾರ.

ಅವನ್ನೆಲ್ಲಾ ಭಗವಂತನು ನಿನ್ನೆ-ಮೊನ್ನೆ ಸೃಷ್ಟಿಸಿದನೆ? ಇಷ್ಟನ್ನೆಲ್ಲಾ ಸೃಷ್ಟಿಸುವ ಮೊದಲು ಅವನಿಗೆ ನೆಲೆ ಎಲ್ಲಿದ್ದಿತು ಮತ್ತು ಅದನ್ನು ಸೃಷ್ಟಿಸಿದ್ದು ಯಾರು? ಇಂತಹ ಪ್ರಶ್ನೆಗಳು ನಮ್ಮನ್ನಿಂದು ಆವರಿಸುತ್ತಿವೆ. ಬರ್ನಾರ್ಡ್ ಶಾ ಅವನ್ನು ಸುಮಾರು ಒಂದು ಶತಮಾನದ ಹಿಂದೆಯೇ ಎತ್ತಿದ್ದ. ನಮ್ಮ ದೇಶದಲ್ಲಿ ಪ್ರಾಚೀನ ಲೋಕಾಯತರು ಅಂಥವೇ ವಿಸ್ಮಯಕರ ಪ್ರಶ್ನೆಗಳನ್ನು ಮೂರು ಸಾವಿರ ವರ್ಷಗಳ ಹಿಂದೆ ಎತ್ತಿದ್ದರು. ಅವರನ್ನು ಗೀತೆಯ ಕರ್ತೃವು ತೀಕ್ಷ್ಣವಾಗಿ ಮೂದಲಿಸುತ್ತಾನೆ. "ಪಾಪ ಕರ್ಮಗಳಲ್ಲಿ ತೊಡಗುವ ಮೂಢ ನರಾಧಮರು ಅವರು" ಎಂದು ಭಗವಾನ್ ಕೆಂಡ ಕಾರುತ್ತಾನೆ (೭.೧೫ : ನ ಮಾಂ ದುಷ್ಕೃತಿನೋ ಮೂಢಾಃ ಪ್ರಪದ್ಯಂತೇ ನರಾಧಮಾಃ). ಗೀತೆಯ ಕರ್ತೃವಿನ ಸೌಮ್ಯತೆ ಎಲ್ಲಿ ಕಳೆದುಹೋಯಿತು ಮತ್ತು ಏಕೆ? ವರ್ತಮಾನದಲ್ಲಿ ಆಗಾಗ ಪತ್ರಿಕಾ ಸಮಾಚಾರಗಳು ಪ್ರಕಟಗೊಳ್ಳುತ್ತಿರುತ್ತವೆ: ದೇವರನ್ನೋ, ದೈವಿಕ ಗ್ರಂಥವನ್ನೋ, ದೈವಭಕ್ತರನ್ನೋ ತರ್ಕಬದ್ಧವಾಗಿ ವಿಮರ್ಶಿಸಿದರೆ ಕೆಲವರ ಮನಸ್ಸಿಗೆ ಬಹಳ ಘಾಸಿಯುಂಟಾಗುತ್ತದಂತೆ; ಆದ್ದರಿಂದ ಅವರು ಆಗಾಗ್ಗೆ ಪೊಲೀಸರಿಗೆ ದೂರು ಕೊಡುತ್ತಾರೆ, ವಿಮರ್ಶಕರ ದಸ್ತಗಿರಿಯಾಗುತ್ತದೆ, ಮೊಕದ್ದಮೆಯು ನ್ಯಾಯಾಲಯದಲ್ಲಿ ದಾಖಲಾಗುತ್ತದೆ. ನಮ್ಮ ದಾರ್ಶನಿಕ ಪರಂಪರೆಯ ಸಾಂಖ್ಯ-ಬೌದ್ಧ-ಲೋಕಾಯತ ಪಂಥಗಳ ನಿಲುವನ್ನು ಸ್ವೀಕರಿಸಿರುವವರನ್ನು ಕುರಿತು ಸ್ವತಃ ಗೀತೆಯೇ ಮೂಢರು, ಪಾಪಕರ್ಮಿಗಳು, ನರಾಧಮರು, ಎಂದೆಲ್ಲಾ ಬೈಗುಳ ಸುರಿಸುತ್ತದೆ. ಅವರ ಮನಸ್ಸಿಗೆ ನೋವಾದರೆ ಯಾರಿಗೆ ದೂರು ಕೊಡಬೇಕು? ಅಥವಾ ಅವರಿಗೆ ನೋವುಂಟಾದರೆ ಅದು ಬಹಳ ಮಾನ್ಯವೋ? ಭಾರತದ ಸಾಂಸ್ಕೃತಿಕ ಇತಿಹಾಸದಲ್ಲಿ ಭಗವದ್ಗೀತೆಯ ಉದ್ದೇಶ, ಸ್ಥಾನ ಮತ್ತು ಪ್ರಭಾವ ಇದರಿಂದ ಚೆನ್ನಾಗಿ ತಿಳಿಯುತ್ತದೆ.

ಇರಲಿ, ಮೂಢರಲ್ಲದವರು ಮತ್ತು ನರಾಧಮರಲ್ಲದವರು ಭಗವಂತನನ್ನು ಆಶ್ರಯಿಸುವುದು ಏತಕ್ಕಾಗಿ? ಮೌಢ್ಯದ ಪರಿಹಾರಕ್ಕಾಗಿಯೆ? ಗೀತೆಯ ಪ್ರಕಾರ ನಾಲ್ಕು ವಿಧದವರು ದೇವರ ಮೊರೆಹೋಗುತ್ತಾರೆ. ಕಷ್ಟಕ್ಕೆ ಸಿಲುಕಿರುವವರು (ಆರ್ತರು), ಜ್ಞಾನಾರ್ಥಿಗಳು, ಸಂಪತ್ತನ್ನು ಅರಸುವವರು ಮತ್ತು ಜ್ಞಾನಿಗಳು (೭.೧೬: ...ಆರ್ತೋ ಜಿಜ್ಞಾಸುಃ ಅರ್ಥಾರ್ಥೀ ಜ್ಞಾನೀ ಚ...). ಅದರಲ್ಲೂ ಮೊದಲ ಮತ್ತು ಮೂರನೆಯ ವಿಧದವರೇ ಹೆಚ್ಚು. ಜ್ಞಾನಿಗಳು ಬೌದ್ಧ, ಸಾಂಖ್ಯ ಮತ್ತು ಲೋಕಾಯತ ದರ್ಶನಗಳತ್ತಲೂ ಹೊರಳಬಹುದು. ಜ್ಞಾನಿಗಳು ಭಗವಾನನಿಗೆ ಬಹುಪ್ರಿಯರಂತೆ (೭.೧೭); ಏಕೆಂದರೆ ಅವರು ಅವನನ್ನು ಪೂರ್ಣವಾಗಿ ಅತ್ಯುತ್ತಮ ಗುರಿಯೆಂದು ಸ್ವೀಕರಿಸುತ್ತಾರೆ (೭.೧೮ : ... ಆಸ್ಥಿತಃ ಸ ಹಿ ಯುಕ್ತಾತ್ಮಾ ಮಾಮೇವಾನುತ್ತಮಾಂ ಗತಿಂ). ಅಂಥವರೇ ಮಹಾತ್ಮರು, ಅತಿವಿರಳರು. ಎಷ್ಟೋ ಜನ್ಮಗಳನ್ನು ಕಳೆದ ನಂತರ ಜ್ಞಾನಿಯು ಭಗವಂತನತ್ತ ಹೊರಳುತ್ತಾನೆ, ವಾಸುದೇವನೇ ಸರ್ವಸ್ವವೆಂಬ ತಿಳಿವು ಅವನಲ್ಲಿ ಮೂಡಿರುತ್ತದೆ (೭.೧೯: ಬಹೂನಾಂ ಜನ್ಮನಾಂ ಅಂತೇ ಜ್ಞಾನವಾನ್ ಮಾಂ ಪ್ರಪದ್ಯತೇ। ವಾಸುದೇವಃ ಸರ್ವಮಿತಿ ಸ ಮಹಾತ್ಮಾ ಸುದುರ್ಲಭಃ॥). ಗಾಂಧೀಜಿಯನ್ನು 'ಮಹಾತ್ಮ' ಎಂದು ಕರೆದಿರುವುದು ಸರಿಯೇ ಎಂದು ಕೆಲವು ವಿದ್ವಾಂಸರು ಹುಬ್ಬೇರಿಸುತ್ತಾರೆ: ಗೀತೆಯು 'ಮಹಾತ್ಮ'ನಿಗೆ ಹೇಳಿರುವ ಲಕ್ಷಣಗಳು ಅವರಲ್ಲಿದ್ದುವೇ ಎಂಬುದು ಅವರ ಶಂಕೆಗೆ ಕಾರಣ. ಏನೇ ಇರಲಿ, "ಸ ಮಹಾತ್ಮಾ ಸುದುರ್ಲಭಃ" ಎಂಬುದು ಗಾಂಧೀಜಿಗೆ ಅನ್ವಯವಾಗುತ್ತದೆಂದು ಅವರು ಒಪ್ಪುತ್ತಾರೆಂದು ಭಾವಿಸಬಹುದು. ಭಗವಾನನು ಪರಮದೈವ ಆದರೆ ಅನ್ಯ ದೇವರುಗಳಿವೆ, ಅವಕ್ಕೂ ಭಕ್ತರು ಮುಗಿಬೀಳುತ್ತಾರಲ್ಲ! ಇದು ಭಗವಾನನಿಗೂ ತಿಳಿದಿದೆ. ಆದರೆ ಅವನು ತಾನೆ ಏನು ಮಾಡಿಯಾನು? ಒಬ್ಬೊಬ್ಬರದೂ ಒಂದೊಂದು ಆಸೆ, ಅವುಗಳ ಪೂರೈಕೆಗಾಗಿ ಅವರ ಮನಬಂದಂತೆ ಯಾವಯಾವ ದೇವರುಗಳಿಗೋ ಅಡ್ಡ ಬೀಳುತ್ತಾರೆ. ಅದು ಅವರವರ ಸ್ವಭಾವದಂತೆ ನಡೆಯುತ್ತದೆ. (೭.೨೦: ಕಾಮೈಃ ತೈಸ್ತೈಃ ಹೃತಜ್ಞಾನಾಃ ಪ್ರಪದ್ಯಂತೇ ಅನ್ಯದೇವತಾಃ। ತಂತಂ ನಿಯಮಮಾಸ್ಥಾಯ ಪ್ರಕೃತ್ಯಾ ನಿಯತಾಃ ಸ್ವಯಾ॥). ಅವರವರ ಸ್ವಭಾವಕ್ಕನು ಗುಣವಾಗಿ ಯಾವಾವುದೋ ದೇವರಗಳ ಪಾದಕ್ಕೆರಗುವುದನ್ನು ಭಗವಾನನು ಮನ್ನಿಸುವುದಾದರೆ ಯಾವ ದೇವರ ಪಾದಕ್ಕೂ ಎರಗದವರನ್ನು 'ನರಾಧಮರು' ಎಂದೇಕೆ ಭಗವಾನನು ಜರಿದಿದ್ದು? ಅವರಿಗೂ ಒಂದು ಸ್ವಭಾವವಿರಬೇಕಲ್ಲವೆ? ಗೀತಾಚಾರ್ಯನಿಗೆ ಭಕ್ತರು ಬೇಕು, ಯಾವ ದೇವರ ಭಕ್ತರಾದರೇನಂತೆ? ಅನ್ಯದೇವರುಗಳನ್ನು ಸಮಾಜವು ಒಪ್ಪಿದ್ದುದರಿಂದ ಗೀತೆಯು ಅವರನ್ನು ಮಾನ್ಯ ಮಾಡಬೇಕಾಯಿತು ಎನಿಸುತ್ತದೆ. ಅಷ್ಟಾಗಿಯೂ ಗೀತೆಯು ವೈಷ್ಣವ ಪಂಥಕ್ಕೆ ಹತ್ತಿರವಿರುವಷ್ಟು ಶೈವಪಂಥಕ್ಕೆ ಹತ್ತಿರವಾಗಿಲ್ಲವೆಂಬುದು ಚಾರಿತ್ರಿಕ ವಸ್ತುಸ್ಥಿತಿ. ಎಲ್ಲ ರೀತಿಯ ಆಚರಣೆಗಳು, ಪೂಜೆ ಮುಂತಾದುವಕ್ಕೆ ಗೀತೆಯ ಸಮರ್ಥನೆಯಂತೂ ಉಂಟು. ದೈವವನ್ನು ಆಶ್ರಯಿಸುವವರು ಗೀತೆಯ ದೃಷ್ಟಿಯಲ್ಲಿ ವಂದ್ಯರಾಗಿ ಬಿಡುತ್ತಾರೆ. ಆದರೆ ಬೇರೆ ದೈವಗಳು ಕರುಣಿಸುವ ಫಲಗಳನ್ನು ಸಹ ತಾನು, ಅಂದರೆ ಪರಮದೈವವು, ನಿರ್ಧರಿಸುವುದು ಎಂಬುದು ಗೀತೆಯ ಮಾತು (೭.೨೨ : ಸ ತಯಾ ಶ್ರದ್ಧಯಾ ಯುಕ್ತಃ ತಸ್ಯಾರಾಧನಮೀಹತೇ। ಲಭತೇ ಚ ತತಃ ಕಾಮಾನ್ ಮಯೈವ ವಿಹಿತಾನ್ ಹಿ ತಾನ್ ॥). ಅರ್ಥಾತ್, ಗೀತೆಯು ಸತ್ಯನಾರಾಯಣ ವ್ರತವನ್ನು ಮಾನ್ಯ ಮಾಡುವಂತೆ ಮಾರಮ್ಮನ ಪೂಜೆಯನ್ನೂ ಮಾನ್ಯ ಮಾಡುತ್ತದೆ; ಯಾವ ದೇವರ ಬಳಿಯೂ ಯಾಚನೆಗೆ ಕೈಯೊಡ್ಡದವರು ಮಾತ್ರವೇ ನರಾಧಮರು !!

ಏಳನೆಯ ಅಧ್ಯಾಯದ ಉಳಿದ ಭಾಗದಲ್ಲಿ ಭಗವಂತನು ತನ್ನ ಕೀರ್ತಿ, ಅಸೀಮಿತತೆ, ದೃಢಭಕ್ತಿಯುಳ್ಳವರ ಶ್ರದ್ಧೆ, ಮುಂತಾದುವನ್ನು ಪ್ರಸ್ತಾಪಿಸುತ್ತಾನೆ. ಒಟ್ಟಿನಲ್ಲಿ, ಈ ಅಧ್ಯಾಯವು ತತ್ತ್ವಶಾಸ್ತ್ರದ ಪ್ರಣಾಲಿಕೆಯೊಂದನ್ನು ಮುಂದಿಡುವುದ ಕ್ಕಿಂತಲೂ ಹೆಚ್ಚಾಗಿ ಮತಧಾರ್ಮಿಕ ಆಯಾಮಗಳನ್ನು ಗುರುತಿಸಿ ಅವಕ್ಕೆ ಸಮರ್ಥನೆ ನೀಡುತ್ತದೆ. ಕಡೆಯಲ್ಲಿ ಬರುವ ಮಾತಿದು: "ಮುದಿತನ ಮತ್ತು ಸಾವು ಆತಂಕದ ಸಂಗತಿಗಳು; ಅವನ್ನು ಜಯಿಸಲು ನನ್ನನ್ನು ಆಶ್ರಯಿಸುವುದು ಉಂಟು. ಅಂಥವರು ಬ್ರಹ್ಮಜ್ಞಾನವನ್ನು ಪಡೆಯಬಲ್ಲರು" (೭.೨೯: ಜರಾಮರಣಮೋಕ್ಷಾಯ ಮಾಂ ಆಶ್ರಿತ್ಯ ಯತಂತಿ ಯೇ। ತೇ ಬ್ರಹ್ಮ ತದ್ವಿದುಃ ಕೃತ್ಸ್ನಂ ಅಧ್ಯಾತ್ಮಂ ಕರ್ಮ ಚಾಖಿಲಂ ॥). ಅದು ಮುಂದಿನ ಅಧ್ಯಾಯಕ್ಕೆ ಪೀಠಿಕೆಯಂತಿದೆ.

**ಜಿ. ರಾಮಕೃಷ್ಣ**
೨-ಎಫ್, ಪವನ ಪರಂಜ್ಯೋತಿ ಅಪಾರ್ಟ್‌ಮೆಂಟ್ಸ್
೨೨/೧, ೪ನೇ ಕ್ರಾಸ್, ಕಾವೇರಿನಗರ, ಬನಶಂಕರಿ ೩ನೇ ಹಂತ, ಬೆಂಗಳೂರು - ೫೬೦ ೦೮೫

# ಒಂದು ಪೇರಲ ಗಿರಾಕಿ



ಸಂಜೆ ಬರುತ್ತೇನೆ ಕಾದಿರು
ಎಲ್ಲಿಗಾದರೂ ಹೋಗುವುದಿದ್ದರೆ
ಹೋಗಿ ಬಂದು ಇಲ್ಲೇ ಇರು

ಈ ಜಾಗೆಯಲ್ಲೇ ನೀನು
ಭೇಟಿಯಾದ ಎದೆಯಲ್ಲಿ
ಭಾವದಂಗಡಿ ತೆರೆದೆ
ಹುಬ್ಬುಗಳೊಡನೆ ಆರಂಭಿಸಿದ ಭಾಷೆಗೆ
ರೆಪ್ಪೆ , ತುಟಿ, ನಾಲಗೆ
ಕೈ ಈಗೀಗ ಮೈ ಕೂಡ
ಒಗ್ಗಿಕೊಂಡಿದೆ

ವಿಚಾರಗಳೆಲ್ಲ ಇತಿಹಾಸದ
ಪುಟ ಸೇರುತ್ತಿವೆ
ಅಲ್ಲೂ ಅವುಗಳಿಗೆ ನಿರಾಳತೆಯಿಲ್ಲ
ಇಟ್ಟ ಹೊತ್ತಿಗೆಯನ್ನೆತ್ತಿಕೊಳ್ಳದೆ
ಗೆದ್ದಿಲಿಗೆ ಸುಗ್ಗಿ

ಬದುಕು, ಬಂಡಾಯ
ಸಮಾಜ ಒಂದೊಂದೇ ಈಗ
ಹಿಂದೆ ಸರಿಯುತ್ತಿವೆ
ಹಗಲಿಗೆ ಕಾಣಿಸುವ
ಕಸುವು ಕಮ್ಮಿಯಾದಂತೆ
ಅನುಭವ
ನನಗಷ್ಟೇ ಆಗಿರಲೂಬಹುದಲ್ಲವೇ?

ಬುದ್ಧ–ಬಸವರ ಉಕ್ತಿಗಳ
ಫಲಕ ತೊಟ್ಟಿಕ್ಕುವ ಹನಿಗೆ
ಹಸಿಯಾಗಿ ಹಣ್ಣಣ್ಣಾಗಿವೆ
ಕೆಲವು ಅರ್ಥಕ್ಕೆ ಅನರ್ಥ ಬರುವಂತೆ
ರೂಪಾಂತರವಾಗಿವೆ

ಬಿಜ್ಜಳನ ಕಿವಿಯಲ್ಲಿ
ಅಬದ್ಧ ನುಡಿಯಲು
ಬದ್ಧರಾಗಿದ್ದವರ ಸಂತತಿಯೇ
ಕಾಣಸಿಗುತ್ತವೆ
ಒಂಚೂರು ಧೈರ್ಯ ಬಂದಿದೆ
ಮುಸುಕು ಅವರಿಗೆ ಬೇಡಾಗಿರಬಹುದು
ನಮಗೆ ನನ್ನಂಥವರಿಗೆ ಬೇಕಾಗಿದೆ

ಬೇಕು ಬೇಡಗಳ ಮಾತು ಬಂದಾಗ
ನಾನು ನೀನು ಎಂಬ ಅಹಮ್ಮು
ನಾನೆಂದರೆ ನಾನಷ್ಟೇ ಅಲ್ಲ ನೀನೆಂದರೆ
ನೀನಷ್ಟೆಯೂ ಅಲ್ಲವಲ್ಲ !

ಕತ್ತಲಿಗೆ ಬೆತ್ತಲೆಯನ್ನು
ಬೆಳಕಿಗೆ ತರದ ಉಮೇದಿರಬೇಕು
ನೀನು ಬೆಳಕನ್ನೇ ಬೆತ್ತಲು ಮಾಡಿ
ಕತ್ತಲೆಯನ್ನು ಹೊದಿಸಿದ ಭೂಪ
ತಾಪಕ್ಕೆ ಎಷ್ಟೊಂದು ರೂಪಗಳು
ಹುಟ್ಟಿಸುವ ತಾಪಕ್ಕೂ ಹುಟ್ಟಡಗಿಸುವ
ತಾಪಕ್ಕೂ

ಹೋಲಿಕೆಯೇ

ಹೀಗೆ ಇನ್ನೂ ಚರ್ಚಿಸಬೇಕೆಂದು
ಹೇಳ ಹೋದಳು
ಕಾಯದೇ ಇರುವುದು
ಗಂಡಸುತನವೆ?
ಹೇಡಿತನದ ಫಿರ್ಯಾದಿ ಹಗುರವೆ?
ಕಾಯುತ್ತ ಕುಳಿತೆ

ಒಂದೇ ರಸಗುಲ್ಲ
ನಾಲ್ಕು ತುಟಿಗಳು ಸೋಕಿದ್ದು
ಬೆರಳುಗಳು ಬೆರಗನ್ನು ತಡವಿದ್ದು
ಉಸಿರು ಹೃದಯವನ್ನು ತಾಕಿದ್ದು
ಕಣ್ಣಲ್ಲೆ ನಕ್ಕಿದ್ದು
ಯಾರೋ ನಕ್ಕು ಅಣಕಿಸಿದಂತೆ
ತಿರುಗಿ ನೋಡಿದರೆ
ಕಾಯಂದವರೇ ಇಲ್ಲ
ಇನ್ನೆಲ್ಲಿ ಬೇರೆಯವರು...!

ಸಂಜೆ ಸರಿದು ಸಾಕಷ್ಟು
ಸಮಯವಾಯ್ತು
ಬೀದಿ ದೀಪಗಳು
ರಮಿಸುತ್ತಿವೆ ಬಾಟಲಿಗಳನ್ನು
ಎಡವುತ್ತ ನಾನು ಮತ್ತೆ
ಬಂಡಾಯ, ಬದುಕು
ಹೋರಾಟ ಅನ್ನಬೇಕಿದೆ

ಪಾದವೆಲ್ಲ ಬೊಬ್ಬೆಗಳೆದ್ದು
ನಡೆಯಲಾಗುತ್ತಿಲ್ಲ ನಾನಾವ
ಬೆಂಕಿ ತುಳಿದೆ ? ಅವಳು
ಕನಸು ಮಾರುವ ಅಂಗಡಿಯಂತೆ
ಪೇರಲ ಕೊಡುತ್ತಿದ್ದ ಅಜ್ಜಿ
ಇಂದೇಕೋ ಖಾಲಿ ಎಂದು
ಕಣ್ಣೀರಿಟ್ಟಳು ಬರಿಗೈಯಲ್ಲಿ
ನನ್ನ ನೋಡದಾದಳು

ಅವಳಿಗೆ ಕರುಳು ಹೊಕ್ಕು
ನೋಡುವ ಕಣ್ಣಿರಬೇಕು
ನನ್ನ ನೋವು ಕಂಡುಬಿಟ್ಟಿತು
ತಾಯಾಗಿದ್ದರೆ
ಅಪ್ಪಬಹುದಿತ್ತು
ನಾನೋ ಕೇವಲ
ಒಂದು ಪೇರಲ ಗಿರಾಕಿ
ನೀನಂತೂ ಮರೀಚಿಕೆ
ಏನು ಮಾಡುವುದು?




**ವಿನಾಯಕ ರಾ. ಕಮತದ**
(ಶಿಕ್ಷಕರು ಸ.ಹಿ.ಪ್ರಾ.ಶಾಲೆ, ನಾಗಾವಿ), ನಂ. ಎಲ್.ಐ.ಜಿ. ೧೨೬, ರಾಧಾಕೃಷ್ಣನ್ ನಗರ, ಮುಳಗುಂದ ರಸ್ತೆ , ಗದಗ – ೫೮೨ ೧೦೩





# ಕನ್ನಡ ಶಾಲೆಗಳ ದುಸ್ಥಿತಿ – ಯಾರು ಹೊಣೆ?

**○ ಗೋಪಾಲ್ ಪೆರಾಜೆ**

ಒಂದು ಕಾಲದಲ್ಲಿ ಶಿಕ್ಷಣದ ಗುಣಮಟ್ಟದ ಕುಸಿತ ಎನ್ನುವುದು ಪ್ರಾಥಮಿಕ ಶಾಲಾ ಹಂತಕ್ಕಷ್ಟೆ ಸೀಮಿತವಾಗಿತ್ತು. ಕ್ರಮೇಣ ಅದು ಕಾಲೇಜು ಮೆಟ್ಟಿಲು ಏರಿ ಈಗ ವಿಶ್ವವಿದ್ಯಾನಿಲಯದ ಮಟ್ಟಕ್ಕೆ ಬಂದು ನಿಂತಿದೆ. ಇದಕ್ಕೆ ನಿದರ್ಶನವೆಂಬಂತೆ ಜಗತ್ತಿನ ೨೦೦ ಅತ್ಯುತ್ತಮ ವಿ. ವಿ.ಗಳ ಪಟ್ಟಿಯಲ್ಲಿ ಭಾರತದ ಹೆಸರೇ ಇಲ್ಲ. ಅದಿರಲಿ, ಪ್ರಾಥಮಿಕ ಶಾಲಾ ಶಿಕ್ಷಣದ ಗುಣಮಟ್ಟದ ಬಗ್ಗೆ ಅಸರ್, ಯುನಿಸೆಫ್, ಪ್ರಥಮ್‌ನಂತಹ ಸ್ವಯಂಸೇವಾ ಸಂಘಟನೆಗಳು ಮಾತ್ರವಲ್ಲ, ಸ್ವತಃ ಸರಕಾರದ ಶಿಕ್ಷಣ ಇಲಾಖೆ ನಡೆಸಿದ ಸಮೀಕ್ಷೆಗಳು ಗುಣಮಟ್ಟದ ಕುಸಿತದ ಕುರಿತು ಸಾಕಷ್ಟು ಸಾಕ್ಷಿಗಳನ್ನು, ಪುರಾವೆಗಳನ್ನು ನಮ್ಮ ಮುಂದೆ ಹೊರಹಾಕಿವೆ. ಶೈಕ್ಷಣಿಕ ವ್ಯವಸ್ಥೆಗೆ ಬಂದಿರುವ ಈ ಅಧೋಗತಿಗೆ ಯಾರು ಹೊಣೆ ಎಂಬಂತಹ ಹತ್ತಾರು ಪ್ರಶ್ನೆಗಳು ನಮ್ಮೆದುರಿಗೆ ಬರುತ್ತಿವೆ. ಶೈಕ್ಷಣಿಕ ಗುಣಮಟ್ಟದ ಕುಸಿತ ಕೇವಲ ಸರಕಾರಿ ಶಾಲೆಗಳಿಗೆ ಮಾತ್ರ ಸೀಮಿತವಾಗಿಲ್ಲ, ಖಾಸಗಿ ಶಾಲೆಗಳಲ್ಲಿ ಕೂಡ ಇದು ಸತ್ಯ. ಇದರರ್ಥ ಸಮಾಜ ನಿರ್ಮಾಣದ ತಳಪಾಯ ಶಿಥಿಲವಾಗುತ್ತಿದೆ. ಬುನಾದಿಯೇ ಕುಸಿಯುತ್ತಿದೆ.

ಶಾಲೆಗಳು ಅಲ್ಲಿನ ಭೌತಿಕ ವ್ಯವಸ್ಥೆಗಳು, ಬೋಧನಾ ಕ್ರಮಗಳು, ಮೌಲ್ಯಮಾಪನ ವಿಧಾನ, ಶಿಕ್ಷಕರ ಸಾಮರ್ಥ್ಯ, ಅಭಿವೃದ್ಧಿ, ಶಾಲಾ ನಿರ್ವಹಣೆಯ ಹೊಣೆಗಾರಿಕೆ, ಪುಸ್ತಕದ ಹೊರೆ ಇಳಿಸುವಿಕೆ ಇತ್ಯಾದಿಗಳ ಕುರಿತಂತೆ ಕೇಂದ್ರ ಮತ್ತು ರಾಜ್ಯ ಸರಕಾರಗಳಿಂದ ಕೆಲ ವರ್ಷಗಳ ಹಿಂದೆ ರಚಿತಗೊಂಡಿದ್ದ ಆಯೋಗಗಳು ಹಲವು ಮಹತ್ವಪೂರ್ಣ ಸಲಹೆಗಳನ್ನು ನಮ್ಮ ಮುಂದಿಟ್ಟಿವೆ. ಇಲ್ಲಿನ ಹಲವು ಸಂಗತಿಗಳು ಶಿಕ್ಷಣ ತಜ್ಞರು, ಸ್ವಯಂಸೇವಾ ಸಂಘಟನೆಗಳು, ಸಾಮಾಜಿಕ ಮುತ್ಸದ್ದಿಗಳು ಕಾಲಕಾಲಕ್ಕೆ ನೀಡುತ್ತಾ ಬಂದಿರುವ ಸಲಹೆಗಳೇ ಆಗಿವೆ. ಹಾಗಿದ್ದರೂ ಬದಲಾವಣೆಗಾಗಿ ಹೊಸ ಆಶಯಗಳೊಂದಿಗೆ ಬರುತ್ತಿರುವ ಹೊಸ ವಿಚಾರಗಳು ಸ್ವಾಗತಾರ್ಹವಾಗಿವೆ. ಏಕೆಂದರೆ ಚಲನಶೀಲ ಸಮಾಜವೊಂದು ಜೀವಂತವಾಗಿರಲು ಇವೆಲ್ಲವೂ ಅಪೇಕ್ಷಣೀಯ.

ಒಟ್ಟಾರೆ, ಶಿಕ್ಷಣದ ಉನ್ನತೀಕರಣಕ್ಕಾಗಿ ನಡೆಯುತ್ತಿರುವ ಪ್ರಯತ್ನಗಳು ದಶಕದ ಹಿಂದೆಯೇ ಆರಂಭಗೊಂಡವು. ಸರ್ವ ಶಿಕ್ಷಣ ಅಭಿಯಾನ ೨೦೦೦ದ ನಂತರ ಶೈಕ್ಷಣಿಕ ಚಟುವಟಿಕೆಗಳು ಮಾತ್ರವಲ್ಲ ಆಡಳಿತ ವಿಭಾಗಗಳು, ಶಾಲೆಗಳ ಭೌತಿಕ ವ್ಯವಸ್ಥೆಗಳಿಗೂ ಇದು ಸಂಬಂಧಿಸಿತ್ತು. ಕಾಲಕಾಲಕ್ಕೆ ಇಲ್ಲಿ ಆಗಬೇಕಾಗಿರುವ ಮಾರ್ಪಾಡುಗಳಿಗೆ ಸಂಬಂಧಿಸಿದಂತೆ ದೇಶ ಮತ್ತು ರಾಜ್ಯ ಮಟ್ಟದಲ್ಲಿ ಸಂಶೋಧನಾ ಘಟಕಗಳು ರಚನೆಗೊಂಡವು. ಶಾಲಾ ಹಂತದಲ್ಲಿ ಹೇಳುವುದಾದರೆ ಆಡಳಿತ ನಿರ್ವಹಣೆಗೆ ಒಳಪಟ್ಟಂತೆ ವಲಯ ಶಿಕ್ಷಣಾಧಿಕಾರಿ ಕಛೇರಿ (ಬಿ. ಇ. ಓ.) ಜತೆಯಲ್ಲಿ ವಲಯ ಶಿಕ್ಷಣ ಸಂಪನ್ಮೂಲ ಕೇಂದ್ರ (ಬಿ. ಆರ್. ಸಿ.) ಹಾಗೂ ಅದರ ಕೆಳಗೆ ಗುಚ್ಛ ಸಂಪನ್ಮೂಲ ಕೇಂದ್ರ (ಸಿ. ಆರ್. ಸಿ.)ಗಳನ್ನು ಸ್ಥಾಪಿಸಲಾಯಿತು. ಒಂದು ಕಾಲದಲ್ಲಿ ಸರಕಾರಿ ಶಾಲೆಗಳ ನಿರ್ವಹಣೆಗೆ ಸಂಬಂಧಿಸಿ ಸ್ಥಳೀಯರನ್ನು ಒಳಗೊಂಡ ಶಾಲಾಭಿವೃದ್ಧಿ ಸಮಿತಿಗಳಿದ್ದವು. ಇವೆಲ್ಲ ರಾಜಕೀಯ, ವ್ಯಕ್ತಿಗತ ಗುಂಪುಗಾರಿಕೆಯಲ್ಲಿ ತೊಡಗಿವೆ ಎಂದು ತೀರ್ಮಾನಿಸಿ ಆಯಾ ಶಾಲೆಗಳ ಮಕ್ಕಳ ಪೋಷಕರನ್ನು ಮಾತ್ರ ಸದಸ್ಯರನ್ನಾಗಿಸಿ ಶಾಲಾಭಿವೃದ್ಧಿ ಹಾಗೂ ಮೇಲುಸ್ತುವಾರಿ ಸಮಿತಿ (ಎಸ್. ಡಿ. ಎಂ. ಸಿ.)ಗಳನ್ನು ರಚಿಸಲಾಯಿತು. ಕ್ರಮೇಣ ಇಂತಹ ಸಮಿತಿಗಳನ್ನು ನೇರವಾಗಿ ಪಂಚಾಯಿತ್ತಿಗಳ ಸ್ಥಾಯಿ ಸಮಿತಿಗಳಲ್ಲಿ ಒಂದಾದ ನಾಗರಿಕ ಸೌಲಭ್ಯ ಸಮಿತಿಯ ಕೈಕೆಳಗೆ ಇರಿಸಲಾಗಿದೆ. ಹಾಗಾಗಿ ಎಸ್. ಡಿ. ಎಂ. ಸಿ.ಗಳು ಇಂದು ಕಾನೂನುಬದ್ಧ ಸಂಸ್ಥೆಯಾಗಿ ಶಾಲೆಗಳಲ್ಲಿ ನಿಯೋಜನೆಗೊಂಡಿವೆ. ಅವುಗಳ ಪರಿಸ್ಥಿತಿ ಮಾತ್ರ ಶೋಚನೀಯ. ಇವುಗಳ ಜತೆಗೆ ಬೋಧಕರ ಸಾಮರ್ಥ್ಯವನ್ನು ಹೆಚ್ಚಿಸುವ ನೆಲೆಯಲ್ಲಿ ನಿರಂತರ ಕೆಲವು ವರ್ಷ ಚೈತನ್ಯ ಸರಣಿ ತರಬೇತಿ ಶಿಬಿರಗಳನ್ನು ನಡೆಸುತ್ತಾ ಕಲಿಕಾ ವಿಧಾನ, ನವ ಕಲಿಕೋಪಕರಣಗಳ ಬಳಕೆ ಮಾತ್ರವಲ್ಲ, ಅಂಕಗಳನ್ನಷ್ಟೆ ಗಮನಿಸಿ ಮಕ್ಕಳ ಕಲಿಕೆಯನ್ನು ಪರೀಕ್ಷೆಗೆ ಒಳಪಡಿಸುತ್ತಿದ್ದ ರೂಢಿಗತ ಕ್ರಮಕ್ಕೆ ಬದಲಾಗಿ ನಿರಂತರ ಮೌಲ್ಯ ಮಾಪನವೆಂಬ ಹೊಸ ವಿಧಾನವನ್ನು ಜಾರಿಗೆ ತರಲಾಯಿತು. ಬೋಧನಾ ವಿಧಾನಕ್ಕೆ ಸಂಬಂಧಿಸಿದಂತೆ ನಲಿ–ಕಲಿ ಮಗದೊಮ್ಮೆ ಕಲಿ–ನಲಿ ಹೀಗೆ ಹತ್ತು ಹಲವು ಪ್ರಯೋಗಗಳಿಗೆ ಸರಕಾರಿ ಕನ್ನಡ ಶಾಲೆಗಳು ಒಳಪಟ್ಟವು. ಇದು ಕೇವಲ ನಮ್ಮ ರಾಜ್ಯಕ್ಕೆ ಮಾತ್ರ ಸಂಬಂಧಿಸದೆ ದೇಶ ಮಟ್ಟದಲ್ಲೂ ನಡೆದು ಇದಕ್ಕಾಗಿ ಕೋಟ್ಯಂತರ ಹಣವನ್ನು ವ್ಯಯಿಸಲಾಗಿದೆ. ಹಾಗಿದ್ದರೂ ಎಲ್ಲಾ ಕಡೆಯಿಂದ

ಒಂದೇ ಕೂಗು–ಶಿಕ್ಷಣದ ಗುಣಮಟ್ಟ ಕುಸಿಯುತ್ತಿದೆ. ಮತ್ತೊಂದೆಡೆ ಸರಕಾರಿ ಶಾಲೆಗಳು ಮುಚ್ಚುತ್ತಿವೆ. ಹಾಗಿದ್ದರೆ ಇಷ್ಟೆಲ್ಲ ಕಸರತ್ತುಗಳಿಂದ ಆದ ಲಾಭವಾದರೂ ಏನು? ಇಲ್ಲೂ ವ್ಯಾಪಕ ಭ್ರಷ್ಟಾಚಾರದ ಪ್ರಕರಣಗಳು ಹೊರಬರುತ್ತಿರುವುದು ನಮ್ಮ ದುರಂತ.

ಡೊಂಬರಾಟಗಳ ಮಧ್ಯೆ ಶೈಕ್ಷಣಿಕ ವ್ಯವಸ್ಥೆಯ ತಳಮಟ್ಟದಲ್ಲಿ ಏನು ನಡೆಯುತ್ತಿದೆ ಎಂಬುದನ್ನು ನಾವು ತಿಳಿದುಕೊಳ್ಳಬೇಕು. ಸರ್ವ ಶಿಕ್ಷಣ ಅಭಿಯಾನ ಪ್ರಾರಂಭಗೊಂಡ ಮೊದಲ ದಿನಗಳಲ್ಲಿ ನಾನು ಸ್ವಯಂಸೇವಾ ಸಂಸ್ಥೆಯೊಂದರಲ್ಲಿ ಶಿಕ್ಷಣಕ್ಕೆ ಸಂಬಂಧಿಸಿದ ಕೆಲಸ ಕಾರ್ಯಗಳಲ್ಲಿ ನಿಯೋಜಿತನಾಗಿದ್ದೆ. ಹಾಗಾಗಿ ಕೆಲ ವರ್ಷ ಶಾಲೆಗಳನ್ನು ಹತ್ತಿರದಿಂದ ಕಾಣಲು ಸಾಧ್ಯವಾಯಿತು. ಅದರ ಮುಂದುವರಿಕೆಯ ಭಾಗವೋ ಎಂಬಂತೆ ಕೆಲ ಖಾಸಗಿ ಸಂಸ್ಥೆಗಳು ಮತ್ತು ನೇರವಾಗಿ ಸರಕಾರದ ಶಿಕ್ಷಣ ಇಲಾಖೆಯಲ್ಲಿ ಶೈಕ್ಷಣಿಕ ಚಟುವಟಿಕೆಗಳ ಮಾಹಿತಿದಾರನಾಗಿ ರಾಜ್ಯದ ಬಹುತೇಕ ಜಿಲ್ಲೆಗಳಲ್ಲಿ ಓಡಾಡುವಂತಾಯಿತು. ಇದರ ಜತೆಯಲ್ಲಿ ಗ್ರಾಮ ಪಂಚಾಯತ್ ಸದಸ್ಯರುಗಳ ಸರಣಿ ತರಬೇತಿ ಕಾರ್ಯಕ್ರಮಗಳಲ್ಲೂ ಮಾಹಿತಿದಾರ ನಾಗಿಯೂ ಹಲವು ಜಿಲ್ಲೆಗಳಲ್ಲಿ ಸಂಚರಿಸಿದ್ದೆ. ಈ ಎರಡೂ ಕಾರ್ಯದಲ್ಲಿ ನಮ್ಮ ಶಾಲೆಗಳಲ್ಲಿ ಆಗಬೇಕಾದ ಬದಲಾವಣೆಗಳು ಮತ್ತು ನಮ್ಮ ಮಕ್ಕಳ ಶೈಕ್ಷಣಿಕ ಅಭಿವೃದ್ಧಿಯ ಕಾಳಜಿಗಳು ಅಗತ್ಯದ ಭಾಗಗಳಾಗಿದ್ದವು.

ಇಂದು ಸರಕಾರ ಹಲವು ನವೀನ ಶೈಕ್ಷಣಿಕ ವಿಚಾರಗಳನ್ನು ಜಾರಿಗೊಳಿಸುತ್ತಿದೆ. ಶಿಕ್ಷಣ ಇಲಾಖೆ ಅದನ್ನು ಅನುಷ್ಠಾನಗೊಳಿಸುವ ನೆಲೆಯಲ್ಲಿ ಅನೇಕ ಚಟುವಟಿಕೆಗಳನ್ನು ನಡೆಸುತ್ತಾ ಬರುತ್ತಿದೆ. ಆದರೆ ಎಸ್. ಡಿ. ಎಂ. ಸಿ.ಗಳು ಮಾತ್ರ ಬಹುತೇಕ ಕಡೆಗಳಲ್ಲಿ ನೆಪ ಮಾತ್ರಕ್ಕಷ್ಟೆ ರಚನೆಗೊಂಡಿದ್ದು ಅವುಗಳು ತಮ್ಮ ಕಾರ್ಯಗಳಲ್ಲಿ ವಿಫಲವಾಗಿವೆ. ಶಾಲಾ ವಿಚಾರದಲ್ಲಿ ಪೋಷಕ ಸಮಿತಿಗಳು ಮತ್ತು ಶಾಲಾ ಶಿಕ್ಷಕ ವೃಂದ ಪರಸ್ಪರ ಸಹಕರಿಸಿ ಮುನ್ನಡೆಯುವ ಮನೋಭಾವವೇ ಕಡಿಮೆ. ಶಾಲಾ ಆಡಳಿತ ವ್ಯವಸ್ಥೆಯಲ್ಲಿ ಈ ಸಮಿತಿಗಳ ಮಧ್ಯ ಪ್ರವೇಶವನ್ನು ಶಿಕ್ಷಕರು ಹಾರ್ದಿಕವಾಗಿಯೇನು ಸ್ವೀಕರಿಸಿಲ್ಲ. ಹೆಚ್ಚೆಂದರೆ ಸಮಿತಿಗಳನ್ನು ಶಾಲಾ ಭೌತಿಕ ರಚನೆಗಳಿಗಾಗಿ ಸರಕಾರದ ಅನುದಾನ ಪಡೆಯಲು ಮಾತ್ರ ಬಳಸಿಕೊಳ್ಳಲಾಗುತ್ತಿದೆ. ಆದರೆ ಶಿಕ್ಷಕರ ಕಾರ್ಯ ವೈಖರಿ, ಹಾಜರಾತಿ, ಪಾಠ ಕ್ರಮಗಳು, ಹಣಕಾಸಿಗೆ ಸಂಬಂಧಿಸಿದ ವಿಚಾರಗಳ ಕುರಿತಾಗಿ ಈ ಪೋಷಕ ಸಮಿತಿಗಳು ಮಾತನಾಡುವ ಪರಿಸ್ಥಿತಿ ಎಲ್ಲಾ ಶಾಲೆಗಳಲ್ಲಿ ಇಲ್ಲ. ಇನ್ನು ಮಕ್ಕಳ ಹಕ್ಕುಗಳು, ಮಕ್ಕಳ ಮೇಲಿನ ದೌರ್ಜನ್ಯ, ವಿಶೇಷವಾಗಿ ಲೈಂಗಿಕ ದೌರ್ಜನ್ಯಗಳ ಬಗ್ಗೆ ಮಾತನಾಡುವುದು ದೂರವೇ ಉಳಿಯಿತು.

ಇನ್ನು ನಮ್ಮ ಬಹುತೇಕ ಗ್ರಾಮ ಪಂಚಾಯತಿಗಳಲ್ಲಿ ಸ್ಥಾಯಿ ಸಮಿತಿಗಳೇ ಅಸ್ತಿತ್ವದಲ್ಲಿ ಇಲ್ಲ. ಕೇಳಿದರೆ 'ಅದರ ಅವಶ್ಯಕತೆ ಇಲ್ಲ. ಎಲ್ಲವನ್ನು ಪಂಚಾಯತ್ ನೋಡಿಕೊಳ್ಳುತ್ತದೆ' ಎಂಬ ಸಿದ್ಧ ಉತ್ತರವಿರುತ್ತದೆ. ಇಂತಹ ಸಂದರ್ಭದಲ್ಲಿ ಅವುಗಳು ಸರಕಾರದ ನೀತಿಯಂತೆ "ಎಸ್. ಡಿ. ಎಂ. ಸಿ.ಗಳು ಪಂಚಾಯತ್‌ಗಳ ಸೌಕರ್ಯ ಸಮಿತಿಯ ಕೆಳಗೆ ಕಾರ್ಯ ನಿರ್ವಹಿಸಬೇಕಾಗುತ್ತದೆ" ಎಂಬುದನ್ನು ಗಂಭೀರವಾಗಿ ಎಲ್ಲಿ ತೆಗೆದುಕೊಳ್ಳಲು ಸಾಧ್ಯ? ಗ್ರಾಮಗಳಲ್ಲಿ ಬಾಲಕಾರ್ಮಿಕ ಪದ್ಧತಿಯನ್ನು ತೊಡೆದುಹಾಕುವ, ಗ್ರಾಮಗಳಲ್ಲಿ ವಾಸವಾಗಿರುವ ಪ್ರತೀ ಮಗುವೂ ಶಿಕ್ಷಣದಿಂದ ವಂಚಿತವಾಗದಂತೆ, ಮಕ್ಕಳು ಶಾಲೆಯನ್ನು ಅರ್ಧದಿಂದಲೇ ತೊರೆಯದಂತೆ ಮಾಡುವ ಗುರುತರ ಜವಾಬ್ದಾರಿ ಗ್ರಾಮ ಪಂಚಾಯತಿಗಳಿಗೆ ಇವೆ. ಸರಕಾರ ಜಾರಿಗೊಳಿಸಿರುವ ಮಕ್ಕಳ ಗ್ರಾಮ ಸಭೆಯನ್ನು ಎಷ್ಟು ಕಡೆ ನಡೆಸಲಾಗುತ್ತದೆ ? ನಡೆಸಲ್ಪಟ್ಟ ಸಭೆಗಳು ಎಷ್ಟು ಪರಿಣಾಮಕಾರಿಯಾಗಿವೆ ?

ಸರಕಾರಿ ಶಾಲೆಗಳಲ್ಲಿ ಇಂದು ಮಕ್ಕಳ ಸಂಖ್ಯೆ ಕಡಿಮೆಯಾಗಲು ಸ್ವತಃ ಶಿಕ್ಷಕರು ಕೂಡ ಕಾರಣರಾಗಿದ್ದಾರೆ. ತಮ್ಮದೇ ಊರಿನ ಶಾಲೆಗಳಲ್ಲಿ ಶಿಕ್ಷಕರಾಗಿರುವವರು ತಮ್ಮ ಮಕ್ಕಳನ್ನು ಖಾಸಗಿ ಇಂಗ್ಲಿಷ್ ಮಾಧ್ಯಮ ಶಾಲೆಗಳಿಗೆ ಕಳುಹಿಸುತ್ತಾರೆ. ಹೀಗಾಗಿ ಸರಕಾರಿ ಶಾಲೆಗಳ ಕುರಿತಾದ ವಿಶ್ವಸನೀಯ ವಾತಾವರಣ ಸಂಪೂರ್ಣವಾಗಿ ಹಾಳಾಗಿಹೋಗಿರುತ್ತದೆ. ಎಸ್. ಡಿ. ಎಂ. ಸಿ. ಸದಸ್ಯರು ಮನೆಗೆ ಭೇಟಿ ನೀಡಿ "ಮಕ್ಕಳನ್ನು ನಮ್ಮ ಶಾಲೆಗೆ ಸೇರಿಸಿ" ಎಂದು ಪೋಷಕರನ್ನು ಕೇಳಿದರೆ "ನಿಮ್ಮ ಶಿಕ್ಷಕರ ಮಕ್ಕಳು ಎಲ್ಲಿ ಓದುತ್ತಿದ್ದಾರೆ, ನಮ್ಮ ಮಕ್ಕಳ ಭವಿಷ್ಯದ ಬಗ್ಗೆ ನಮಗೂ ಗೊತ್ತಿದೆ" ಎಂಬ ಉತ್ತರಗಳು ಮಕ್ಕಳ ಹೆತ್ತವರಿಂದ ಬರುತ್ತದೆ. ಇದರ ಪರಿಣಾಮ ಸರಕಾರಿ ಶಾಲೆಗಳು ಮುಚ್ಚುವ ಹಂತಕ್ಕೆ ಬಂದುನಿಂತಿವೆ. ಇಷ್ಟು ಮಾತ್ರವಲ್ಲ, ಸರಕಾರಿ ಉದ್ಯೋಗಸ್ಥರು, ಜನಪ್ರತಿನಿಧಿಗಳು, ವಿದ್ಯಾವಂತರು ಕೂಡ ತಮ್ಮ ಮಕ್ಕಳನ್ನು ಖಾಸಗಿ ಶಾಲೆಗಳಿಗೆ ಕಳುಹಿಸುತ್ತಿರುವುದರಿಂದಾಗಿ ಜನಸಾಮಾನ್ಯರಲ್ಲಿ ಸರಕಾರಿ ಶಾಲೆಗಳ ಮೇಲಿನ ವಿಶ್ವಾಸ ಪೂರ್ಣ ಹೊರಟುಹೋಗಿದೆ. ಎಲ್ಲೋ ಅಪರೂಪಕ್ಕೆ ಕಾಣಬರುವ ಪ್ರಾಮಾಣಿಕ ಅಧಿಕಾರಿಗಳು ಮತ್ತು ಶಿಕ್ಷಕರಷ್ಟೇ ಇಲ್ಲಿನ ಭರವಸೆ.

ಮಗುವಿನ ಕಲಿಕೆಗೆ ಸಂಬಂಧಿಸಿದಂತೆ ಯಾವಾಗಲೂ 'ಸರ್ವತೋಮುಖ ಅಭಿವೃದ್ಧಿ' ಎಂಬ ಪದಗಳನ್ನು ಉಚ್ಚರಿಸಲಾಗುತ್ತದೆ. ಆದರೆ ಅಧ್ಯಯನಗಳು ಹೇಳುವ ಸಂಗತಿಯೇ ಬೇರೆ. ಕಲಿಕೆಯ ಮೂಲಭೂತ ಕೌಶಲಗಳಾದ "ಓದು, ಬರಹ, ಲೆಕ್ಕಾಚಾರ"ಗಳಿಂದಲೇ ನಮ್ಮ ಮಕ್ಕಳು ವಂಚಿತರಾಗುತ್ತಿರುವುದು ವಿಷಾದನೀಯ. ನಮ್ಮ ಶಿಕ್ಷಕರು ಏನು ಮಾಡುತ್ತಿದ್ದಾರೆ ? ಶಿಕ್ಷಕರಿಗೆ ಬೋಧನಾ ಸಾಮರ್ಥ್ಯಗಳನ್ನು ಹೆಚ್ಚಿಸಲು ಸರಕಾರ ನಿರಂತರ ತರಬೇತಿಯನ್ನು ನೀಡುತ್ತಾ ಬರುತ್ತಿದೆ ಸರಿ. ಆದರೆ ಅದೆಲ್ಲ ತರಗತಿ ಒಳಗೆ ಎಷ್ಟರಮಟ್ಟಿಗೆ ಚಾಲ್ತಿಗೆ ಬಂದಿದೆ ಎಂಬುದನ್ನು ಗುರುತಿಸುವ ವಿಧಾನವೇನಾದರೂ ಇಲಾಖೆಯಲ್ಲಿ ಇದೆಯೇ ? ಅರ್ಥಾತ್ ಶಿಕ್ಷಕರ ಸಾಮರ್ಥ್ಯವನ್ನು ಅಳೆಯುವ ಮಾನದಂಡಗಳು ಇವೆಯೇ ? ಇರದಿದ್ದರೆ ಯಾಕೆ ಇಲ್ಲ ? ಎಲ್ಲಿಯವರೆಗೆ ಇದು ಜಾರಿಗೆ ಬರುವುದಿಲ್ಲವೋ ಅಲ್ಲಿಯವರೆಗೆ ನಮ್ಮ ಶಾಲೆಗಳು ಉದ್ಧಾರವಾಗಲು ಸಾಧ್ಯವೇ ಇಲ್ಲ. ಯಾವ ಊರುಗಳಲ್ಲಿ ಉತ್ತಮ ಶಿಕ್ಷಕರಿದ್ದಾರೋ, ಪೋಷಕರು ಮತ್ತು ಸಮುದಾಯದ ಜೊತೆಗೆ ಅವರ ವಿಶ್ವಸನೀಯ ನಡವಳಿಕೆ ಇದೆಯೋ ಅಂತಹ ಶಾಲೆಗಳಲ್ಲಿ ಮಕ್ಕಳ ಸಂಖ್ಯೆ ಅತೀ ಹೆಚ್ಚು ಇರುತ್ತದೆ. ಇದು ಗಮನಿಸಬೇಕಾದ ಅಂಶ.

ಶಾಲೆಗಳ ಕುರಿತಾದ ಇನ್ನೊಂದು ಪ್ರಮುಖ ದೌರ್ಬಲ್ಯವನ್ನು ಹೇಳಬೇಕು. ಬದಲಾಗುತ್ತಿರುವ ಶೈಕ್ಷಣಿಕ ವ್ಯವಸ್ಥೆಯ ಹಲವು ಸಂಗತಿಗಳು ಮಕ್ಕಳ ಪೋಷಕರು ಗಳಿಗೆ ತಿಳಿದೇ ಇರುವುದಿಲ್ಲ. ಅವರನ್ನು ಉದ್ದೇಶಪೂರ್ವಕವಾಗಿ ಕತ್ತಲಲ್ಲಿ ಕೂರಿಸಲಾಗಿದೆ. ನಾನು ಅನೇಕ ಕಡೆಗಳಲ್ಲಿ ಮಕ್ಕಳ ಹಕ್ಕು, ಕಲಿಕೆ, ಶಿಕ್ಷೆ, ಶಿಕ್ಷಕರ ಜವಾಬ್ದಾರಿ, ಇಲಾಖೆಯ ಹೊಣೆಗಾರಿಕೆ ಬಗ್ಗೆ ಮಾಹಿತಿ ನೀಡುವಾಗಲೆಲ್ಲಾ ಮೊದಲ ತಡೆ ಬರುತ್ತಿದ್ದುದೇ ಶಿಕ್ಷಕರಿಂದ ಮತ್ತು ಇಲಾಖೆಯ ಅಧಿಕಾರಿ ವರ್ಗದಿಂದ. ಈ ಮನೋಭಾವದಿಂದಾಗಿ ಶಾಲೆಗಳನ್ನು ಸಮುದಾಯದ ಜತೆಗೆ ಕೊಂಡೊಯ್ಯುವ ಸರಕಾರದ ಪ್ರಯತ್ನಕ್ಕೆ ಅವರ ಅಧೀನರಿಂದಲೇ ತೊಡಕುಗಳು ಬರುತ್ತಿವೆ. ಕಾಲಕಾಲಕ್ಕೆ ಶಿಕ್ಷಣ ಕ್ಷೇತ್ರದಲ್ಲಿ ಆಗುತ್ತಿರುವ ಬದಲಾವಣೆ ಕುರಿತು ಪೋಷಕರಿಗೆ ಮಾಹಿತಿ ನೀಡುವಂತಾಗಲು ಸರಕಾರ ಜಾರಿಗೆ ತಂದಿದ್ದ "ಸಮುದಾಯದತ್ತ ಶಾಲೆ" ಯೋಜನೆಯನ್ನೂ ಕುಲಗೆಡಿಸಲಾಯಿತು. ಇದೆಲ್ಲ ಮಕ್ಕಳ ಕಲಿಕೆಯ ಜತೆಗೆ ಪೋಷಕರ ಪಾಲ್ಗೊಳ್ಳುವಿಕೆ ಮತ್ತು ಬೆಂಬಲ ನೀಡುವಿಕೆಗೆ ತಡೆಯಾಗಿದೆ. ಮಗು ಎಷ್ಟರಮಟ್ಟಿಗೆ ಕಲಿತಿದೆ, ಅದರ ಕಲಿಕಾ ಪ್ರಗತಿ ಯಾವ ಹಂತದಲ್ಲಿದೆ ಎಂಬುದನ್ನು ಗುರುತಿಸಲಾಗದ ಪೋಷಕರೇ ಜಾಸ್ತಿ. ಈ ಪರಿಸ್ಥಿತಿ ಕೂಡ ಶಾಲೆಗಳ ಬಗ್ಗೆ ಅವಿಶ್ವಾಸ ಮತ್ತು ಅಪನಂಬಿಕೆಗಳು ಬೆಳೆಯಲು ಕಾರಣವಾಗಿದೆ.

ಸಡಿಲಗೊಂಡ ತಳಪಾಯದ ಮೇಲೆ ಭದ್ರ ಕಟ್ಟಡವನ್ನು ಕಟ್ಟಲು ಸಾಧ್ಯವೇ ? ಮರಳಿನ ಮೇಲೆ ಯಾರೂ ಮನೆಯನ್ನು ಕಟ್ಟುವುದಿಲ್ಲ. ನಮ್ಮ ಸರಕಾರಿ ಶಾಲೆಗಳ ಪರಿಸ್ಥಿತಿ ಇಷ್ಟೊಂದು ಕುಲಗೆಡಲು ಹೇಗೆ ಸಾಧ್ಯವಾಯಿತು ? ಇನ್ನು ಕೆಲವೇ ವರ್ಷ ಗಳಲ್ಲಿ ನೂರಾರು ಶಾಲೆಗಳು ಮುಚ್ಚಿ, ಬಡವರು ಮತ್ತು ದೀನದಲಿತರ ಪಾಲಿಗೆ ಶಿಕ್ಷಣವೆಂಬುದು ಗಗನಕುಸುಮವಾಗಲಿದ್ದು, ಈಗಲಾದರೂ ನಮ್ಮನ್ನು ಆಳುವವರು ಎಚ್ಚೆತ್ತುಕೊಳ್ಳಬೇಕಾಗಿದೆ. ಶಿಕ್ಷಣ ಆಯೋಗಗಳೆಂದರೆ ಯಾವ್ಯಾವುದೋ ಕ್ಷೇತ್ರಗಳ ತಜ್ಞರನ್ನು ನೇಮಿಸುವುದಲ್ಲ. ಅಂತಹ ಆಯೋಗಗಳಲ್ಲಿ ಶಿಕ್ಷಣ ಶಾಸ್ತ್ರಜ್ಞರು, ಶಿಕ್ಷಣ ತಜ್ಞರು, ಸ್ವತಃ ಶಿಕ್ಷಕರು ಮತ್ತು ಸಾಮಾಜಿಕ ಮುತ್ಸದ್ದಿಗಳನ್ನು ಸೇರಿಸಿಕೊಂಡಾಗ ಸಮಿತಿ ಗಳಿಗೊಂದು ಅರ್ಥ ಬರುತ್ತದೆ. ಕೊನೆಪಕ್ಷ ಮಾಧ್ಯಮಿಕ ಹಂತದವರೆಗಿನ ಶಿಕ್ಷಣ ಮಗುವಿನ ಮಾತೃಭಾಷೆಯಲ್ಲಿ ಇರುವಂತೆಯೇ ನೋಡಿಕೊಳ್ಳುವುದು, ಸಮಾನ ಶಿಕ್ಷಣ ನೀತಿಯನ್ನು ಜಾರಿಗೆ ತಂದು ಅದು ನೇರ ಸರಕಾರದ ನಿಯಂತ್ರಣದಲ್ಲಿರುವಂತೆ ಮಾಡುವುದು, ಶಿಕ್ಷಕರ ಬೋಧನಾ ಸಾಮರ್ಥ್ಯವನ್ನು ಹೆಚ್ಚಿಸುವುದರ ಜೊತೆಗೆ ಕಾಲಕಾಲಕ್ಕೆ ಅವರ ಸಾಮರ್ಥ್ಯವನ್ನು ಕಟ್ಟುನಿಟ್ಟಾಗಿ ಗಣಿಸುವುದರಿಂದ ಮಾತ್ರ ನಮ್ಮ ಶೈಕ್ಷಣಿಕ ವ್ಯವಸ್ಥೆ ಸುಧಾರಣೆಗೊಳ್ಳಬಹುದು. ೧೮೫೪ರಲ್ಲಿ ವುಡ್ಸ್ ಆಯೋಗವು ಶಿಕ್ಷಣದ ಪ್ರಸ್ತಾವನೆಯೊಂದನ್ನು ಬ್ರಿಟಿಷ್ ಸರಕಾರದ ಮುಂದಿಟ್ಟು ಅಲ್ಲಿಂದ ಇಂದಿನವರೆಗೆ ನಮ್ಮ ಶಿಕ್ಷಣ ವ್ಯವಸ್ಥೆ ಸಾಗಿದ ಏರಿಳಿತದ ದಾರಿ ಬಹು ದೂರದ್ದು. ಆದರೂ ನಾವು ಇಲ್ಲಿ ಗಟ್ಟಿ ನೆಲೆಯೊಂದನ್ನು ಕಾಣದೆ ಇರುವುದು ರಾಷ್ಟ್ರೀಯ ವಿಪತ್ತೇ ಸರಿ.

**ಗೋಪಾಲ್ ಪೆರಾಜೆ**
ಕೊಳಂಗಾಯ ಮನೆ, ಪೆರಾಜೆ ಅಂಚೆ – ೫೭೪ ೩೧೪, ಸುಳ್ಯ ತಾಲ್ಲೂಕು, ದಕ್ಷಿಣ ಕನ್ನಡ ಜಿಲ್ಲೆ

# ಬೌದ್ಧ ಧರ್ಮದ ಪ್ರೇರಣೆ ಮತ್ತು ಆಚಾರ

ಮರಾಠಿ ಮೂಲ : **ದುರ್ಗಾ ಭಾಗವತ**
ಕನ್ನಡಕ್ಕೆ : **ಚಂದ್ರಕಾಂತ ಪೋಕಳೆ**

ನವ ಬೌದ್ಧರಿಂದಾಗಿ ಬೌದ್ಧ ಧರ್ಮದ ಮೌಲ್ಯದ ಬಗೆಗೆ ಕೇವಲ ಕುತೂಹಲವಷ್ಟೇ ನಿರ್ಮಾಣವಾಗಿದೆ ಎಂದೇನಲ್ಲ, ಯಾವ ಧರ್ಮ ಒಂದು ಕಾಲದಲ್ಲಿ ಭಾರತದಿಂದ ಬೇರುಸಹಿತ ನಿರ್ಮೂಲನೆಗೊಂಡಿತ್ತೋ, ಅದನ್ನು ತಥಾಕಥಿತ ಅಸ್ಪೃಶ್ಯರು ಸ್ವೀಕರಿಸಿದ್ದರಿಂದ, ಬಹುಸಂಖ್ಯ ಸ್ಪೃಶ್ಯರ ಸಮಾಜಕ್ಕೆ ಎಲ್ಲಕ್ಕಿಂತ ದೊಡ್ಡ ಸವಾಲು ಎದುರಾಗಿದೆ. ಈ ಆಹ್ವಾನ ಪ್ರತಿಕ್ರಿಯೆ ವಿಚಿತ್ರವಾಗಿದೆ. ಬಹುಸಂಖ್ಯಾತ ಹಿಂದೂಗಳು ಈ ಮತಾಂತರವನ್ನು ತಟಸ್ಥವಾಗಿ ಗಮನಿಸಿದ್ದಾರೆ, ವಿಶೇಷವಾಗಿ ಸುಶಿಕ್ಷಿತರು, ಆದರೆ ಬಹುಜನ ಸಮಾಜದ ಜನರನ್ನು ಈ ಪ್ರತಿಕ್ರಿಯೆ ಹೆಚ್ಚು ಅಸ್ವಸ್ಥಗೊಳಿಸಿದೆ. ವಿಶೇಷವಾಗಿ ಸತ್ಯನಾರಾಯಣ ವ್ರತವು ಯಾವ ಸಮುದಾಯದವರಲ್ಲಿ ಹೆಚ್ಚು ಜನಪ್ರಿಯವಾಗಿದೆಯೋ, ಅವರಿಗೆ ಈ ಮತಾಂತರದ ಬಗ್ಗೆ ಸಿಟ್ಟು ತಲೆದೋರಿದ್ದನ್ನು ನಾನು ಕಂಡಿದ್ದೇನೆ. ಮಹಾರಾಷ್ಟ್ರದ ಮಟ್ಟಿಗೆ ಹೇಳುವದಾದರೆ ಬೌದ್ಧರಾದ ಅಸ್ಪೃಶ್ಯರು, ಅಂದರೆ ಮಹಾರರು, ಮಾದಿಗ, ಸಮಗಾರ ಮುಂತಾದ ಅಸ್ಪೃಶ್ಯ ಸಮುದಾಯವು, ಇಂದು ಭಯಭೀತ ಸ್ಥಿತಿಯಲ್ಲಿದ್ದಾರೆ. ನವ ಬೌದ್ಧರ ವೃತ್ತಿಯು ಆಶಾದಾಯಕವಾಗಿದ್ದರೂ ಅವರು ಅಸಮಾಧಾನಿಗಳೂ ಆಗಿದ್ದಾರೆ. ತಮ್ಮ ಸಾಮಾಜಿಕ ಹಾಗೂ ಆರ್ಥಿಕ ಉನ್ನತಿಯನ್ನು ಗಳಿಸಲು ಅವರು ಟೊಂಕಕಟ್ಟಿ ನಿಂತಿದ್ದಾರೆ. ಮತಾಂತರದ ಹಿಂದೆ ಸಾಮಾನ್ಯವಾಗಿ ಒಂದು ಬಗೆಯ ಕಹಿತನವಿರುತ್ತದೆ. ನವ ಧರ್ಮದ ಸ್ತೋಮವನ್ನು ಹೇಗೆ ನವ ದೀಕ್ಷಿತರು ಮೆರೆಯುತ್ತಾರೋ ಹಾಗೆ, ಆ ಧರ್ಮದಲ್ಲಿರುವ ಹಲವು ಪೀಳಿಗೆಗಳಿಂದ ಪಳಗಿದ ಧರ್ಮ ಮಾರ್ತಾಂಡರೂ ಮೆರೆಯುತ್ತಿರುತ್ತಾರೆ.

**ಮತಾಂತರದ ಪ್ರೇರಣೆ ಯಾವುದು ?**

ಇಂದಿನ ನವ ಬೌದ್ಧದ ಸಾಮಾಜಿಕ ನಾಯಕತ್ವವು ಧರ್ಮ ಗುರುವಿನ ಕಡೆಗೆ ಹೋಗಲು ಬಯಸುತ್ತಿದೆ. ಈವರೆಗೆ ಲಗ್ನ, ಅಂತ್ಯಕ್ರಿಯೆಗಾಗಿಯೂ ಬ್ರಾಹ್ಮಣರಂಥ ಪೂಜಾರಿ ಬೇಕಾಗುತ್ತಿರಲಿಲ್ಲ. ಇಲ್ಲಿಯವರೆಗೆ ಅವರ ರಾಜಕೀಯ ಹಾಗೂ ಸಾಮಾಜಿಕ ನಾಯಕತ್ವವು ಡಾ॥ ಅಂಬೇಡ್ಕರರ ಕಡೆಗೆ, ಕೆಲವು ಪ್ರಮಾಣದಲ್ಲಿ ಗಾಂಧೀಜಿಯವರ ಕಡೆಗಿತ್ತು. ಮತಾಂತರದ ಆರಂಭದಲ್ಲೇ ಡಾ॥ ಅಂಬೇಡ್ಕರ ತೀರಿಕೊಂಡರು. ಆನಂತರ ಅವರ ಪ್ರೇರಣೆಯಿಂದಲೇ ಬಹುದೊಡ್ಡ ಪ್ರಮಾಣದಲ್ಲಿ ಮತಾಂತರದ ಅಲೆಯು ಹರಡಿತು. ಈ ಮತಾಂತರದ ಮೂಲವು ಧಾರ್ಮಿಕ ಭಾವನೆಯಲ್ಲಿರದೆ, ಸಾಮಾಜಿಕ–ಆರ್ಥಿಕ ಅಸಂತೋಷದಲ್ಲಿದೆ ಎನ್ನುವದರಲ್ಲಿ ತಿಲ ಮಾತ್ರವೂ ಸಂದೇಹವಿಲ್ಲ. ಆದರೆ ರೋಗ ಒಂದು, ಔಷಧಿ ಮತ್ತೊಂದು ಎಂಬ ಬಗೆಯನ್ನು ಬೌದ್ಧ ಧರ್ಮದ ಸ್ವೀಕಾರದ ಬಗೆಗೆ ಡಾ॥ ಅಂಬೇಡ್ಕರರು ಮಾಡಿದರು. ಅವರ ಅನುಯಾಯಿಗಳು ತಮ್ಮ ನಾಯಕನ ಬಗೆಗಿನ ನಿಷ್ಠೆಯನ್ನು ಉಳಿಸಿಕೊಳ್ಳಲು ಆ ಮಾರ್ಗವನ್ನು ಅವಲಂಬಿಸ ಬೇಕಾಯಿತು. ಆದರೆ ಮತಾಂತರವೆಂದರೆ ರೊಟ್ಟಿಯ ಬದಲು ಬ್ರೆಡ್ ತಿಂದಷ್ಟು ಸುಲಭವಲ್ಲ !

ಪ್ರಾಣಿ ಹಿಂಸೆಯ ಬಗ್ಗೆ ಅವನಿಗೆ ಆತ್ಯಂತಿಕ ತಿರಸ್ಕಾರವಿದ್ದರೂ ಮಹಾವೀರನಂತೆ ಅವನು ಮಾಂಸಾಹಾರವನ್ನು ಸಂಪೂರ್ಣ ತ್ಯಜಿಸಿ, ಅದನ್ನು ತನ್ನ ಪ್ರಚಾರದ ಮುಖ್ಯ ಉದ್ದೇಶವನ್ನಾಗಿ ಬಳಸಿಕೊಳ್ಳಲಿಲ್ಲ. ಭಿಕ್ಷುಗಳು ಎಲ್ಲ ಜಾತಿಯ ಜನರ ಕೈಯಿಂದ ಸ್ವೀಕರಿಸಬೇಕು, ಅದನ್ನೇ ತಿನ್ನಬೇಕು ಎಂಬ ಸೌಜನ್ಯದ ನಿಯಮವನ್ನು ಅವನು ರೂಪಿಸಿದ. ಧಮ್ಮ ಪದ – ಅಟ್ಠ ಕಥೆಗಳಲ್ಲೂ ಭಿಕ್ಷು ಅಂಬಿಗರಿಂದ ಮೀನು ಪಡೆದ ಉಲ್ಲೇಖ ಲಭಿಸುತ್ತದೆ. ಸ್ವತಃ ತಿನ್ನಲು ಹತ್ಯೆ ಮಾಡಬಾರದು. ಬೇರೆಯವರಿಂದಲೂ ಮಾಡಿಸಬಾರದು. ಆದರೆ ಬೇರೆಯವರು ತಮಗಾಗಿ ಪ್ರಾಣಿಯನ್ನು ಕೊಂದಿದ್ದರೆ, ಆ ಮಾಂಸವನ್ನು ವರ್ಜ್ಯವೆಂದು ಭಾವಿಸಿ ಆ ಅನ್ನವನ್ನು ಭಿಕ್ಷು ಆದವನು ಅನಾದರ ಮಾಡಕೂಡದು. ಇದು ಬುದ್ಧನ ಆಶಯವಾಗಿದೆ.



## ವಿಧಿ-ವಿಧಾನಗಳ ಸ್ತೋಮ

ಧರ್ಮವೆಂದರೆ ಆಚಾರ ಬಂಧನ. ಅದರ ಸುತ್ತಲೂ ತತ್ವಜ್ಞಾನಕ್ಕಿಂತ ಕರ್ಮಕಾಂಡ ತಕ್ಷಣ ಮುಚ್ಚಿಕೊಳ್ಳುತ್ತದೆ. ಸಂಸ್ಕಾರದ ಪ್ರಶ್ನೆ ಬರುತ್ತದೆ. ಪೂಜೆಯ ಮೂರ್ತಿ ಬದಲಾದರೆ ಪೂಜೆಯ ವಿಧಿ, ಉಪಕರಣ ಎಲ್ಲವೂ ಬದಲಾಗುತ್ತವೆ. ಹಳೆಯ ಶ್ರದ್ಧೆಯನ್ನು ಕೈ ಬಿಡುವದು ಅಷ್ಟೊಂದು ಸುಲಭವಾಗಿರುವದಿಲ್ಲ. ಎಷ್ಟೋ ಶತಕಗಳು ಉರುಳಿದರೂ, ಎಷ್ಟೋ ಭಾರತೀಯ ಕ್ರೈಸ್ತ-ಮುಸಲ್ಮಾನರಲ್ಲಿ ಹಳೆಯ ಹಿಂದೂ ಶ್ರದ್ಧೆ ಇಂದಿಗೂ ಉಳಿದುಕೊಂಡಿದೆ. ಹೀಗಿರುವಾಗ ನಿನ್ನೆ ಬೌದ್ಧರಾದ ಇವರಲ್ಲಿಯ ಹಳೆಯ ಸಂಸ್ಕಾರವು ಇಲ್ಲವಾಗುವದು ಸಾಧ್ಯವೇ ? ಊದಬತ್ತಿಯ ಬದಲಾಗಿ ಮೊಂಬತ್ತಿ ತಂದರೆ, ದೇಗುಲದಲ್ಲಿಯ ರಾಮನ ಮೂರ್ತಿ ತೆಗೆದುಹಾಕಿ ಬುದ್ಧನ ಮೂರ್ತಿ ಕೂರಿಸಿದ ಮಾತ್ರಕ್ಕೆ ಹಳೆಯ ಭಕ್ತಿ ಕಡಿಮೆಯಾಗುವದು ಸಾಧ್ಯವೇ? ಆ ಭಜನೆಯ ಹಾಡು, ಹರಕೆ ಹೊರುವ ಪದ್ಧತಿ, ಇದೆಲ್ಲವೂ ಬಹುಜನ ಸಮುದಾಯದ ನರನಾಡಿಗಳಲ್ಲಿ ನೆಲೆಸಿದೆ. ಅದು ಬದಲಾಗುವದು ಅಸಾಧ್ಯವಲ್ಲದಿದ್ದರೆ ಜಟಿಲ ವಾಗಿದೆ. ಹಿಂದೂ ಸಮುದಾಯದವರಲ್ಲಿ ಹಲವು ವೈಗುಣಗಳಿದ್ದರೂ (ಕೆಲವು ಅಪವಾದಗಳನ್ನು ಬಿಟ್ಟರೆ) ಪರಧರ್ಮ ಸಹಿಷ್ಣುತೆಯ ಏಕೈಕ ಗುಣವನ್ನು ಅದು ಇಂದಿಗೂ ಪ್ರಾಮಾಣಿಕವಾಗಿ ಉಳಿಸಿಕೊಂಡಿದೆ. ನವ ಬೌದ್ಧರು ಮಾತ್ರ ಕೆಲವೆಡೆ ಇದೇ ಪೂರ್ವಾಪರ ಉಜ್ವಲ ಪರಂಪರೆಯನ್ನು ತಿರಸ್ಕರಿಸುವುದನ್ನು ಕಾಣಬಹುದು. ಮಾತಿನ ಭಗ್ನದಿಂದ ಏನೂ ಸಾಧಿಸಿದಂತಾಗುವದಿಲ್ಲ. ಕೇವಲ ಅದರಿಂದ ಅವರ ಬಲ ಬೆಳೆಯುವದು ಮಾತ್ರ ಕಠಿಣವಾಗಬಹುದು. ಬಲವೆಂದರೆ ಆತ್ಮಬಲ, ಆತ್ಮಬಲ ವಿಲ್ಲದೆ ಹೊಸ ಶ್ರದ್ಧೆಯ ಮಾರ್ಗವನ್ನು ಅವಲಂಬಿಸುವದು, ಈ ಮೊದಲೇ ಪರಿತ್ಯಾಗ, ಅಜ್ಞಾನ ಮತ್ತು ದಾರಿದ್ರ್ಯದಿಂದ ತುಕ್ಕು ಹಿಡಿದ ಈ ಸಮಾಜಕ್ಕೆ ತುಂಬ ತುಂಬ ಕಠಿಣವಾಗುವದು ಎಂಬ ಸಂಗತಿಯು ಪ್ರತಿಯೊಬ್ಬ ಪ್ರಬುದ್ಧ ಭಾರತೀಯರಿಗೆ, ಅಸ್ಪೃಶ್ಯ ಸಮಾಜದ ಸದ್ಗುಣಿ ವರ್ಗಕ್ಕೆ ತೀರ ದುಃಖವನ್ನು ತಂದುಕೊಡುವಂತಹದು.

## ಧಾರ್ಮಿಕ ಗುರು ಸಂಸ್ಥೆಯ ಪುನರ್ ಸ್ಥಾಪನೆ

ಮತ್ತೊಂದು ಸಂಗತಿಯೇನೆಂದರೆ, ಪ್ರತ್ಯಕ್ಷವಾಗಿ ಬ್ರಾಹ್ಮಣವರ್ಗದ ವರ್ಚಸ್ಸಿನ ಅಡಿಯಲ್ಲಿ ಎಂದೂ ಇರದ ಈ ಸಮುದಾಯವು ಬೌದ್ಧ ಧರ್ಮದ ವಿಶಿಷ್ಟ ತಂತ್ರದಿಂದಾಗಿ ಇಲ್ಲಿಂದ ಮುಂದೆ ಭಿಕ್ಷುಶಾಸಿತಗೊಳ್ಳುತ್ತ ಹೋಗುತ್ತದೆ. ಧರ್ಮ ಗುರುವಿಲ್ಲದೆ ಅವರ ಯಾವ ಧಾರ್ಮಿಕ ಕಾರ್ಯವೂ ನಡೆಯಲಾರದು ಮತ್ತು ಈ ಭಿಕ್ಷುಗಳು ಪೂರ್ವಾಶ್ರಮದ ಅಸ್ಪೃಶ್ಯರಂತೂ ಅಲ್ಲವೇ ಅಲ್ಲ, ಹಲವರು ಭಾರತೀಯರೂ ಅಲ್ಲ, ಕ್ರೈಸ್ತ ಮಿಶನರಿಗಳು ಎಂಥವರೇ ಆಗಿರಲಿ, ಅವರು ಶಿಕ್ಷಣ ಮತ್ತು ವೈದ್ಯಕೀಯ ಕ್ಷೇತ್ರದಲ್ಲಿ ದೀನ-ದಲಿತರ ಅಪೂರ್ವ ಸೇವೆ ಮಾಡಿದ್ದಾರೆ. ಈ ಕೆಲವೇ ಕೆಲವು ಬೌದ್ಧ ದೀಕ್ಷಿತರಿಗೆ ಮೊದಲೇ ವೈದಿಕ ಧರ್ಮದ ಬಗೆಗೆ ಅಪೂರ್ಣ ಮಾಹಿತಿ ಹಾಗೂ ಸಾಕಷ್ಟು ಪೂರ್ವಗ್ರಹದ ಅಭಿಪ್ರಾಯಗಳು ಅವರಲ್ಲಿವೆ ಎಂಬುದನ್ನು ನಾನು ನನ್ನ ಸ್ವ-ಅನುಭವದಿಂದ ಹೇಳಬಲ್ಲೆ. ನವ ಬೌದ್ಧರಿಗೆ ಹಿಂದೂ ಸಮಾಜದ ಬಗೆಗೆ ಇರುವ ತಿರಸ್ಕಾರದ ಕಿಡಿ ಹೊತ್ತಿಸಲು ಅವರ ಕರ್ತೃತ್ವ ಕಾರಣವಾಗುತ್ತಿದೆ. ಭಾರತೀಯ ರಾಷ್ಟ್ರೀಯತೆ ಹಾಗೂ ಸಂಸ್ಕೃತಿಯ ಒಂದು ಅವಿಭಾಜ್ಯ ಘಟಕ ಈ ಅಸ್ಪೃಶ್ಯ ಸಮಾಜವಾಗಿದೆ. ನವ ಬೌದ್ಧರಾದರೂ ಇನ್ನೂ ಅದೇ ಆಗಿದೆ. ಅದರ ಹಕ್ಕು ಸ್ವಯಂಸಿದ್ಧವಾಗಿದೆ. ಆದರೆ ಇತರ ನಾಗರಿಕರಂತೆಯೆ ಈ ಸಮಾಜ ಸಹ ಭಾರತದೊಂದಿಗೆ ಕರ್ತವ್ಯಬದ್ಧವಾಗಿರುವದನ್ನು ಮರೆಯುವಂತಿಲ್ಲ. ಈ ಸಂಗತಿಯು ಈ ಧಾರ್ಮಿಕ ನಾಯಕತ್ವದಿಂದ ಅದೆಷ್ಟು ಸಾಧ್ಯವಾಗಬಹುದು ಎಂಬ ಬಗೆಗೆ ಸಂಶಯಪಡುವಂತಹ ಪರಿಸ್ಥಿತಿ ನಿರ್ಮಾಣವಾಗಿದೆ.

## ಸಹಾನುಭೂತಿಯ ಅಗತ್ಯ

ಈ ಸಲ ನನಗನಿಸುವದೇನೆಂದರೆ, ನವ ಬೌದ್ಧರ ಮತಾಂತರದ ಬಗೆಗೆ ನಾವು ಅತ್ಯಂತ ಸಹಾನುಭೂತಿಯಿಂದ ಯೋಚಿಸಬೇಕಾಗಿದೆ. ಬೌದ್ಧ ಧರ್ಮದ ಪ್ರೇರಣೆಯನ್ನು ಸುಶಿಕ್ಷಿತರಾದವರು ಹೆಚ್ಚು ನಿಚ್ಚಳ ದೃಷ್ಟಿಯಿಂದ ಪರೀಕ್ಷಿಸಬೇಕು. ಬುದ್ಧ ಭಾರತೀಯನಾಗಿದ್ದ. ಬೌದ್ಧ ಧರ್ಮವು ಭಾರತೀಯ ಅಧ್ಯಾತ್ಮಧಾರೆಯದ್ದೇ ಒಂದು ಅವಿಭಾಜ್ಯ ಪ್ರವಾಹವಾಗಿದೆ. ಆ ಪ್ರವಾಹವನ್ನು ಸ್ವೀಕರಿಸುವವರಿಗೆ ಹಾಗೂ ಇತರರಿಗೂ ಅದೇನು ಹೊಸದಲ್ಲ ಎಂಬ ಅರಿವು ಅಗತ್ಯವಾಗಿ ಇರಬೇಕು. ಭಾರತೀಯ ಸಂಸ್ಕೃತಿಯು ಅದೆಷ್ಟು ವಿಶಾಲ ಮತ್ತು ಬಹು ವರ್ಣೀಯವಾಗಿದೆ ಎಂದರೆ, ಯಾವುದೇ ಪರಂಪರಾಗತ ಪಂಥ ಮತ್ತು ಧರ್ಮವನ್ನು ಸ್ವೀಕರಿಸಿದ ಮಾತ್ರಕ್ಕೆ ಆ ಸಮುದಾಯವು ಅದರಿಂದ ಬೇರ್ಪಡುವದು ಸಾಧ್ಯವಿಲ್ಲ. ಈ ಪ್ರತ್ಯೇಕತೆಯು ಬುದ್ಧನ ಕಾಲದಲ್ಲೇ ಇರಲಿಲ್ಲವೆಂದಾಗ, ಈಗೆಲ್ಲಿಂದ ಬರಬೇಕು ?

## ಬುದ್ಧನ ಬೋಧನೆ

ಬುದ್ಧ ತನ್ನನ್ನು ಆರ್ಯ ಮತ್ತು ಕ್ಷತ್ರಿಯ ಎಂದು ಕರೆದುಕೊಳ್ಳುತ್ತಿದ್ದ. ಅವನ ಸತ್ಯವು ಆರ್ಯಸತ್ಯವಾಗಿತ್ತು. ಬುದ್ಧನ ಧರ್ಮಚಕ್ರ ಪ್ರವರ್ತನೆಯ ಯಶವು ಹೊಸ ಪ್ರಮೇಯವನ್ನು ಶೋಧಿಸುವಂತಹದೇನೂ ಆಗಿರಲಿಲ್ಲ. ಅವನ ಉದ್ದೇಶವು ಮುಖ್ಯವಾಗಿ ಯಜ್ಞ-ಯಾಗಗಳಲ್ಲಿ ನಡೆಯುವ ಹಿಂಸೆಯನ್ನು ನಿಲ್ಲಿಸುವದೇ ಆಗಿತ್ತು. ಅವನ ಮಾರ್ಗವು ಗೃಹಸ್ಥಾಶ್ರಮಕ ಸುಧಾರಕರದ್ದಾಗಿರಲಿಲ್ಲ, ಸನ್ಯಾಸದ್ದಾಗಿತ್ತು. ಯಜ್ಞ-ಯಾಗದ ಮೇಲಿನ ಟೀಕೆಯು ಉಪನಿಷತ್ತಿನಲ್ಲೂ ಸಿಗುತ್ತದೆ. ಅಧ್ಯಾತ್ಮ ವಿದ್ಯೆಯು ಕರ್ಮಕಾಂಡವನ್ನು ಜಯಿಸಬಲ್ಲದು ಎಂಬುದನ್ನು ಅವನು ತೋರಿಸಿದನು. ವಿರಕ್ತಿಯೇ ಅಂತಿಮ ಶ್ರೇಯದ ಮಾರ್ಗವಾಗಿದೆ ಎಂಬ ಶ್ರದ್ಧೆಯು ಉಪನಿಷತ್ತಿನಲ್ಲೂ ಕಾಣಸಿಗುತ್ತದೆ. ಬುದ್ಧನು ಇದಕ್ಕಿಂತ ಭಿನ್ನವಾದುದೇನು ಮಾಡಿದ ? "ಪಶು ಯಾಗವನ್ನು ನಿಲ್ಲಿಸಿ ಮತ್ತು ವಾಸನಾ ರಹಿತರಾಗಿ ಸಂಸಾರದ ತ್ಯಾಗವನ್ನು ಮಾಡಿ; ಸಂಸಾರ ದುಃಖದಿಂದ ಕೂಡಿದೆ. ಅದರಲ್ಲಿ ಉಳಿದರೆ ಜನ್ಮ-ಜನ್ಮಾಂತರದವರೆಗೂ ದುಃಖವನ್ನೇ ಭೋಗಿಸುವಿರಿ. ಅದನ್ನು ತೊರೆದು, ಪರಿವ್ರಾಜಕರಾಗಿ ಆತ್ಮ ಶರಣರಾಗಿ, ನಿಜವಾದ ಧರ್ಮವನ್ನು ಕಲಿಯಿರಿ. ಕರುಣಾಳುಗಳಾಗಿ ಜಗತ್ತನ್ನು ನೋಡಿ. ದ್ವೇಷದಿಂದ ದ್ವೇಷ ಶಮನವಾಗದು, ಅದು ದಯೆಯಿಂದ ಆಗುವದು. ಈ ಬಗೆಯ ಜೀವನ ಸಾಗಿಸುವವನು ಚರಾಚರದ ಗೆಳೆಯನಾಗುವನು, ದೇವರಿಗಿಂತ ಶ್ರೇಷ್ಠನಾಗುವನು, ಜನ್ಮ-ಮರಣದ ಚಕ್ರದಿಂದ ಬಿಡುಗಡೆ ಹೊಂದುವನು, ಅವನು ನಿರ್ವಾಣ ಹೊಂದುವನು. ಲೋಕ ಕಲ್ಯಾಣಕ್ಕಾಗಿ ನಮ್ಮ 'ನಾನು'ವನ್ನು, ನಮ್ಮ ವ್ಯಕ್ತಿತ್ವದ ಬೀಜವನ್ನೇ ಹೋಮ ಮಾಡಬೇಕು, ಅಸ್ತಿತ್ವವನ್ನೇ ನಂದಿಸಿಬಿಡಬೇಕು. ಇದೇ ನಿರ್ವಾಣದ ಅರ್ಥ." ಈ ತತ್ವಜ್ಞಾನ ಮತ್ತು ಸನ್ಯಾಸಿ ಜೀವನ ಇವೆರಡು ಆರ್ಯ ಮಾನ್ಯ ಮತ್ತು ಪರಂಪರಾಗತವೇ ಆಗಿತ್ತು. ಹಾಗಾದರೆ ಬುದ್ಧನ ಮಹತ್ವ ಎಲ್ಲಿದೆ ? ಜಾತಿಭೇದವನ್ನು ತೊಡೆದುಹಾಕಲು, ಅಹಿಂಸೆಯ ಆಚಾರಕ್ಕಾಗಿ, ಸ್ತ್ರೀಯರ ಉದ್ಧಾರಕ್ಕಾಗಿ ಅವನು ಯಾವ ಮಾರ್ಗವನ್ನು ತೋರಿಸಿದನೋ ಅದರಲ್ಲೇ ಅವನ ವೈಶಿಷ್ಟ್ಯವಿದೆ ಎಂದು ಬುದ್ಧನ ಮಹತಿಯನ್ನು ಹಾಡುವವರು, ಸ್ವರ್ಗಪ್ರಾಪ್ತಿಯ ವ್ಯವಹಾರ ಮಾಡಬಯಸುವವರು, ಇವರೆಲ್ಲಾ ಆಧುನಿಕ ಸುಧಾರಣೆಯ ಒಲುಮೆಯನ್ನು ಕಂಡು ಜನರ ಮನದ ಮೇಲೆ ಬಲವಂತದಿಂದ ಬಿಂಬಿಸುವ ಪ್ರಯತ್ನ ಮಾಡುತ್ತಿದ್ದಾರೆ. ಆದರೆ ಬುದ್ಧನ ಬುದ್ಧತ್ವ, ಅವನ ಧರ್ಮದ ಪ್ರೇರಣೆ, ಅವನ ಧರ್ಮದ ಮೂಲತತ್ವವು ಇದಕ್ಕಿಂತ ಎಷ್ಟೋ ಭಿನ್ನವಾದ ಮೌಲ್ಯವನ್ನು ಆಧರಿಸಿತ್ತು.

## ಬುದ್ಧ ಧರ್ಮದ ರಹಸ್ಯ

ಗೌತಮ ಬುದ್ಧನು ಜಾತೀಯತೆಯ ಮೇಲೆ ಪ್ರಹಾರ ಮಾಡಿದ ಎಂದು ಖಚಿತವಾಗಿ ಹೇಳಲಾಗುತ್ತದೆ. ಹಿಂದೂ ಚಾತುರ್ವರ್ಣ್ಯ ಪದ್ಧತಿಯ ಮೊದಲ ಭಂಜಕ ಎಂದೂ ನಂಬಿಸಲಾಗುತ್ತಿದೆ. ಸಂತನು, ಅವನು ಯಾವುದೇ ಕಾಲದವ ನಾಗಿರಲಿ ವರ್ಣಭೇದವನ್ನು ಎಂದಿಗೂ ಪುರಸ್ಕರಿಸುವದಿಲ್ಲ, ಆದರೂ ಪ್ರತಿಯೊಬ್ಬ ಸಂತನ ಮೇಲೆ ಅವನ ಯುಗದ ಸಂಸ್ಕಾರವು ಮೂಡಿರುತ್ತದೆ. ಕೆಲವು ಸಂಸ್ಕಾರ ಗಳನ್ನು ಅವನು ಬದಲಾಯಿಸುತ್ತಾನೆ, ಹೀಗಾಗಿಯೇ ಸಂತನೆನಿಸಿಕೊಳ್ಳುತ್ತಾನೆ. ಕೆಲವು ಸಂಸ್ಕಾರಗಳು, ವಿಶೇಷವಾಗಿ ಶಿಷ್ಟಾಚಾರ, ಸಮಾಜಧಾರಣೆಗೆ ಅಗತ್ಯವೆಂದು ಭಾವಿಸಿರುವ ಸಂಸ್ಕಾರಗಳು, ಅವನ ಆ ಕಾಲದ ಇತರ ಯಾವುದೇ ಕುಲೀನರಂತೆ ಇರುತ್ತದೆ. ಗೌತಮ ಬುದ್ಧನೂ ಇದಕ್ಕೆ ಹೊರತಲ್ಲ. ನಿರ್ವಾಣದ ಮಾರ್ಗವನ್ನು ಅವನೇ ಹುಡುಕಿದ, ಅಷ್ಟಾಂಗ ಮಾರ್ಗವು ಅವನ ಧ್ಯೇಯದ ಸಾಧನ. ಯೋಗ ಮಾರ್ಗದ ದೇಹದಂಡನೆಯು ತಪ್ಪಾದುದು. ಅದರಿಂದ ಮನಸ್ಸು ಶುದ್ಧವಾಗುವುದಿಲ್ಲ. ವಾಸನಾಪೂರ್ತಿಯ ಬಳಿಕವೂ ಅದು ಮಲಿನವಾಗಿಯೇ ಇರುತ್ತದೆ. ದೇಹಧಾರಣೆಗೆ ಅಗತ್ಯವಿದ್ದ ಆಹಾರ ವಿಹಾರವು ದೇಹಕ್ಕೆ ಬೇಕೇ ಬೇಕು. ಬ್ರಹ್ಮಚರ್ಯ ಬೇಕು, ಆದರೆ ಕ್ಷುದ್ರವಾದ ತಪ ಬೇಡ. ವೈರಾಗ್ಯ ಬೇಕು, ಆದರದು ಕರುಣಾಭಾವ ರಹಿತ ವಾಗಿರಬಾರದು. ಸನ್ಯಾಸಿ ಜೀವನ ಬೇಕು, ಆದರೆ ಜನರಿಂದ ದೂರದ ವಾಸ ಬೇಡ. ಏಕಾಂತ ಬೇಕು ಆದರೆ ನಿರ್ಜನ ಬೇಡ. ಸಂಘ ಬೇಕು ಆದರೆ ಸಂದಣಿ ಬೇಡ. ಎಲ್ಲವೂ ನಶ್ವರ, ಅನಿತ್ಯ, ಅನಾತ್ಮವಾಗಿದೆ. ವಸ್ತು ವಸ್ತುವಿನ, ಪ್ರಾಣಿ ಮಾತ್ರಗಳ ಅಸ್ತಿತ್ವದ ಸಾರ್ಥಕ್ಯವು ಕೊನೆಗೆ ಸಂಕಲ್ಪದ ಬಿಡುಗಡೆ ಹೊಂದುವದರಲ್ಲಿದೆ. ತನ್ನ ಹಿತವೇ ಸಮಾಜದ ಹಿತ. ಅದೇ ಬಹುಜನ ಸಮಾಜದ ಸುಖ, ಬಹುಜನರ ಹಿತ. ಇದು ಒಂದೇ ಜನ್ಮದಲ್ಲಿ ಸಾಧ್ಯವಿಲ್ಲ, ಜನ್ಮ ಜನ್ಮಾಂತರಗಳ ಕೊನೆಗೆ ಅದು

ಫಲಿಸುತ್ತದೆ. ಇದಕ್ಕಾಗಿ ಸಂಕಲ್ಪ, ವಾಸನಾ ತೊರೆಯಬೇಕಾದ ಅಗತ್ಯವಿದೆ. ಜಗತ್ತನ್ನು ದ್ವೇಷಿಸುವದರಿಂದ ಈ ಹಂಗು ಹರಿಯಲಾರದು. ಕರುಣೆಯ ಭಾವನೆಯಿಂದಲೇ ಅದು ಹರಿಯುವದು ಸಾಧ್ಯ. ಇದೇ ಅವನ ಧರ್ಮದ ರಹಸ್ಯ. ರತಿ ಮತ್ತು ನಿವೃತ್ತಿಯ ನಡುವಣ ಮಧ್ಯಮ ಮಾರ್ಗವು ನೋಡಲು ಸುಲಭವಾಗಿದ್ದರೂ ಅದನ್ನು ಆಚರಿಸಲು ಪರಮ ಕೌಶಲ್ಯ ಬೇಕು. ಕುಶಲದ 'ಉಪಸಂಪದ', 'ಪ್ರಾಪ್ತಿ' – ಇದೇ ಭಿಕ್ಷುವಿನ ಧ್ಯೇಯ. ಕುಶಲತೆಯೆಂದರೆ ಸ್ವಾಸ್ಥ್ಯ ಮತ್ತು ಕೌಶಲ್ಯ. 'ಯೋಗಃ ಕರ್ಮಸು ಕೌಶಲಮ್' ಎಂಬುದಕ್ಕಿಂತ ಈ ಮಾರ್ಗವು ತಾತ್ವಿಕವಾಗಿ ಭಿನ್ನವಾಗಿದೆ.

**ಸಮತೆಯ ವ್ಯಾಪ್ತಿ**

ಬುದ್ಧನು ದೇವರು ಮತ್ತು ಆತ್ಮ ಈ ಎರಡನ್ನೂ ತೊರೆದ. ಉಪನಿಷತ್ತಿಗಿಂತ ಭಿನ್ನವಾದ ವಿಚಾರಸರಣಿಯನ್ನು ಆರಂಭಿಸಿದ. ಮನುಷ್ಯನ ಮನಸ್ಸು ಸಂಕಲ್ಪದಿಂದ ಕೂಡಿರುತ್ತದೆ. ಆ ಸಂಕಲ್ಪವು ಕುಶಲ, ಅಕುಶಲ ಕರ್ಮದಿಂದ ಕೂಡಿರುತ್ತದೆ. ಕರ್ಮಕ್ಕೆ ತಕ್ಕಂತೆ ಜೀವನ ರೂಪಗೊಳ್ಳುತ್ತಿರುತ್ತದೆ. ಕರ್ಮದಿಂದ ಬಿಡುಗಡೆಯಿಲ್ಲ. ಆದರೆ ಕರ್ಮದ ಬೀಜಸಂಕಲ್ಪವು ನಿರ್ವಾಣವನ್ನು ಮುಕ್ತ ಮಾಡುತ್ತದೆ. ಈ ಕಾರಣಕ್ಕಾಗಿ ಮನುಷ್ಯ ಮನವನ್ನು ಒಂದು ಸ್ವಯಂಕೇಂದ್ರಿತ ವಸ್ತುವೆಂದು ಬುದ್ಧನು ಒಪ್ಪಿಕೊಂಡನು. ಈ ಮನವು ಪ್ರತಿಯೊಬ್ಬರ ಕೊಡುಗೆಯಾಗಿದೆ. ಇದು ಸಕಲರಿಗೆ ಸಮಾನ. ಈ ವಿಚಾರದ ಇಂದ್ರಿಯವನ್ನು ಪ್ರತಿಯೊಬ್ಬರೂ ಬಳಸಬೇಕು. ಇಲ್ಲಿಯ ವರೆಗೆ ಮನುಷ್ಯ ಸಮಾಜದಲ್ಲಿಯ ಸಮತೆಯನ್ನು ಬುದ್ಧನು ಒಪ್ಪಿದನು. ಆದರೆ ವರ್ಣಧರ್ಮದ ಚೌಕಟ್ಟಿನ ಹೊರಗೆ ಅವನು ಸನ್ಯಾಸಿ ಎಂದು ಹೋದರೂ ಈ ಬಗೆಗಿನ ಪೂರ್ವಗ್ರಹವು ಅವನನ್ನು ತೊರೆದಿತ್ತು ಎಂದು ಹೇಳುವಂತಿಲ್ಲ.

**ವರ್ಣಾಶ್ರಮ ಮತ್ತು ಬುದ್ಧ**

ಶ್ರುತಿ ಸ್ಮೃತಿಯಲ್ಲಿ 'ಬ್ರಾಹ್ಮಣ–ಕ್ಷತ್ರಿಯ–ವೈಶ್ಯ–ಶೂದ್ರ' ಎಂಬ ವರ್ಣದ ಅಳತೆ ಇರುತ್ತದೆ. ಬೌದ್ಧ ಗ್ರಂಥದಲ್ಲಿದು 'ಕ್ಷತ್ರಿಯ–ಬ್ರಾಹ್ಮಣ–ವೈಶ್ಯ–ಶೂದ್ರ' ಕ್ರಮದಲ್ಲಿದೆ. ಇವಿಷ್ಟೇ ಭೇದ. ನಮ್ಮ ಕ್ಷತ್ರಿಯರ ರಕ್ತವು ಬ್ರಾಹ್ಮಣರಿಗಿಂತ ಶುದ್ಧವಾಗಿದೆ. ಅದು ಹಾಗಿರಲೆಂದು ನಾವು ಸೋದರ–ಸೋದರಿಯರ ನಡುವೆ ಮದುವೆ ಮಾಡುತ್ತೇವೆ. ಆದರೆ ಬೀಜದ ಶುದ್ಧತೆಯನ್ನು ಶಾಶ್ವತವಾಗಿರಿಸುತ್ತೇವೆ – ಎಂಬ ಮಾತನ್ನು ಬುದ್ಧನು ಅಂಬರ ಸುತ್ತದಲ್ಲಿ ಹೇಳಿದ್ದಾನೆ. ಅದೇ ರೀತಿ ಜಾತಕ ಕಥೆಯ ಪ್ರಸ್ತಾವನೆಯಲ್ಲಿ 'ಬುದ್ಧ ಕೇವಲ ಕ್ಷತ್ರಿಯ ಮತ್ತು ಬ್ರಾಹ್ಮಣ ಕುಲದಲ್ಲಿ ಜನಿಸುತ್ತಾರೆ, ವೈಶ್ಯವಾಗಲಿ ಶೂದ್ರ ಕುಲದಲ್ಲಾಗಲಿ ಜನಿಸುವದಿಲ್ಲ' ಎಂದು ಸ್ಪಷ್ಟವಾಗಿ ಹೇಳಲಾಗಿದೆ.

## ಹೃದಯ

ಒಂದು ಹೃದಯದ ಸಾವಿರ ಸಾವಿರ ತುಂಡುಗಳಾದವು
ಕೆಲವು ಇಲ್ಲಿ ಕೆಲವು ಅಲ್ಲಿ ಕೆಲವು ಎಲ್ಲೆಲ್ಲೋ ಬಿದ್ದೋದವು

ಹೃದಯವು ಲೋಹಪಾತ್ರೆಯೋ ಗಾಜಿನ ಗೋಲವೋ ಆಗಿದ್ದರೆ
ಮುರಿದ ತುಂಡುಗಳು ಮುರಿದವರಿಗೆ ನೋವು ಕೊಡುತ್ತಿದ್ದವು

ದೊಡ್ಡ ದೊಡ್ಡ ಭವನಗಳಿದ್ದರೇನು? ಭವನಗಳ ತುಂಬಾ ಜನರಿದ್ದರೇನು?
ನಿರ್ದಯಿ ಬೇಡನಿಗೆ ಹೆದರಿ ಆಶಿಯಾನದ ಹಕ್ಕಿಗಳೆಲ್ಲಾ ಹಾರಿ ಹೋದವು

ಭಾವನೆಗಳ ವಜ್ರಗಳನ್ನಾರಿಸಿ ಕನಸಿನ ಅರಮನೆಯಲ್ಲಿ ಶೃಂಗರಿಸಿದ್ದೆ
ಕೆಲವು ಆಪ್ತರೇ ದೋಚಿಕೊಂಡರು ಕಎಲವು ಶತ್ರುಗಳ ಪಾಲಾದವು

ಬರಿದಾದ ತೋಟದಲ್ಲಿ ತಂಗಾಳಿ ಮತ್ತೇ ಬರುವುದೆಂದು ಕಾಯುತ್ತಿಹೆನು
ಆಸರೆಗಳು ದೂರವಾಗಿ ಸಂಬಂಧಗಳೆಲ್ಲಾ ಸ್ವಾರ್ಥದ ಸಂತೆಯಲ್ಲಿ ಕಳೆದೋದವು

"ಅಲ್ಲಾಹನ ರಹ್ಮತ್"ನಿಂದ ಎಂದಿಗೂ ಮಾಯೂಸ್ ಆಗದಿರು ಸಿರಾಜ್
ಇನ್ಷಾಅಲ್ಲಾಹ್ ಅಸಾಧ್ಯವೇನೂ ಇಲ್ಲ ಸದ್ಭಾವನೆಗಳೆಲ್ಲಾ ಫಲ ಕೊಡವು

**ಯು. ಸಿರಾಜ್ ಅಹಮದ್ ಸೊರಬ**
ಕೆರಾಫ್ ಅಶ್ವಿನಿ ಮೆಡಿಕಲ್ಸ್, ಶ್ರೀನಿವಾಸ ಕಾಂಪ್ಲೆಕ್ಸ್, ಸೊಂಡೇಕೊಪ್ಪ ರಸ್ತೆ
ನೆಲಮಂಗಲ – ೫೬೨೧೨೩, ಬೆಂಗಳೂರು ಗ್ರಾಮಾಂತರ ಜಿಲ್ಲೆ

ಜಾತಿ ಭೇದಾತೀತದ ಕಲ್ಪನೆಯು ಆಂಗ್ಲರ ಆಡಳಿತದಲ್ಲಿ ಮೂಡಿಬಂದ ಆಧುನಿಕ ಕಲ್ಪನೆಯಾಗಿದೆ. ಅದರ ಸಂಬಂಧ ಗೌತಮ ಬುದ್ಧನಿಗೆ ಹೇಗೆ ಅನ್ವಯಿಸುತ್ತದೆ ಎನ್ನುವದೇ ನನಗೆ ಅರ್ಥವಾಗುತ್ತಿಲ್ಲ. ಬುದ್ಧನ ಯುಗಧರ್ಮವು ಬೇರೆಯಾಗಿರುವದರಿಂದ, ಅದು ಅವನಲ್ಲಿ ಇರದಿದ್ದರೂ ಅದರಿಂದ ಅವನಿಗೆ ಯಾವುದೇ ಗೌಣತನ ಬರುವದು ಸಾಧ್ಯವಿಲ್ಲ.

**ಮಾಂಸಾಶನದ ಬಗೆಗೆ ಬುದ್ಧ ಮತ**

ಎರಡನೇ ಪ್ರಶ್ನೆಯು ಮಾಂಸಾಹಾರದ್ದು. ಬುದ್ಧನು ಅಹಿಂಸೆಯ ಪ್ರತಿಪಾದಕ. ಹೀಗಾಗಿ ಅವನಿಗೆ ಮಾಂಸಾಹಾರ ವರ್ಜ್ಯ ಎಂಬ ಲೆಕ್ಕಾಚಾರ. ಇಂದಿನ ಬಡಪಾಯಿ ಬೌದ್ಧರು ಇದರಿಂದಾಗಿ ಇಕ್ಕಟ್ಟಿನಲ್ಲಿ ಸಿಲುಕಿದ್ದಾರೆ. ಅಸ್ಪೃಶ್ಯ ಸಮಾಜ (ಕೆಲವು ವಾರಕರಿಗಳ ಹೊರತು) ಶಾಕಾಹಾರಿಯಲ್ಲ, ಬಹುಸಂಖ್ಯಾತ ಜನರು ಅರೆ ಹೊಟ್ಟೆಯಲ್ಲಿ ಇರುವಾಗ ಶಾಕಾಹಾರದ ಉಗ್ರ ಪರೀಕ್ಷೆಯಿಂದ ಅವರು ಹೇಗೆ ಪಾರಾಗಬಲ್ಲರು ಎನ್ನುವದೇ ದೊಡ್ಡ ಪ್ರಶ್ನೆ. ಆ ಪರೀಕ್ಷೆಯನ್ನು ದಾಟಿದರೂ, ಕೇವಲ ಧರ್ಮ ಪಾಲನೆಗಾಗಿ ಅವರನ್ನು ಅವರ ನೈಸರ್ಗಿಕ ಆಹಾರದಿಂದ ಹೊರಗಿಡುವದು ಅನ್ಯಾಯದ್ದಾಗುತ್ತದೆ. ಸ್ವತಃ ಬುದ್ಧನೇ ಹಂದಿಯ ಮಾಂಸ ತಿಂದು ಅನಾರೋಗ್ಯದಿಂದ ಬಳಲಿದ, ಕೊನೆಗೆ ಅದರಿಂದಲೇ ಮಡಿದ ಎಂದು ಬೌದ್ಧ ಗ್ರಂಥಗಳು ಹೇಳುತ್ತವೆ. ಪ್ರಾಣಿ ಹಿಂಸೆಯ ಬಗ್ಗೆ ಅವನಿಗೆ ಆತ್ಯಂತಿಕ ತಿರಸ್ಕಾರವಿದ್ದರೂ ಮಹಾವೀರನಂತೆ ಅವನು ಮಾಂಸಾಹಾರವನ್ನು ಸಂಪೂರ್ಣ ತ್ಯಜಿಸಿ, ಅದನ್ನು ತನ್ನ ಪ್ರಚಾರದ ಮುಖ್ಯ ಉದ್ದೇಶವನ್ನಾಗಿ ಬಳಸಿಕೊಳ್ಳಲಿಲ್ಲ. ಭಿಕ್ಷುಗಳು ಎಲ್ಲ ಜಾತಿಯ ಜನರ ಕೈಯಿಂದ ಸ್ವೀಕರಿಸಬೇಕು, ಅದನ್ನೇ ತಿನ್ನಬೇಕು ಎಂಬ ಸೌಜನ್ಯದ ನಿಯಮವನ್ನು ಅವನು ರೂಪಿಸಿದ. ಧಮ್ಮ ಪದ – ಅಟ್ಟ ಕಥೆಗಳಲ್ಲೂ ಭಿಕ್ಷು ಅಂಬಿಗರಿಂದ ಮೀನು ಪಡೆದ ಉಲ್ಲೇಖ ಲಭಿಸುತ್ತದೆ. ಸ್ವತಃ ತಿನ್ನಲು ಹತ್ಯೆ ಮಾಡಬಾರದು. ಬೇರೆಯವರಿಂದಲೂ ಮಾಡಿಸಬಾರದು. ಆದರೆ ಬೇರೆಯವರು ತಮಗಾಗಿ ಪ್ರಾಣಿಯನ್ನು ಕೊಂದಿದ್ದರೆ, ಆ ಮಾಂಸವನ್ನು ವರ್ಜ್ಯವೆಂದು ಭಾವಿಸಿ ಆ ಅನ್ನವನ್ನು ಭಿಕ್ಷು ಆದವನು ಅನಾದರ ಮಾಡಕೂಡದು. ಇದು ಬುದ್ಧನ ಆಶಯವಾಗಿದೆ. ಪ್ರಾಯಃ ಶ್ರೀಮಂತರಾದವರು ಉಪಾಸಕ ಭಿಕ್ಷುಗಳಿಗೆ ಪಾಯಸ ನೀಡುತ್ತಿದ್ದಿರಬೇಕು. ಚೀನ, ಜಪಾನ, ಬ್ರಹ್ಮದೇಶ ಮುಂತಾದೆಡೆಗಳಲ್ಲಿ ಭಿಕ್ಷುಗಳು ಬಹಿರಂಗವಾಗೇ ಮಾಂಸಾಹಾರ ಸೇವಿಸುತ್ತಾರೆ. ಹಲವರು ಅವರ ಚೇಷ್ಟೆ ಮಾಡುತ್ತಾರೆ. ಆದರೆ ಅದರಲ್ಲೂ ತಪ್ಪೇನಿದೆ? ಶಾಕಾಹಾರದಲ್ಲಿ ಅಹಿಂಸೆಯಿದೆ ಎಂಬ ಕಲ್ಪನೆ ಜೈನರದ್ದು, ಅದು ವೈದಿಕರದ್ದಲ್ಲ. ಬೌದ್ಧರದ್ದೂ ಅಲ್ಲ. ಮುಂದೆ ಇದೇ ಕಲ್ಪನೆಯನ್ನು ಬ್ರಾಹ್ಮಣರು ಸ್ವೀಕರಿಸಿದರು. ಸಮಾಜ ಮಾನ್ಯತೆಯನ್ನೂ ಪಡೆಯಿತು. ಆದರೆ ನಂತರದ ಮೌಲ್ಯದ ಯೋಚನೆ ಮಾಡಿ ಬುದ್ಧರ ಅಹಿಂಸೆಯನ್ನು ಅಪಹಾಸ್ಯ ಮಾಡುವದು ಸರಿಯಲ್ಲ. ವನಸ್ಪತಿಗೂ ಪ್ರಾಣವಿದೆ. ಅದರ ಜೀವ ತೆಗೆಯುವದು ಎಂದರೆ ಹಿಂಸೆಯೇ ಆಗಿದೆ. ಆಗ ಶಾಕಾಹಾರವು ಪ್ರಾಯಃ ಕಡಿಮೆ ಪ್ರಮಾಣದಲ್ಲಿ ಹಿಂಸೆಯಾಗಿರಬೇಕು. ಏಕೆಂದರೆ ಧಾನ್ಯ ಬೀಜಗಳು ಪಶು ಬೀಜಕ್ಕಿಂತ ಎಷ್ಟೋ ಅನಂತ ಪಟ್ಟಿನಲ್ಲಿ ಅಧಿಕವಾಗಿಯೂ ಮತ್ತು ವೇಗವಾಗಿಯೂ ಬೆಳೆಯುತ್ತವೆ. ಹೀಗಾಗಿ ಕೆಲವು ಅಹಿಂಸೆಯ ಪ್ರತಿಪಾದಕರು ನವ ಬೌದ್ಧರ ಮೇಲೆ ಬೇಡವಾದ ಬಂಧನವನ್ನು ಹೇರಿ, ಅವರ ನಿಷ್ಠೆಯ ಬೆಲೆಯನ್ನು ಆಹಾರದಿಂದ ಕಟ್ಟಲು ಬಯಸುವದು ತಪ್ಪು. ನವ ಬೌದ್ಧರು ತಮ್ಮ ಆಹಾರ ಸಂಸ್ಕೃತಿಯನ್ನು ಬದಲಾಯಿಸುವ ಅಗತ್ಯ ಖಂಡಿತಕ್ಕೂ ಇಲ್ಲ. ಮದ್ಯ ಮಾತ್ರ ಅವರು ಸಂಪೂರ್ಣ ವರ್ಜಿಸಬೇಕು. ಗೃಹಾತ್ಮನು ಪಾಲಿಸಬೇಕಾದ ಪಂಚಶೀಲ ಎಂದರೆ ಹಿಂಸೆ, ಹುಸಿ ನುಡಿಯುವದು, ಅಸಭ್ಯ ಮಾತು, ಮದ್ಯಪಾನ, ಕಳ್ಳತನ ಮತ್ತು ವ್ಯಭಿಚಾರ.

(ಟಿಪ್ಪಣಿ : ಬಹುಸಂಖ್ಯಾತ ದಲಿತರು ಅಂಬೇಡ್ಕರರ ಹೇಳಿಕೆಯಿಂದ ಬೌದ್ಧ ಧರ್ಮವನ್ನು ಸ್ವೀಕರಿಸಿದರು. ಆಗ ಯೋಚನೆಗೆ ಚಾಲನೆ ಸಿಕ್ಕಿತು. ಆದರೆ ಧರ್ಮ ಪರಿವರ್ತನೆಯ ಬಗ್ಗೆ ಯೋಚಿಸುವಾಗ ಬೌದ್ಧ ಧರ್ಮದ ಬಗೆಗೆ ಆಶಾವಾದ ಚರ್ಚೆ ನಡೆಯಲೇ ಇಲ್ಲ. ಈ ಕೊರತೆಯನ್ನು ಹೋಗಲಾಡಿಸಲು ಈ ಲೇಖನ.)

*(ಈ ಲೇಖನದ ಗ್ರಹಿಕೆಯನ್ನು ಕುರಿತಂತೆ ಚರ್ಚೆಗೆ ಸ್ವಾಗತವಿದೆ. ಪ್ರತಿಕ್ರಿಯೆಗಳು ಸಂಕ್ಷಿಪ್ತವಾಗಿರಬೇಕು. – ಸಂ.)*

ಮರಾಠಿ ಮೂಲ : **ದುರ್ಗಾ ಭಾಗವತ**
ಕನ್ನಡಕ್ಕೆ : **ಚಂದ್ರಕಾಂತ ಪೋಕಳೆ**
ನಂ. ೩೫೯, ಹನುಮಾನ ನಗರ, ಬೆಳಗಾವಿ – ೫೯೦ ೦೧೯






## ಪ್ರತಿಲೋಮ

*ಪ್ರೊ|| ಎನ್. ವಿ. ಅಂಬಾಮಣಿಮೂರ್ತಿ*

**ಪುಟ : xii + ೧೮೦ = ೧೯೨ ಬೆಲೆ : ರೂ. ೧೪೦**

**ಪ್ರಿಯದರ್ಶಿನಿ ಪ್ರಕಾಶನ,** ಬೆಂಗಳೂರು

ಬಹುತೇಕ ಜನ ಚಿಂತೆ ಮಾಡುತ್ತಾರೆಯೇ ಹೊರತು ಚಿಂತನೆ ಮಾಡುವುದಿಲ್ಲ. ಚಿಂತನ-ಮಂಥನದ ಉದ್ದೇಶ ಸತ್ಯಾನ್ವೇಷಣೆ. ಪರಂಪರಾನುಗತವಾಗಿ ಬಂದಿರುವ ನಂಬಿಕೆ ಆಚರಣೆಗಳಲ್ಲಿ ಯಾವುದು ಸರಿ, ಯಾವುದು ತಪ್ಪು ಎಂಬುದನ್ನು ನಾವು ವಿಮರ್ಶೆ ಮಾಡಬೇಕು. ಸರಿಯಾದುದನ್ನು ಉಳಿಸಿಕೊಂಡು, ತಪ್ಪಾದುದನ್ನು ಬಿಡಬೇಕು. ಇದು ನಿರಂತರವಾಗಿ ನಡೆಯುತ್ತಿರಬೇಕು. ಆದರೆ ನಮ್ಮ ದೇಶದಲ್ಲಿ ಸಂಪ್ರದಾಯ-ಸಂಸ್ಕೃತಿಯ ಹೆಸರಿನಲ್ಲಿ ಅನೇಕ ಅಮಾನವೀಯವಾದ ಅಪಾಯಕಾರಿಯಾದ ನಂಬಿಕೆ ಆಚರಣೆಗಳು ಜನಜೀವನದಲ್ಲಿ ಹಾಸು ಹೊಕ್ಕಾಗಿವೆ. ಪ್ರೊ|| ಎನ್. ವಿ. ಅಂಬಾಮಣಿಮೂರ್ತಿಯವರು ಆಧುನಿಕ ಮನೋಭಾವವುಳ್ಳ, ಚಿಂತನೆ-ವಿಮರ್ಶೆ ಮಾಡುವ ಗುಣವುಳ್ಳ, ಜೊತೆಗೆ ತಮ್ಮ ಅಭಿಪ್ರಾಯಗಳನ್ನು ನೇರವಾಗಿ ದಿಟ್ಟವಾಗಿ ಹೇಳಬಲ್ಲ ಮಹಿಳೆ. ಅವರ ಇತ್ತೀಚಿನ ಕೃತಿ 'ಪ್ರತಿಲೋಮ'ದಲ್ಲಿ ಮೂವತ್ತು ಲೇಖನಗಳಿವೆ. ಪತ್ರಿಕೆಗಳಲ್ಲಿ ಈಗಾಗಲೇ ಪ್ರಕಟವಾಗಿ ಓದುಗರ ಗಮನವನ್ನು ಸೆಳೆದಿವೆ. ಮಡೆಸ್ನಾನ, ಜಾತಿವ್ಯವಸ್ಥೆ-ಅಸ್ಪೃಶ್ಯತೆ, ಮೌಢ್ಯಾಚರಣೆ ಮಸೂದೆ, ವೇಶ್ಯಾವೃತ್ತಿಯನ್ನು ಕಾನೂನುಬದ್ಧಗೊಳಿಸುವುದು, ಯಜ್ಞಾಚರಣೆ, ಆಧುನಿಕ ಶಿಕ್ಷಣ ಇತ್ಯಾದಿ ವಿಷಯಗಳಲ್ಲಿ ಚರ್ಚಿಸಿದ್ದಾರೆ. ಅತ್ತಿಮಬ್ಬೆ, ಅಕ್ಕಮಹಾದೇವಿ, ದಾಭೋಲ್ಕರ್, ಎಂ. ಎಂ. ಕಲಬುರ್ಗಿ ಇತ್ಯಾದಿ ದೊಡ್ಡವರ ಬಗ್ಗೆ ವ್ಯಕ್ತಿಚಿತ್ರವನ್ನೂ ಬರೆದಿದ್ದಾರೆ. ಲೇಖಕಿಯು ಸ್ಪಷ್ಟವಾಗಿ ಈ ಲೇಖನಗಳಲ್ಲಿ ಟೊಳ್ಳುಗಟ್ಟಿಗಳ ಅನಾವರಣ ಮಾಡಿದ್ದಾರೆ. ಪ್ರತಿಯೊಬ್ಬರೂ ವೈಜ್ಞಾನಿಕ ಮತ್ತು ವೈಚಾರಿಕ ಮನೋಭಾವವನ್ನು ಹೊಂದುವ ಅಗತ್ಯವನ್ನು ಒತ್ತಿ ಹೇಳಿದ್ದಾರೆ. ಅವರ ಬರಹ ಸುಲಭವಾಗಿ ಓದಿಸಿಕೊಳ್ಳುತ್ತದೆ. ನಮ್ಮನ್ನೂ ಚಿಂತನೆಗೆ ಪ್ರೇರೇಪಿಸುತ್ತದೆ. ಲೇಖಕಿ ಅಭಿನಂದನಾರ್ಹರು.

– **ಡಾ|| ಸಿ. ಆರ್. ಚಂದ್ರಶೇಖರ್,** ಬನ್ನೇರುಘಟ್ಟ ರಸ್ತೆ, ಬೆಂಗಳೂರು – ೫೬೦ ೦೭೬



## ಸಂವಹನ : ಗ್ರಹಿಸುವ ಮತ್ತು ವ್ಯಕ್ತಪಡಿಸುವ ಕೌಶಲ – ೧

**(ಪುಟ್ಟಮಕ್ಕಳ ಕೌಶಲ ವೃದ್ಧಿಗಾಗಿ ಪ್ರಾಯೋಗಿಕ ಕೈಪಿಡಿ)**

*ಸಂ. : ಡಾ|| ಪ್ರತಿಭಾ ಕಾರಂತ್, ಅನು : ಡಾ|| ಪಿ. ಎಸ್. ಗೀತಾ*

**ಪುಟ : ೧೧೬ ಬೆಲೆ : ರೂ. ೨೨೫**

**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ ಬೆಂಗಳೂರು – ೫೬೦ ೦೦೧



## ಸಂವಹನ : ಗ್ರಹಿಸುವ ಮತ್ತು ವ್ಯಕ್ತಪಡಿಸುವ ಕೌಶಲ – ೨

**(ಶಾಲಾಪೂರ್ವ ಮಕ್ಕಳ ಕೌಶಲ ವೃದ್ಧಿಗಾಗಿ ಪ್ರಾಯೋಗಿಕ ಕೈಪಿಡಿ)**

*ಸಂ. : ಡಾ|| ಪ್ರತಿಭಾ ಕಾರಂತ್, ಅನು : ಡಾ|| ಜಿ. ಶ್ರೀನಿವಾಸಮೂರ್ತಿ*

**ಪುಟ : ೧೧೨ ಬೆಲೆ : ರೂ. ೨೨೫**

**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ ಬೆಂಗಳೂರು – ೫೬೦ ೦೦೧

ಯಾವುದೇ ಕಲಿಕೆಯ ಪ್ರಕ್ರಿಯೆಯಲ್ಲಿ ಮತ್ತು ಬಾಂಧವ್ಯದ ಬೆಳವಣಿಗೆಯಲ್ಲಿ ಸೂಕ್ತ ಪ್ರಮಾಣದ ಹಾಗೂ ಉತ್ತಮ ಗುಣಮಟ್ಟದ "ಸಂವಹನ" ಸಾಮರ್ಥ್ಯ ಅತೀ ಅವಶ್ಯಕ. ಅಂದರೆ ಗ್ರಹಿಸುವ ಮತ್ತು ವ್ಯಕ್ತಪಡಿಸುವ (ಭಾಷಾ ಹಾಗೂ ಭಾಷಾರಹಿತ ಸಂವಹನ) ಕುಶಲತೆ. ಇತ್ತೀಚಿನ ದಿನಗಳಲ್ಲಿ ಈ ಸಾಮರ್ಥ್ಯದ ಕೊರತೆ, ಮಕ್ಕಳಲ್ಲಿ ಹೆಚ್ಚಾಗಿ ಕಂಡುಬರುತ್ತಿದೆ. ಇದು ಪೋಷಕರಿಗೆ, ಶಿಕ್ಷಕರಿಗೆ ಹಾಗೂ ಚಿಕಿತ್ಸಕರಿಗೆ ದೊಡ್ಡ ಸವಾಲಾಗಿ ಪರಿಣಮಿಸಿದೆ. ಹಾಗೆಯೇ ಈ ತೊಂದರೆಯ ನಿರ್ವಹಣೆಗೆ ಬೇಕಾದ ತಜ್ಞರ ಹಾಗೂ ತರಬೇತಿದಾರರ ಕೊರತೆಯೂ ದೊಡ್ಡ ಪ್ರಮಾಣದಲ್ಲಿದೆ ಎಂದು ಹೇಳಬಹುದು. ಇದಲ್ಲದೆ ಈ ತೊಂದರೆಯ ಪರಿಹಾರ ಪ್ರಕ್ರಿಯೆಗೆ ದೀರ್ಘ ಸಮಯ ಹಿಡಿಯುವುದರಿಂದ ಹಾಗೂ ಈ ತರಹದ "ಸೇವೆ" ದುಬಾರಿಯಾಗಿರುವುದರಿಂದ ಮಧ್ಯಮ ಹಾಗೂ ಕೆಳವರ್ಗದ ಜನರಿಗೆ ಎಟುಕುವ ಸಾಧ್ಯತೆ ತುಂಬ ಕಡಿಮೆ. ಈ ದೃಷ್ಟಿಯಿಂದ ಈ ಕೈಪಿಡಿಗಳು ತಜ್ಞರ ಸೇವಾ ಕೊರತೆಯನ್ನು ಸ್ವಲ್ಪ ಮಟ್ಟಿಗಾದರೂ ನೀಗಿಸುವಲ್ಲಿ ಉತ್ತಮ ಪ್ರಯತ್ನವಾಗಿದೆ ಎನ್ನುವುದರಲ್ಲಿ ಯಾವುದೇ ಸಂಶಯವಿಲ್ಲ. ಯಾವುದೇ ಪ್ರಾಯೋಗಿಕ ಚಟುವಟಿಕೆಗಳಿಗೆ ವಿಷಯದ ಬಗ್ಗೆ ಖಚಿತ ಹಾಗೂ ಸಮಗ್ರ ಮಾಹಿತಿ ಮತ್ತು ವಿವರವಾದ ಅಗತ್ಯ ಸೂಚನೆಗಳೇ ಜೀವಾಳ. ಇವೆರಡೂ ಈ ಕೈಪಿಡಿಗಳಲ್ಲಿ ಸಮೃದ್ಧವಾಗಿ ಕೊಡಲ್ಪಟ್ಟಿವೆ. ಹಾಗಾಗಿ ಇವುಗಳ ಬಳಕೆಯಿಂದ ಉತ್ತಮ ಫಲಿತಾಂಶವನ್ನು ನಿರೀಕ್ಷಿಸಬಹುದು.

## ಕಲಿಕೆಯ ಪೂರ್ವಾಪೇಕ್ಷಿತ ಕೌಶಲಗಳು (ಒಂದು ಪ್ರಾಯೋಗಿಕ ಕೈಪಿಡಿ)

*ಸಂ. : ಡಾ|| ಪ್ರತಿಭಾ ಕಾರಂತ್, ಅನು : ಡಾ|| ಎಂ. ಸಿ. ಪ್ರಕಾಶ್*

**ಪುಟ : ೭೨ ಬೆಲೆ : ರೂ. ೧೫೦**

**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ ಬೆಂಗಳೂರು – ೫೬೦ ೦೦೧



ಭಾಷೆ ಮತ್ತು ಸಂವಹನ ಕೌಶಲಗಳು ವಿಕಾಸಗೊಳ್ಳಬೇಕಾದರೆ ಮಗುವಿನಲ್ಲಿ ಕೆಲವು ಮೂಲಭೂತ ದೈಹಿಕ, ಬೌದ್ಧಿಕ, ಮಾನಸಿಕ ನಡವಳಿಕೆಗಳು ಇರುವುದು ಅತ್ಯಗತ್ಯ. ಉದಾಹರಣೆಗೆ ಗಮನ ಕೌಶಲ, ದೃಷ್ಟಿ ಸಂಪರ್ಕ ಕೌಶಲ, ತಾಳ್ಮೆಯಿಂದ ಒಂದೆಡೆ ಕುಳಿತಿರುವುದು, ಸಂವೇದನಾ ಕೌಶಲ, ಅನುಕರಣ ಸಾಮರ್ಥ್ಯ, ಚಲನಾ ಕೌಶಲ, ಭಾಷಾ ಸಾಮರ್ಥ್ಯ (ಗ್ರಹಣಶಕ್ತಿ – ವ್ಯಕ್ತಪಡಿಸುವಿಕೆ), ಸಾಮಾಜಿಕ ಮತ್ತು ಭಾವನಾತ್ಮಕ ಕುಶಲತೆಗಳು, ಆಕಾರಗಳನ್ನು, ಧ್ವನಿಗಳನ್ನು ಗುರುತಿಸುವುದು, ವಸ್ತುಗಳ ಬಿಡಿಭಾಗಗಳನ್ನು ಗುರುತಿಸಿ ಸಂಬಂಧಪಟ್ಟ ವಸ್ತುಗಳಿಗೆ ಹೊಂದಿಸುವುದು, ಮುಂದಾಗುವುದನ್ನು ನಿರೀಕ್ಷಿಸುವುದು ಇತ್ಯಾದಿ. ಈ ಎಲ್ಲಾ ಕುಶಲತೆಗಳ ಮಟ್ಟವನ್ನು ಗುರುತಿಸಿ, ಬೆಳೆಸಿ ಗಟ್ಟಿಗೊಳಿಸುವುದು, ಯಾವುದೇ ಕಲಿಕಾ ಪ್ರಕ್ರಿಯೆಯಲ್ಲಿ ಒಂದು ದೊಡ್ಡ ಸವಾಲು. ಈ ನಿಟ್ಟಿನಲ್ಲಿ ಡಾ|| ಪ್ರತಿಭಾ ಕಾರಂತ್ ಅವರ ತಂಡದ ೧೫-೧೬ ವರ್ಷಗಳ ಸಂಶೋಧನೆ ಹಾಗೂ ಅಧ್ಯಯನದ ಸಾರವನ್ನು ಹೀರಿಕೊಂಡು, ಸರಳವಾಗಿ ಮತ್ತು ಬಳಸಲು ಸುಲಭವಾಗಿರುವಂತೆ ಈ ಪ್ರಾಯೋಗಿಕ ಕೈಪಿಡಿ ತಯಾರಾಗಿದೆ. ಇದು (೦-೬) ವರುಷ ವಯಸ್ಸಿನ ಮಕ್ಕಳ ಪೋಷಕರು ಹಾಗೂ ಶಿಕ್ಷಕರ ಅಗತ್ಯತೆಗಳಿಗೆ ಮೂಡಿಬಂದಿದೆ. ಇದು ಬಹುಮುಖ್ಯವಾಗಿ 'ಆಟಿಸಂ' ವ್ಯಾಧಿಯಿಂದ ಬಳಲುವ ಮಕ್ಕಳಿಗೆ ಆರಂಭದ ಹಂತದಲ್ಲೇ ಸಮಸ್ಯೆಯನ್ನು ಪತ್ತೆಹಚ್ಚಿ ಚಿಕಿತ್ಸಾ ಕ್ರಮವನ್ನು ರೂಪಿಸಲು ನೆರವಾಗುತ್ತದೆ. ಈ ಕೈಪಿಡಿಯ ಕನ್ನಡಾನುವಾದವನ್ನು ಪ್ರಕಟಿಸಿರುವ ನವಕರ್ನಾಟಕ ಪ್ರಕಾಶನ ಅಭಿನಂದನೀಯ.

– **ಕುಸುಮಾ ಸುರೇಂದ್ರ,** ಮೈಸೂರು ರಸ್ತೆ, ಪಂತರಪಾಳ್ಯ, ಬೆಂಗಳೂರು – ೫೬೦ ೦೫೯



ತಿಂಗಳ ಕಥೆ



# ಹರಕೆ

**ಸುನೀತಾ**

"ನನ್ನ ಕಾರಣವರೆ, ನಾನು ಇಲ್ಲಿಂದ ಹೋಗಲ್ಲಾ... ನಾನು ಇಲ್ಲೇ ಇರುತ್ತೇನೆ. ನನ್ನ ವೀಸಾ ಸರಿಯಾಗದಿರಲಿ. ಹಾಗಾಗಿದ್ದಲ್ಲಿ ಆ ಕೊಚ್ಚಪ್ಪನ ಅಂಗಡಿಯಿಂದ ೧೦೦ ಗ್ರಾಂ ಎಣ್ಣೆ ತೆಗೆದು ದೀಪ ಹಚ್ಚುವೆ."

ಕಣ್ಣ, ಕಣ್ಣುಮುಚ್ಚಿ ಕೈ ಮುಗಿದು ಮತ್ತೆ ಮತ್ತೆ ಏನೇನೊ ನಿವೇದಿಸಿಕೊಳ್ಳುತ್ತಿದ್ದಾನೆ. ಅವನ ಐದು ಜನ ಕಾರಣವರ ಸಮಾಧಿ ಅದು. ಅಲ್ಲಿ ಮಧ್ಯದಲ್ಲಿರುವವರು ಎಲ್ಲರಿಗಿಂತ ದೊಡ್ಡ ಮಾವ. ಅಲ್ಲಿ ಮಾತ್ರ ಒಂದು ಕಲ್ಲಿನ ಮೇಲೆ ಕೊಡೆ ತರಹದ ಬೇರೆ ಒಂದು ಚೌಕಾಕಾರದ ಕಲ್ಲನ್ನು ಇರಿಸಲಾಗಿದೆ. ಆ ದೊಡ್ಡ ಮಾವನಿಗೆ ಮಾತ್ರ ಪ್ರತಿದಿನ ದೀಪ ಹಚ್ಚಿಡಲಾಗುತ್ತದೆ. ಈ ಬದಿಗಿರುವುದು ಅವನ ಅಪ್ಪನ ಮಾವ. ಇಪ್ಪತ್ತನೇ ವಯಸ್ಸಿನಲ್ಲೇ ತೀರಿಹೋದರಂತೆ. ಅಜ್ಜಿ ಕೂಡಾ ಆ ಮಾವನನ್ನು ನೋಡಿಲ್ವಂತೆ. ಇದೆಲ್ಲವನ್ನು ಅವನಿಗೆ ಅಪ್ಪನೇ ಹೇಳಿಕೊಟ್ಟಿದ್ದರು. ಕರೆದ ತಕ್ಷಣ ದೊಡ್ಡ ಮಾವ ಓಗೊಡುತ್ತಾರೆ. ಹಿಂದೆ ಒಮ್ಮೆ ಅಜ್ಜಿಯ ಚಿನ್ನದ ಸರ ಕಾಣೆಯಾಗಿತ್ತು. ಆಗ ೧೦೦ ಗ್ರಾಂ ಎಣ್ಣೆ ಹರಕೆ ಕಟ್ಟಿದ್ದರಂತೆ. ಅಲ್ಲೇ ಕೊಳದ ಬದಿಯಲ್ಲೇ ಚಿನ್ನದ ಸರ ಬಿದ್ದಿತ್ತು. ಅಂಗಳ ಗುಡಿಸಲು ಬರುತ್ತಿದ್ದ ವಿಲಾಸಿನಿ ಅದನ್ನು ಹೇಳಿದಳು. "ನನ್ನ ದೊಡ್ಡ ತಾತಾನೂ ಸೇರಿ ಉಳಿದೆಲ್ಲಾ ಕಾರಣವರೆ, ನನ್ನನ್ನು ಇಲ್ಲಿಂದ ಕಳುಹಿಸಲು ಒಪ್ಪಬೇಡಿ. ಎಣ್ಣೆ ಮರೆಯದೆ ಒಪ್ಪಿಸುವೆ. ಹರಕೆ ಕಟ್ಟಿದರೆ ಮರೆಯಬಾರದು. ಏಕೆಂದರೆ ಈ ಕಾರಣವರೆಲ್ಲಾ ಬಲು ಕೋಪಿಷ್ಟರಂತೆ.

ಬೆಳಿಗ್ಗೆ ಅವನ ಅಪ್ಪ, ಅಮ್ಮ ಫೋನ್ ಮಾಡಿದ್ದರು. ರಜೆ ಮುಗಿದರೆ ಅವನನ್ನು ಅಬುದಾಬಿಗೆ ಕರೆದುಕೊಂಡು ಹೋಗುತ್ತಾರಂತೆ. ಕೇಳಿದ್ದಾಗಿನಿಂದ ಕಣ್ಣನಿಗೆ ಆತಂಕ ಶುರು. "ಅಜ್ಜ ಬರಲಿ. ನನಗೆ ವೀಸಾನೂ ಬೇಡಾ, ಏನೂ ಬೇಡ" ಎಂದು ಹೇಳುತ್ತೇನೆ. ನೆರೆ ಮನೆಯ ಬ್ಲಾಕಿ ನಾಯಿ ಅಲ್ಲಿ ಹೋಗುತ್ತಿದೆ. ಅವನು ಬಗ್ಗಿ ಒಂದು ಕಲ್ಲು ತೆಗೆದ. ಅದಕ್ಕೆ ಭಯಂಕರ ಬುದ್ಧಿ. ಬಗ್ಗುವುದನ್ನು ಕಾಣುವಾಗಲೇ ಅದು ಜಾಗ ಖಾಲಿ ಮಾಡಿಬಿಡುತ್ತದೆ. ಅವನು ಕಲ್ಲನ್ನು ಸುಮ್ಮನೆ ಒಂದು ತೆಂಗಿನ ಮರಕ್ಕೆ ಬೀಸಿದ. ಅಯ್ಯೋ ಅದೂ ತಾಗಿಲ್ಲ. ಕೆಳಗಿನ ಮಾವಿನ ಮರದಲ್ಲಿ ಒಂದು ಗುಬ್ಬಿ ಗೂಡಲ್ಲಿ ಮೂರ್‍ನಾಲ್ಕು ಮೊಟ್ಟೆಗಳಿವೆ. ಅದರಿಂದ ಮರಿ ಹೊರಬಂತಾ ಎಂದು ನೋಡಬೇಕು. ಮುಟ್ಟಿಬಿಟ್ಟರೆ ಗುಬ್ಬಿ ಮತ್ತೆ ಆ ಗೂಡಿಗೆ ಬರುವುದೇ ಇಲ್ಲ. ಮತ್ತೆ ನಾಗಬನದ ಚೆನ್ನೆ ಬೀಜ ಸಂಗ್ರಹ ಮಾಡುವ ಪಾತ್ರೆ ತುಂಬಿಸಬೇಕು. ಈಗ ನಾಲ್ಕು ಸಾವಿರದ ನೂರಾ ಐವತ್ತೆಂಟು ಇವೆ. ತುಂಬಾ ಸಂಗ್ರಹಿಸಿದಾಗ ಹೂವಿನ ತೋಟಕ್ಕೆ ಹರಡಬೇಕು. ಆಗ ನೋಡಲು ತುಂಬಾ ಸುಂದರವಾಗಿರುತ್ತದೆ. ದೂರದಿಂದ ನೋಡಲು ಅದೆಷ್ಟು ಸುಂದರವಾಗಿರುತ್ತದೆ! ಅಮ್ಮ ಹಾಗೆ ಮಾಡಿದ್ದಾಳೆ.

ಅವನಿಗೆ ಸ್ವಂತ ಒಂದು ಬಾಳೆ ಇದೆ. ಮಾಣಿಕ್ಯ ಗುಣಿ ತೆಗೆದುಕೊಟ್ಟ. ಆದರೆ ಬಾಳೆ ನೆಟ್ಟಿದ್ದು ಅವನೆ. ನೇಂದ್ರ ಬಾಳೆ. ಪ್ರತಿದಿನ ಬೆಳಿಗ್ಗೆ ಅದಕ್ಕೆ ಹೊಸ ಎಲೆ ಬಂದಿದೆಯೇ ಎಂದು ನೋಡಬೇಕು. ಅವನೆ ಅದರ ಯಜಮಾನ. ಕಟ್ಟೆರೋಗ ಬರದಿದ್ದರೆ ಸಾಕಿತ್ತು. ಹಾಗೆ ಆಗಿಬಿಟ್ಟರೆ ಕಡಿದು ಹಾಕುವುದಲ್ಲದೆ ಬೇರೇನೂ ದಾರಿ ಇಲ್ಲವೆಂದು ಮಾಣಿಕ್ಯ ಹೇಳಿದ. ಅವನ ಅಪ್ಪ ಓದುವ

ಒಂದು ವರ್ಷದ ಹಿಂದೆ ಒಂದು ದಿನ ಅಪ್ಪ ಮನೆಗೆ ಬಹಳ ಬೇಸರದಿಂದ ಬಂದಿದ್ದ. ಅಪ್ಪನ ಕೆಲಸ ಹೋಗಿತ್ತು. ಅಂದು ಅಪ್ಪ, ಅಮ್ಮ ಗಲ್ಲಕ್ಕೆ ಕೈಕೊಟ್ಟು ಕೂತು ಬಿಟ್ಟಿದ್ದರು. ಯಾವಾಗ ನೋಡಿದರೂ ಸಾಕಾಯಿತು ನಿಲ್ಲಿಸಿ ಹೋಗಿಬಿಡುತ್ತೇನೆ... ಬಿಟ್ಟೇ ಹೋಗಿಬಿಡುತ್ತೇನೆ ಎಂದು ಹೇಳಿಕೊಂಡಿದ್ದ ಅಪ್ಪನಿಗೆ ಕೆಲಸ ಹೋದಾಗ ಅದೆಷ್ಟು ಸಂಕಟ! ರಾತ್ರಿ ಹಸಿವಾದರೂ ಅಮ್ಮ ಕಣ್ಣನಿಗೆ ಏನನ್ನೂ ಕೊಡುವ ಲಕ್ಷಣವಿಲ್ಲ. ಪಕ್ಕದ ಮನೆಯ ರಸಿಯಾ ಆಂಟಿ ಅವನಿಗೆ ಕಪೂಸನ್ನು, ಮೊಟ್ಟೆ ಸಾರನ್ನು ಕೊಟ್ಟಳು. ಅಪ್ಪನ ಹತ್ತಿರ ಇವತ್ತೇನು ಮಾತನಾಡಬೇಡವೆಂದು ರಸಿಯಾ ಆಂಟಿ ಹೇಳಿದರು. ಅಂಕಲ್ ಬಂದು ಅಪ್ಪನನ್ನು ಮಾತನಾಡಿಸುತ್ತಾ ಸಮಾಧಾನಪಡಿಸುತ್ತಿದ್ದರು.

ಕಾಲದಲ್ಲೆ ಬಾಳೆ ಕೃಷಿ ಮಾಡುತ್ತಿದ್ದನಂತೆ. ಅಂದೂ ಕೂಡ ಈ ಮಾಣಿಕ್ಯನೇ ಸಹಾಯಕನಾಗಿದ್ದನೆಂಬುದು ಮಾಣಿಕ್ಯನ ವಾದ.

ಅವನಿಗೆ ಏನೇನು ಕನಸುಗಳಿತ್ತು? ಬರುವ ವರ್ಷ ಅವನು ಏಳನೇ 'ಸಿ' ವಿಭಾಗಕ್ಕೆ ಹೋಗಬೇಕು. ಅಬುದಾಬಿಯಲ್ಲೂ ಬಸ್ಸಲ್ಲೇ ಶಾಲೆಗೆ ಹೋಗುತ್ತಿದ್ದ. ಇಲ್ಲಿ ಹಾಗಲ್ವಂತೆ. ಕೆಲವೊಮ್ಮೆ ಕೂರುವುದಿರಲಿ, ನಿಲ್ಲಲೂ ಸಹ ಜಾಗ ಇರುವುದಿಲ್ವಂತೆ. ಹಿಂದೆ ಮನೆ ಸಿಂಧು ಆಂಟಿ ಹೇಳಿದರು. 'ಆಂಟಿ'ಯೆಂದಲ್ಲ ಅಕ್ಕಾ ಎಂದು ಕರೆಯಬೇಕಂತೆ. ಇದು ಅಜ್ಜನ ಆಜ್ಞೆ. ಬರುವ ವರ್ಷ ಶಾಲಾ ನಾಯಕನನ್ನಾಗಿ ಮಾಡುವುದಾಗಿ ಸುಶೀಲ ಟೀಚರ್ ದೇವಸ್ಥಾನದಲ್ಲಿ ಅಜ್ಜಿಯ ಬಳಿ ಹೇಳುವುದನ್ನು ಅವನೂ ಕೇಳಿಸಿಕೊಂಡಿದ್ದಾನೆ. ನಾಯಕನಾದ ಮೇಲೆ ಬೆಳಿಗ್ಗಿನ ಪ್ರಾರ್ಥನಾ ವೇಳೆಯಲ್ಲಿ ವೇದಿಕೆ ಮೇಲೆ ನಿಂತು ಎಲ್ಲರಿಗೂ "ಇಂಡಿಯಾ ಈಸ್ ಮೈ ಕಂಟ್ರಿ" ಎಂದು ಹೇಳಿಕೊಡಬೇಕು. ಇದರ ಮಧ್ಯೆ ಒಂದು ವೀಸಾ ಬಂದಿದೆ. "ನಾನು ಹೋಗಲ್ಲಾ... ನೋಡ್ಕೊಳ್ಳಿ ಬೇಕಾದರೆ..." ಎಂದು ಹೇಳಿದ್ದು ಸ್ವಲ್ಪ ಜೋರಾಗಿಬಿಡ್ತು.

ಎಲ್ಲಿಗೆ ಹೋಗಲ್ಲಾ ಕಣ್ಣ ಅಣ್ಣಾ ? ಓ ಅಮ್ಮು... ಅಮ್ಮುವಿನ ತಂದೆಯೂ ಅವನ ತಂದೆಯೂ ಸೇರಿ ಚಿಕ್ಕಂದಿನಲ್ಲಿ ಮಾಡದಿರುವ ಚೇಷ್ಟೆಗಳೇನೂ ಇಲ್ಲ ಎಂದು ಅಜ್ಜಿ ಯಾವಾಗಲೂ ಹೇಳುತ್ತಿರುತ್ತಾರೆ. ಇವಳಿಗೇನಾಗಿದೆ ? ಯಾವಾಗಲೂ ನನ್ನ ಹಿಂದೆ ಬರುತ್ತಿರುತ್ತಾಳೆ. "ಪಿಶಾಚಿ" ಬೇಡ, ಹಾಗೆ ಕರೆಯಬಾರದು. ಇವಳಿಂದಲೇ ನಾನು ಶಾಲೆಯಲ್ಲಿ ಹೀರೋ ಆಗಿದ್ದು. ಅವಳ ತರಗತಿಯ ಗಿರೀಶ್ ಅವಳ ಸ್ಲೇಟ್ ಒಡೆದು ಹಾಕಿದ. "ಕಣ್ಣ ಅಣ್ಣಾ..." ಎಂದು ಕರೆಯುತ್ತಾ ನನ್ನ ಹತ್ತಿರಕ್ಕೆ ಓಡಿಬಂದಳು. ಅಲ್ಲದೆ, ಅವಳ ಅಣ್ಣ ಹೆದರುಪುಕ್ಲ ಉಣ್ಣಿ ಅಣ್ಣನ ಹತ್ತಿರ ಅಲ್ಲ. ಅವತ್ತೆ ಅವನ ತರಗತಿ. ವಿದ್ಯಾರ್ಥಿಗಳಿಗೆ ಅವನಿಗೆ 'ಕಣ್ಣ' ಎಂಬ ಹೆಸರಿದೆಯೆಂದು ತಿಳಿದಿದ್ದು. ಅವನ ನಿಜವಾದ ಹೆಸರು ಸಂಜಯ್ ಮೇನೋನ್ ಎಂದಲ್ವಾ ? ಅಜ್ಜಿ 'ಕಣ್ಣ' ಎಂಬ ಹೆಸರಿಟ್ಟರು. ಅಮ್ಮ ಇವನನ್ನು ಸಂಜು ಎಂದೇ ಕರೆಯುವುದು.

ಗಿರೀಶನನ್ನು ಅವನು ಗುದ್ದಿ ಮೂಗು ಚಪಾತಿ ಮಾಡಿದ್ದು ಅಮ್ಮುವನ್ನು ಇಷ್ಟವಿದ್ದೇನೂ ಅಲ್ಲ ಆಯ್ತಾ ? ಅವಳು ಗುಬ್ಬಿ ಗೂಡು ಅವನಿಗೆ ತೋರಿಸಿಕೊಟ್ಟಿದ್ದಳು. ಅದರಿಂದ ಅಷ್ಟೆ. ಮುಖ್ಯೋಪಾಧ್ಯಾಯರು ತೊಡೆಗೆ ಮೂರು ಏಟು ಕೊಟ್ಟಿದ್ದು ಹೋಗಲಿ, ಅವರು ಒಮ್ಮೆ ಅಜ್ಜನನ್ನು ಕಾಣಬೇಕಂತೆ. ಅಜ್ಜನ ವಿಚಾರ ಒಳ್ಳೆಯ ಥ್ರಿಲ್ ಇದೆ. ಅಂದರೆ ಎಲ್ಲರಿಗೂ ಅವರ ಪರಿಚಯವಿದೆ.

"ಎಲ್ಲಿಗೆ ಹೋಗಲ್ಲಾ ಎಂದು ನೀ ಹೇಳಿದ್ದು ಕಣ್ಣ ಅಣ್ಣಾ"? ಅಮ್ಮು ಮತ್ತೆ ಕೇಳಿದಳು. ಅವನಿಗೆ ಸಿಟ್ಟು ಬಂತು.

"ನಿನ್ನ ಗಂಡನ ಮನೆಗೆ." ಅವಳ ಅಜ್ಜಿ ಸಿಟ್ಟು ಬಂದರೆ ಅವಳಿಗೆ ಹಾಗೆ ಹೇಳೋದು. ಪಾಪ ಅಮ್ಮುಗೆ ಬೇಸರವಾಯಿತು. ನಾಚಿಕೆಯೂ ಆಯಿತು. ಬರುವ ವರ್ಷ ೫ನೇ ತರಗತಿ ಎಂದು ಹೇಳುತ್ತಾ ಖುಷಿ ಖುಷಿಯಾಗಿದ್ದಾಳೆ.

ಕೂ...ಕೂ...ಕೂ ಅಣಕಿಸುತ್ತಿರುವುದು ಉಣ್ಣಿ. ಅಮ್ಮುವಿನ ಅಣ್ಣ. ಅವನು ಸಹ ಏಳನೇ ತರಗತಿ. ಆದರೆ ಅವನು ಕಣ್ಣನ ಪಕ್ಕದ ತರಗತಿಯಲ್ಲಿ. ಉಣ್ಣಿ ಪುನಃ ಪುನಃ ಅಮ್ಮುವನ್ನು ಅಣಕಿಸಿದ. ಮೂಗಲ್ಲಿ ಬೆರಳಿಟ್ಟು ಮತ್ತೆ ಮತ್ತೆ ಕೂಗಿದ. ಕೂ...ಕೂ...ಕೂ ಅಮ್ಮುವಿನ ಕಣ್ಣುಗಳು ತುಂಬಿದರೂ ಅದು ಯಾರಿಗೂ ಕಾಣದಿರಲೆಂದು ಆಕಾಶವನ್ನು, ತೆಂಗನ್ನು ನೋಡುತ್ತಾ ಮರೆಮಾಚಲು ಪ್ರಯತ್ನಿಸುತ್ತಿದ್ದಾಳೆ. ಅವಳ ಗಂಡನ ಮನೆ ಎಂದು ಕಣ್ಣ ಹೇಳಿಬಿಟ್ನಲ್ಲಾ...

ಜೊತೆಯಲ್ಲಿ ಉಣ್ಣಿಯ ಅಣಕ ಬೇರೆ. ಅವಳು ತಕ್ಷಣ ಅತ್ತಳು. ಇವತ್ತು ಅಜ್ಜನ ಕೈಯಿಂದ ಒಂದು ಗಿಂಟು ಖಚಿತವಾಗಿದೆ. ಅಜ್ಜ ಹೊಸ್ತಿಲು ತಲುಪುತ್ತಿದ್ದಂತೆಯೇ ಅಮ್ಮು ದೂರು ತಲುಪಿಸುತ್ತಾಳೆ. ಅಜ್ಜ ಗಿಂಟಿದರೆ ಅಲ್ಲಿ 'ಎಸ್' ಎಂಬ ಅಕ್ಷರ ಬರುತ್ತದೆ.

ಅವನಿಗೆ ಸರಿಯಾಗಿ ನೆನಪಿದೆ. ಒಂದು ವರ್ಷದ ಹಿಂದೆ ಒಂದು ದಿನ ಅಪ್ಪ ಮನೆಗೆ ಬಹಳ ಬೇಸರದಿಂದ ಬಂದಿದ್ದ. ಅಪ್ಪನ ಕೆಲಸ ಹೋಗಿತ್ತು. ಅಂದು ಅಪ್ಪ, ಅಮ್ಮ ಗಲ್ಲಕ್ಕೆ ಕೈಕೊಟ್ಟು ಕೂತು ಬಿಟ್ಟಿದ್ದರು. ಯಾವಾಗ ನೋಡಿದರೂ ಸಾಕಾಯಿತು. ನಿಲ್ಲಿಸಿ ಹೋಗಿಬಿಡುತ್ತೇನೆ... ಬಿಟ್ಟೇ ಹೋಗಿಬಿಡುತ್ತೇನೆ ಎಂದು ಹೇಳಿಕೊಂಡಿದ್ದ ಅಪ್ಪನಿಗೆ ಕೆಲಸ ಹೋದಾಗ ಅದೆಷ್ಟು ಸಂಕಟ ! ರಾತ್ರಿ ಹಸಿವಾದರೂ ಅಮ್ಮ ಕಣ್ಣನಿಗೆ ಏನನ್ನೂ ಕೊಡುವ ಲಕ್ಷಣವಿಲ್ಲ. ಪಕ್ಕದ ಮನೆಯ ರಸಿಯಾ ಆಂಟಿ ಅವನಿಗೆ ಕಪೂಸನ್ನು ಮೊಟ್ಟೆ ಸಾರನ್ನು ಕೊಟ್ಟಳು. ಅಪ್ಪನ ಹತ್ತಿರ ಇವತ್ತೇನೂ ಮಾತನಾಡ ಬೇಡವೆಂದು ರಸಿಯಾ ಆಂಟಿ ಹೇಳಿದರು. ಅಂಕಲ್ ಬಂದು ಅಪ್ಪನನ್ನು ಮಾತನಾಡಿಸುತ್ತಾ ಸಮಾಧಾನಪಡಿಸುತ್ತಿದ್ದರು. ಆಂಟಿ, ಅಂಕಲ್‌ಗೆ ಮಕ್ಕಳಿರಲಿಲ್ಲ. ಇದ್ದಿದರೆ ಅವನಿಗೆ ಫ್ಲಾಟಲ್ಲಿ ಆಟ ಆಡಲು ಜೊತೆಯಾಗುತ್ತಿತ್ತು. ಮಜಾ ನಡೆದದ್ದು ಅಂದಲ್ಲ. ಮಾರನೆಯ ದಿನ ಬೆಳಗ್ಗೆ ಶಾಲೆಗೆ ಹೋಗಲು ಬ್ಯಾಗು ತೆರೆದಾಗ. ಅಮ್ಮ ಅದನ್ನು ತೆಗೆದು ಗೋಡೆಗೆ ಬಡಿದಳು. ಇನ್ನು ನೀನು ಎಲ್ಲಿಗೂ ಹೋಗಬಾರದೆಂದು ಹೇಳಿದರು. ಅವನಿಗೆ ಸಿಟ್ಟು ಬಂತು. ಆ ದಿನಗಳಲ್ಲಿ ಅವನಿಗೆ ಸಿಟ್ಟು ಬಂದರೆ ಅಳೋದೊಂದೇ ಕೆಲಸ. ಜೋಸ್ ಅಂಕಲ್, ಬೀನಾ ಆಂಟಿ ಹಾಗೂ ಅಪ್ಪನ ಆಫೀಸಿನ ಇಬ್ಬರು ಅಂಕಲ್‌ಗಳೂ ಅವರು ಹೊರಡುವಾಗ ಏರ್‌ಪೋರ್ಟ್‌ಗೆ ಬಂದಿದ್ದರು. ಅವನಿಗೆ ಅಬುದಾಬಿಯಿಂದ ಬರಲು ತುಂಬ ಸಂಕಟವಾಗಿತ್ತು. ಅವನು ಮೊದಲಿನಿಂದಲೂ ಊರಿಗೆ ಹೆಚ್ಚು ಬಂದಿರಲಿಲ್ಲ. ಅಪ್ಪ, ಅಮ್ಮನಿಗೆ ಒಟ್ಟಿಗೆ ರಜೆ ಸಿಗುವುದೇ ಇಲ್ಲ. ಅವನೊಬ್ಬನನ್ನೇ ಅಜ್ಜ-ಅಜ್ಜಿಯ ಬಳಿ ಇರಿಸಲು ಅಮ್ಮನಿಗೆ ಇಷ್ಟವಿಲ್ಲ. ಅಪ್ಪನಿಗೆ ತುಂಬ ಇಷ್ಟವಿತ್ತು. ಅವನಿಗೂ ಊರಲ್ಲಿ ಇರುವುದು ಇಷ್ಟವಿರಲಿಲ್ಲ. ಅವನ ಮನೆಯಲ್ಲಿ ಭಯಂಕರ ಕತ್ತಲೆ. ಅಬುದಾಬಿಯಲ್ಲಿ ರಾತ್ರಿ ಕೂಡ ಕೋಣೆಯಲ್ಲಿ ರಸ್ತೆಯ ಬೆಳಕು ಇರುತ್ತದೆ. ಮತ್ತೆ ಊರಿನ ಹುಡುಗರಿಗೆ ಸ್ವಲ್ಪ ಜಂಭವಿದೆ. ಏಕೆಂದರೆ ಅವರಿಗೆ ಮರ ಹತ್ತಲು, ಈಜಲು, ಮೀನು ಹಿಡಿಯಲು ಗೊತ್ತು. ಈಗ ಅವೆಲ್ಲವೂ ಅವರಿಗಿಂತ ಚೆನ್ನಾಗಿ ಕಣ್ಣನಿಗೆ ಗೊತ್ತು. ಅವನ ಅಮ್ಮ ತುಂಬ ಒತ್ತಾಯ ಮಾಡಿದ್ದರು ಅಮ್ಮನ ಮನೆಯಲ್ಲೆ ಓದಿದರೆ ಸಾಕೆಂದು. ಅದೃಷ್ಟವಶಾತ್ ಅಪ್ಪ ಒಪ್ಪಲಿಲ್ಲ. ಅಮ್ಮನ ಮನೆಯಲ್ಲಿ ಯಾವ ಮಜವೂ ಇಲ್ಲ.

ಅಪ್ಪ ಮೂರು ತಿಂಗಳಿನಲ್ಲೇ ವಾಪಾಸ್ಸು ಹೋದರು. ಹೋದ ಮೇಲೆ ಕೆಲಸ ಹುಡುಕಬೇಕಂತೆ. ಅಪ್ಪ ಮತ್ತೆ ಹೋಗುತ್ತಿರಲಿಲ್ಲ. ಮನೆಗೆಲಸ ಪೂರ್ತಿ ಆಗಿಲ್ಲ ಎಂದು ಆಗಾಗ್ಗೆ ಹೇಳುತ್ತಿರುತ್ತಿದ್ದರು. ಅದೇ ಜಾಗದಲ್ಲಿ ಮನೆ ಮಾಡಿ ಕಾಂಕ್ರೀಟ್ ಹಾಕಿದಲ್ಲಿಗೆ ಹತ್ತಿ ಅಂಗಳದ ರಾಶಿ ಮಾಡಿದ್ದ ಮರಳಿನ ಮೇಲೆ ಜಿಗಿಯುವುದೇ ಅವನ ಮತ್ತು ಉಣ್ಣಿಯ ಮಾಮೂಲಿ ಕೆಲಸ. ಅಪ್ಪ ಹೋಗಿದ್ದು ಅವನಿಗೆ ಸ್ವಲ್ಪ ಕಿರಿಕಿರಿಯೇ. ಅಮ್ಮನ ನಿಯಮಗಳಿಗೆ ಕಿವಿಗೊಡಬೇಕು. ಬೆಳಗ್ಗಿನಿಂದ ನಡೆದಿರುವ ಎಲ್ಲ ವಿಚಾರಗಳು ಮನೆಗೆ ತಲುಪುವ ಮೊದಲೇ ಅಮ್ಮನಿಗೆ ಗೊತ್ತಾಗಿರುತ್ತದೆ. "ಮತ್ತೆ ನೀನೇಕೆ ಅವನನ್ನು ಕೆಣಕಲು ಹೋದೆ ? ನೀನು ನಿನ್ನ ಕೆಲಸ ನೋಡಿದರೆ ಮಂಡಿ ಗಾಯವಾಗುತ್ತಿತ್ತಾ ? ಅಪ್ಪ ಇದ್ದಿದ್ದರೆ "ಸಾಕು... ಸಾಕು... ನಾನು ಇದಕ್ಕಿಂತ ಚೇಷ್ಟೆಗಳನ್ನು ಮಾಡಿಯೇ ದೊಡ್ಡವನಾದೆ. ಆದರೂ ನೀ ನನ್ನ ಮದುವೆಯಾಗಿಲ್ವಾ" ಎಂದು ಹೇಳುತ್ತಲೇ ಇರುತ್ತಿದ್ದರು. ಅಪ್ಪ ಮಧ್ಯೆ ಬಾಯಿ ಹಾಕಿದರೆ ಅಮ್ಮ ನಿಲ್ಲಿಸಿಬಿಡುತ್ತಾರೆ. ಮತ್ತೊಂದು ಮಾಮೂಲಿ ಮಾತಿದೆ. "ನನ್ನ ಗತಿ ಹೀಗಾಯ್ತು... ಒಲೆ ಊದಿ ಊದಿ ಹೊಗೆಯಲ್ಲಿ ನನ್ನ ಜನ್ಮ ಸವೆಯುತ್ತಿದೆ." 'ಓ... ಅಮ್ಮನ ಮನೆಯಲ್ಲಿ ಗ್ಯಾಸ್ ಒಲೆಯಿದೆ ಅದರ ಜಂಭವಿದೆಂದು ಮತ್ತೆ ನನಗೆ ಹೊಳೆಯಿತು.' ನನ್ನ ವಿಚಾರಗಳನ್ನೆಲ್ಲಾ ಅಮ್ಮು ಬಂದು ಹೇಳುವುದಕ್ಕೆ ಅಪ್ಪ ಅವಳಿಗೆ 'ಚಾಡಿಕೋರಿ' ಎಂಬ ಅಡ್ಡ ಹೆಸರಿಟ್ಟಿದ್ದಾರೆ.

ಅವನನ್ನು ಶಾಲೆಗೆ ಆಟೋರಿಕ್ಷಾದಲ್ಲಿ ಕಳುಹಿಸುತ್ತಿದ್ದರು. ಅಮ್ಮು, ಉಣ್ಣಿ ಹಾಗೂ ಉಳಿದ ಎಲ್ಲಾ ಮಕ್ಕಳು ನಡೆದೇ ಹೋಗುತ್ತಾರೆ. ಅವನು ಮಾತ್ರ ೧ನೇ ತರಗತಿಯ ಮಕ್ಕಳ ಜೊತೆ ಆಟೋದಲ್ಲಿ ಹೋಗಬೇಕು. ಅದು ಅವನಿಗೆ ಕೀಳರಿಮೆ. ಅಮ್ಮನಿಗೆ ಹೇಳಿ ಪ್ರಯೋಜನ ಇಲ್ಲ. ಸುಮ್ಮನಾದ್ರು ಒಂದು ಗಿಂಟು ಸಿಗುತ್ತದಷ್ಟೆ. ಅವನ ಅದೃಷ್ಟಕ್ಕೆ ಅಪ್ಪನಿಗೆ ಬೇರೆ ಒಳ್ಳೆ ಉದ್ಯೋಗ ಸಿಕ್ತು. ಅಮ್ಮನನ್ನು ಕರೆದುಕೊಂಡುಹೋದರು. ಅಮ್ಮ ಹೋಗುವಾಗ ತಾಕೀತುಗಳು ಸುಮಾರಿದ್ದವು. ಹಾಗಿರಬೇಡ, ಹೀಗಿರಬೇಡ. "ಇಲ್ಲ" ಮಾಡಲ್ಲ. ಅಜ್ಜಿ ಹೇಳಿದ್ದನ್ನೆಲ್ಲಾ ಕೇಳಬೇಕು. ಹೇಳಿದ್ದಕ್ಕೆಲ್ಲಾ 'ಎಸ್' ಎಂದ ಪಾಪ ! ಕಾರು ಹತ್ತುವ ಸಮಯಕ್ಕೆ ಅವನಿಗೆ ಮುತ್ತುಕೊಟ್ಟಾಗ ಅಮ್ಮ ಅತ್ತುಬಿಟ್ಟರು. ಅವನು ಅಳಲಿಲ್ಲ.




## ನೋಟು

ಬಣ್ಣದಲ್ಲೇನೋ
ಬದಲಾವಣೆಯಾಯಿತು
ಬಾಳು-ಬವಣೆಯಲ್ಲೇ
ಬೆವರು ನುಂಗಿತು

ವ. ಉಮೇಶ ಕಾರಂತ
ಮಂಗಳೂರು - ೫೭೫ ೦೦೧

ಆದರೆ ಅವಳಿದ್ದಾಳಲ್ಲಾ... ಆ ಸುಳ್ಳುಪುರ್ಕಿ ಅಮ್ಮು... ಅವನೂ ಅಳುತ್ತಿದ್ದ' ಎಂದು ಊರಿಡೀ ಸಾರಿದಳು. ಅಮ್ಮಾ ಹೋದಮೇಲಲ್ವಾ ಮಜಾ ? ಅಜ್ಜಿ ಅವನನ್ನು ಬೈಯ್ಯುವುದೇ ಇಲ್ಲ. ಓದಲು ಹೇಳುವುದಿಲ್ಲ. ಅಜ್ಜ ಬಂದಾಗ ಅಮ್ಮನ ಹಾಗೆ ಚಾಡಿ ಹೇಳುವುದಿಲ್ಲ. ಒಮ್ಮೊಮ್ಮೆ ಅವನು ಆಟೋ ಹತ್ತದೆ ನಡೆದೇ ಹೋಗುತ್ತಾನೆ. ನಡೆದುಕೊಂಡು ಹೋಗುವುದರಲ್ಲೂ ಒಂದು ಮಜಾ ಇದೆ ಗೊತ್ತಾ ? ಕಾಲಿನಿಂದ ನೀರಿನಲ್ಲಿ ಪಟಾಕಿ ಹೊಡೆಯಲು ಉಣ್ಣಿ ಕಲಿಸಿಕೊಟ್ಟ. ಆದರೆ ಟ್ಯೂಷನ್ ಮಾಡುವ ಸಿಂಧು ಆಂಟಿಯ ಜೊತೆಯಲ್ಲಿ ಮಾತ್ರ ಯಾವ ಆಟವೂ ನಡೆಯುವುದಿಲ್ಲ. ಸಂಜೆಯಾದರೆ ಕೂರಿಸಿ ಓದಿಸುತ್ತಾರೆ. ಅಮ್ಮನ ಸ್ಪೆಷಲ್ ಆರ್ಡರ್ ಇತ್ತೆಂದು ಮತ್ತೆ ಅರ್ಥವಾಯಿತು. ಮೊದಲನೇ ಸೆಮಿಸ್ಟರ್ ಪರೀಕ್ಷೆ ಮುಗಿದಾಗ ಆಶ್ಚರ್ಯ ಕಾದಿತ್ತು. ಕಣ್ಣ ತರಗತಿಯಲ್ಲಿ ಮೊದಲಿಗನಾಗಿದ್ದ. ಅಬುದಾಬಿಯ ಶಿಕ್ಷಕರು ಸರಿಯಿಲ್ಲ. ಅವರು ಇವನಿಗೆ 'ಬಿ' ಗ್ರೇಡ್ ಮಾತ್ರ ಕೊಡುತ್ತಾರೆ. ಈಗ ಅಮ್ಮ ಅಪ್ಪನಿಗೆ ಎಷ್ಟೊಂದು ಸಂತೋಷವಾಯಿತು ಗೊತ್ತಾ ? ಅವನಿಗೆ ಇಷ್ಟವಾಗಿದ್ದು, ಇದ್ಯಾವುದು ಅಲ್ಲ. ಅಡಿಕೆ ಕುಯ್ಯಲು ಪುರುಷೋತ್ತಮ ಬರುತ್ತಾರೆ. ಯಾರೂ ಹೋಗಿ ಕರೆಯುವುದೇನು ಬೇಡ. ಸರಿಯಾದ ಸಮಯ ನೋಡಿ ಅವರೇ ಬರುತ್ತಾರೆ. ಒಂದು ಅಡಿಕೆಮರಕ್ಕೆ ಹತ್ತಿ ಓಲಾಡುತ್ತಾ ಬೇರೊಂದಕ್ಕೆ ಜಿಗಿದು ಹಿಡಿಯುತ್ತಾರೆ. ಅದನ್ನು ನೋಡುವಾಗ ಕಣ್ಣನ ಮೈ ಜುಮ್ ಎನ್ನುತ್ತದೆ. ಅಂದು ಅಜ್ಜ ಇಲ್ಲದಿರುವುದೇ ಒಳ್ಳೆಯದಾಯಿತು. ಪುರುಷೋತ್ತಮ ಅವನನ್ನು ಕರೆದುಕೊಂಡು ಅಡಿಕೆ ಮಾರಲು ಹೋಗುತ್ತಾನೆ. ಅಡಿಕೆ ಮಾರುವಲ್ಲಿನ ಕೊಂಬು ಮೀಸೆಯವ 'ಇದು ಯಾರು ಪುರುಷು' ಎಂದು ಕೇಳಿದಾಗ ಹೇಳಿದ್ದೇನು ಗೊತ್ತಾ ? ಇದು ನಮ್ಮ 'ಕಣ್ಣ ಸಾವುಕಾರ' ಎಂದು. ಅವನಿಗಾಗ ತುಂಬ ಜಂಭ ಬಂತು. ಪುರುಷು ಯಾರಿಗೂ ಹೇಳಬಾರದೆಂದು ಹೇಳಿ ಗೂಡು ಅಂಗಡಿಯಿಂದ ಅವನಿಗೆ ಕಡ್ಡಿ ಚಿಪ್ಸ್ ತೆಗೆದುಕೊಟ್ಟ. ಅಜ್ಜನಿಗೆ ಗೊತ್ತಾದರೆ ಏಟು ಸಿಗುತ್ತೆ ಎಂದು ಅವನು ಯಾರಿಗೂ ಹೇಳಿಲ್ಲ. ಇವೇನೂ ಅಬುದಾಬಿಯಲ್ಲಿ ಸಿಗಲ್ಲ. ಅದಕ್ಕೆ ಅವನಿಗೆ ಅಲ್ಲಿಗೆ ಹೋಗಲೂ ಇಷ್ಟವಿಲ್ಲ. ಅಲ್ಲಿ ಏನೂ ಖುಷಿ ಇಲ್ಲ. ರಸಿಯಾ ಆಂಟಿಯ ಮನೆಗೆ ಹೋಗಲು ಕೂಡ ಅಮ್ಮ ಒಪ್ಪಲ್ಲ. ಅವರಿಗೆ ತೊಂದರೆಯಾಗುತ್ತದೆ ಎಂದು. ಹಾಗೇನೂ ಇಲ್ಲ. ಮಾತನಾಡಿಕೊಂಡಿರಲು ಆಂಟಿಗೆ ತುಂಬ ಇಷ್ಟ. ಬಾಲ್ಕನಿಗೆ ಹೋಗಿ ಕೆಳಗೆ ನೋಡಲೂ ಬಿಡುವುದಿಲ್ಲ. ಬಿದ್ದುಬಿಡುವ ಭಯ ಅಮ್ಮನಿಗೆ. ಅವನ ಕೋಣೆಯ ಗೋಡೆಯ ಕಲೆಗಳು ಅವನಿಗೆ ಬಾಯಿಪಾಠ. ಮಂಚ ಹತ್ತಿ ಮಲಗಿ ಮೇಲೆ ನೋಡಿದರೆ ಆ ಕಲೆಗಳಿಗೆಲ್ಲಾ ಒಂದೊಂದು ಬಣ್ಣ ತುಂಬುತ್ತದೆ. ಒಂದು ನಿಜವಾಗಿಯೂ ಮೇಕೆ ಮತ್ತೆ ಇಬ್ಬರು ಮನುಷ್ಯರು. ಅವರಿಗೆ ಕಾಲಿಲ್ಲ. ಮತ್ತೆಯೂ ಸುಮಾರು ಆಕಾರವಿಲ್ಲದ ಕಲೆಗಳು. ಅವನಿಗೊಂದು ಪುಟ್ಟ ಮಂಚವಿದೆ. ಅಪ್ಪ ಅಮ್ಮನ ಮಂಚ ದೊಡ್ಡದು. ಮತ್ತೆ ಅವನ ಕೋಣೆಯಲ್ಲಿ ಸ್ವಲ್ಪವೂ ಜಾಗವಿಲ್ಲ. ಅಲ್ಲಿ ಶಾಲೆ ಬಿಡುವುದು ನಾಲ್ಕು ಗಂಟೆಗೇನೂ ಅಲ್ಲ. ಎರಡು ಗಂಟೆಗೆ. ಅವನ ಕೈಯಲ್ಲೂ ಫ್ಲಾಟಿನ ಕೀ ಇರುತ್ತದೆ. ರಸಿಯಾ ಆಂಟಿ ಅವನಿಗೆ ಊಟ ಬಡಿಸಿಕೊಡುತ್ತಾರೆ. ಕೆಲವೊಮ್ಮೆ ಪಾಪ ನಿದ್ದೆ ಹೋಗಿರುತ್ತಾರೆ. ಈ ರಸಿಯಾ ಆಂಟಿಯ ಹವ್ಯಾಸ ಏನು ಗೊತ್ತಾ ? ನಿದ್ದೆಯಂತೆ. ಅಂಕಲ್ ಹೇಳಿದ್ದು ನನಗೆ. ನನ್ನ ಅಮ್ಮ ತುಂಬ ಸೋಮಾರಿ. ಸಾರು ಮಾಡಿದರೆ ಮೂರು ದಿನ ಅದನ್ನೇ ಬಿಸಿ ಮಾಡಬೇಕು. ಅವನಿಗೆ ಬಿಸಿಮಾಡಿ ತಿನ್ನುವುದೇ ಇಷ್ಟವಿಲ್ಲ. ಅಮ್ಮನೇ ಬಿಸಿ ಮಾಡಿಕೊಟ್ಟರೆ ಅಡ್ಡಿಯಿಲ್ಲ. ಅಮ್ಮ ಬರಲು ಐದು ಗಂಟೆ ಆಗುತ್ತದೆ. ಇಲ್ಲಿಯಾದರೆ ಬಂದು ಕುಳಿತರೆ ಸಾಕು. ಅಜ್ಜಿ ಬಡಿಸಿಕೊಡುತ್ತಾರೆ. ಅವನು ಪಾತ್ರೆ ತೊಳೆಯೋದೇನು ಬೇಡ. ಅಜ್ಜಿ ಏನೆಲ್ಲಾ ಅಡುಗೆ ಮಾಡುತ್ತಾರೆ ಗೊತ್ತಾ ? ಹುಳಿ, ಈರುಳ್ಳಿ ಚಟ್ನಿ, ಗೊಜ್ಜು, ಬದನೆಕಾಯಿ ಒಲೆಯಲ್ಲಿ ಸುಟ್ಟ ಚಟ್ನಿ, ಮೊನ್ನೆಯೊಮ್ಮೆ ಬಾಳೆ ಹೂವನ್ನು ಅವನೇ ಕೊಕ್ಕೆಯಿಂದ ಕುಯ್ದುಕೊಟ್ಟ. ಏನು ರುಚಿಯಿತ್ತು ಅದರ ಪಲ್ಯ. ಅಮ್ಮ ಅಲ್ಲಿ ಯಾವತ್ತೂ ಮಾಡುವುದೊಂದೆ ಚಿಕನ್. ತಿಂದೂ ತಿಂದೂ ಅವನಿಗೂ ಅಪ್ಪನಿಗೂ ಬಿಡ್ದುಹೋಯಿತು. ಸಾರು ಮಾಡುವುದೆಲ್ಲಾ ತುಂಬ ಕಷ್ಟವಾಗುತ್ತದೆಂದು ಅಮ್ಮ ಹೇಳುತ್ತಾರೆ. ಹಾಗಾದರೆ ನೀ ಕೆಲಸಕ್ಕೆ ಹೋಗಬೇಡ ಎಂದು ಹೇಳಿದರೆ ಸಾಕು... ಅಮ್ಮ ಮೆಲ್ಲನೆ ಮಸ್ಕಾ ಹೊಡೀತಾಳೆ. ಅಪ್ಪನಿಗೆ ಸಿಟ್ಟು ಬಂದರೆ ಮಾತ್ರ ಹೇಳಿದಂತೆಯೆ. ಆದರೆ ಬೋರ್ ಆಗಿ ಸತ್ತುಬಿಡುತ್ತೇನೆಂದು ಅಮ್ಮನ ವಾದ. ಅದನ್ನು ಕೇಳಿಸಿಕೊಂಡ ರಸಿಯಾ ಆಂಟಿಯ ಮುಖ ಚಿಕ್ಕದಾಗುತ್ತದೆ.

ಅಜ್ಜಿ ಬಾಳೆ ದಿಂಡನ್ನು ಬಿಡಿಸಿ ಕೊಟ್ಟರೆ ಪಲ್ಯ ಮಾಡಿಕೊಡುತ್ತೇನೆಂದು ಹೇಳಿದ್ದಾರೆ. ಬೇರೆ ಒಂದು ಸಂಗತಿ ಕೇಳಬೇಕೆ ? ಈ ಅಜ್ಜಿ ಎಲ್ಲಾ ತರಕಾರಿ ಸಿಪ್ಪೆಗಳನ್ನು ಒಣಗಿಸಿ ಚಿಪ್ಸ್ ಮಾಡಿಕೊಡುತ್ತಾರೆ. ಅದು ಒಣಗಲು ಬಿಸಿಲಿಗಿಡುವಾಗಲೇ ತೆಗೆದು ತಿನ್ನಲು ರುಚಿಯಾಗಿರುತ್ತದೆ.

"ಅಜ್ಜಾ, ನಾನು ಎಲ್ಲಿಗೂ ಹೋಗಲಾರೆ ನಾನು ಇಲ್ಲೆ ಓದುವೆ..."

ನಿನ್ನ ಅಪ್ಪ ಹೇಳುವಲ್ಲೇ ನೀನು ಓದಬೇಕಲ್ಲವೇ ? ಒಳ್ಳೆಯ ಮಕ್ಕಳು ಅಪ್ಪ ಹೇಳಿದ್ದನ್ನು ಅನುಸರಿಸಬೇಕು. ಅರ್ಥವಾಗುತ್ತಿದೆಯೇ ನಿನಗೆ ?

ಆಗ "ಅಜ್ಜಾ, ಅಪ್ಪ ನಿಮ್ಮ ಮಗ ಅಲ್ವಾ. ನೀವು ಹೇಳಿದರೆ ಅಪ್ಪ ಕೇಳಲ್ವಾ ?" ಅವನ ನ್ಯಾಯದ ಮರುಪ್ರಶ್ನೆಗೆ ಅಜ್ಜನಿಗೆ ಉತ್ತರ ಸಿಗುತ್ತಿಲ್ಲ. ಅಜ್ಜಿ ಅವನ ಪಕ್ಷ ಸೇರಿದಳು.

"ಅವರು ಫೋನ್ ಮಾಡುವಾಗ ನೀವೊಮ್ಮೆ ಸರಿಯಾಗಿ ಹೇಳಿ ಮನುಷ್ಯಾ. ನನ್ನ ಕಂದನನ್ನು ನಾನೇ ನೋಡಿಕೊಳ್ಳುವೆ."

"ಸ್ವಲ್ಪ ಸುಮ್ಮನಿರು ಮುದುಕಿ. ಅವರಿಗೆ ಇವನನ್ನು ಇಲ್ಲಿ ಬಿಟ್ಟರೆ ಸಮಾಧಾನ ಇರುತ್ತದಾ ? ಎಲ್ಲರಿಗೂ ಸ್ವಂತ ಮಕ್ಕಳು ಎದುರೇ ಇರಬೇಕೆಂಬ ಆಸೆ ಇರುತ್ತದೆ. ನಿನಗೆ ಅದರ ಸಂಕಟ ತಿಳಿಯಲ್ಲ. ನಿನಗೆ ಲೋಕವಿವರ ಇದೆಯೇ, ಕತ್ತೆ." ಲೋಕದ ಅತಿ ದೊಡ್ಡ ಹಾಸ್ಯ ಈಗ ಹೇಳಿದೆನೆಂಬಂತೆ ಅಜ್ಜನ ಹ ಹ ಹ ಎಂಬ ನಗು. ಅವನಿಗೆ ನಗು ಬರಲಿಲ್ಲ. ಅವನನ್ನು ಅಜ್ಜ ಸಮಾಧಾನಪಡಿಸಿದ,

"ನಾನೊಮ್ಮೆ ಹೇಳಿ ನೋಡುತ್ತೇನೆ ಕಣ್ಣಾ." 'ಅಜ್ಜ ಒಂದು ವಿಚಾರವನ್ನು ಕೈಗೆತ್ತಿಕೊಂಡರೆ ಅದನ್ನು ಈಡೇರಿಸುತ್ತಾರೆ' ಎಂಬುದಾಗಿ ಎಲ್ಲಾ ಹೇಳುತ್ತಾರೆ. ಅವನಿಗೆ ಸಮಾಧಾನವಾಯಿತು.

ಇದರ ಲಕ್ಷಣ ಅಷ್ಟು ಸರಿಯಲ್ಲ ಕಣ್ಣ ಪಾಪೂ. ಮಾಣಿಕ್ಯ ಅವನ ಬಾಳೆಯಲ್ಲಿ ಹೊಸದಾಗಿ ಬಂದ ಚಿಗುರು ಪರಿಶೀಲಿಸುತ್ತಿದ್ದಾನೆ. ಮಾಣಿಕ್ಯ ಅವನನ್ನು 'ಕಣ್ಣ ಪಾಪು' ಎಂದು ಕರೆಯುತ್ತಾನೆ. ಅವನೂ ನೋಡಿದ. "ಹೊಸ ಚಿಗುರಿಗೆ ಪವರ್ ಸಾಲದು ಮುಂದೆ ನೋಡೋಣ. ಚಿಗುರು ಮದುಡಿದರೆ ಕಡಿದ್ಹಾಕಬೇಕಾಗುತ್ತದೆ. ಅಮ್ಮ ಕರೆ ಮಾಡಿದಾಗ ಅವನನ್ನು ತುಂಬ ಬೈದರು. "ನೀನು ಅಲ್ಲೇ ಇರುತ್ತೇನೆಂದು ಅಜ್ಜನಿಗೆ ಹೇಳಿದ್ಯಾ" ಎಂದು ಅಮ್ಮನಿಗೆ ತಿಳಿಯಬೇಕಿತ್ತು.

"ನಾನು ಇಲ್ಲೆ ಇರುತ್ತೇನೆ ಅಮ್ಮಾ... ನಾನು ಚೆನ್ನಾಗಿ ಓದುತ್ತಿದ್ದೇನೆ. ನಾನು ಫಸ್ಟ್ ಬಂದಿದ್ದೇನಲ್ಲಾ...?"

"ಅಲ್ಲಿದ್ದುಕೊಂಡು ಕೆಟ್ಟ ಚಟಗಳನ್ನೆಲ್ಲಾ ಕಲೀಬೇಕಾ ? ಮರ್ಯಾದೆಯಿಂದ ನಾನು ಹೇಳಿದ್ದನ್ನು ಕೇಳಿದರೆ ಸಾಕು."

'ಆಗ ಅಪ್ಪಾ ಇಲ್ಲೇ ಓದಿದ್ದಲ್ವಾ ? ಅಪ್ಪನ ಗುಣಸ್ವಭಾವವೂ ಕೆಟ್ಟದ್ದೇ?' ಕೇಳಲಿಲ್ಲ. ಕೇಳಿದರೆ ಅಷ್ಟೇ ಸಾಕು.

ಅವನ ಕಣ್ಣಲ್ಲಿ ನೀರೂರಿತು. ಮುಂದಿನ ತಿಂಗಳು ಅವನು ಏಳನೇ ತರಗತಿಗೆ. ಅವನ ಶಾಲೆಯಲ್ಲಿ ಏಳನೇ ತರಗತಿಯಲ್ಲಿರುವವರೆ ದೊಡ್ಡವರು. ೬ನೇ ತರಗತಿಯಲ್ಲಿದ್ದಾಗಲೇ ಎಲ್ಲರಿಗೂ ಅವನನ್ನು ಕಂಡರೆ ಭಯವಿತ್ತು. ಏಳರಲ್ಲಿರುವ ದೊಡ್ಡ ಮಕ್ಕಳು ಫೇಲಾಗದಿದ್ದರೆ ಮಾತ್ರ ಅವನೇ ಮುಂದಿನ ವರ್ಷದ ಹೀರೊ. ಆದರೆ, ಆ ಶಶಿ ಏನಾದ್ರೂ ಪಾಸಾಗುವುದಿಲ್ಲವಂತೆ. ಹಾಗಾದರೆ ಹೋಯಿತು. ಅಜ್ಜಿ ಹತ್ತಿರ ಬಂದು ಅವನ ಕೂದಲಲ್ಲಿ ಕೈಯಾಡಿಸಿದಳು. ಅವನನ್ನು ಸಂತೈಸಲು ಎಂದು ಅವನಿಗೆ ಗೊತ್ತಾಯಿತು. ಮತ್ತೆ ಅಮ್ಮುವಿನ ತಂದೆಗೆ ಹೇಳಿದರು. "ಅವನು ಇಲ್ಲಿದ್ದರೆ ಸಾಕು ಪಾಪ. ಅಲ್ಲಿ ಆಟವಾಡಲು ಜೊತೆಗೆ ಯಾರೂ ಇಲ್ವಂತೆ."

ಮತ್ತೆ ಅವನಿಗೆ ತಡೆಯಲಾಗಲಿಲ್ಲ. ಅಮ್ಮು ಅಲ್ಲಿರುವುದನ್ನು ಮರೆತು ಅವನು ಜೋರಾಗಿ ಅತ್ತ. ಅಜ್ಜಿಯನ್ನು ತಬ್ಬಿಕೊಳ್ಳುತ್ತಾ "ನಾನು ಹೋಗಲ್ಲಾ ಅಜ್ಜಿ ಹೋಗಲ್ಲಾ..." ಅಜ್ಜಿ ಜೋರಾಗಿ ದೇವರನ್ನು ಸ್ತುತಿಸಿದರು. ಪಾಪ ಅಮ್ಮು, ಅವಳಿಗೂ ಸಂಕಟ ಬಂತು.

"ವಿಲಾಸಿನೀ... ಇನ್ನು ಸುಳ್ಳು ಹೇಳಬಾರದು." ವಿಲಾಸಿನಿ ಕಾರಣವರಿಗೆ ಎಣ್ಣೆ ಹರಕೆ ಹಾಕಲು ಹೇಳಿದ್ದಳು. ಅವರಿಗೆ ಎಣ್ಣೆ ಬೇಡ. ಅವನ ವೀಸಾ ತಗೊಂಡು ಜೋಸ್ ಅಂಕಲ್ ಬಂದರು. ಎರಡು ವಾರ ಬಿಟ್ಟು ಅವನೂ ಜೋಸ್ ಅಂಕಲ್ ಜೊತೆ ಹೋಗುತ್ತಾನೆ."

"ನನ್ನ ಕಣ್ಣಾ... ಕಾರಣವರು ನಿನಗೆ ಒಳ್ಳೆಯದನ್ನೇ ಬಯಸುತ್ತಾರೆ. ಅಲ್ಲಿ ಒಳ್ಳೆ ಶಾಲೆಯಲ್ಲಿ ಒಳ್ಳೆ ಮಕ್ಕಳ ಜೊತೆ ಕುಳಿತು ಓದಬಹುದಲ್ಲಾ. ಅಲ್ಲಿ ಶಾಲೆಗಳೆಲ್ಲವೂ ತಾರಸಿ ಕಟ್ಟಡಗಳೆಂದು ತಿಳಿದಾಗ ಪ್ರಾರಂಭವಾಗಿದ್ದು ವಿಲಾಸಿನಿಗೆ. ಇಲ್ಲಿ ಎಲ್ಲಾ ಹೆಂಚು ಹಾಕಿದ ಡಬ್ಬ ಶಾಲೆಗಳು." 'ವಿಲಾಸಿನಿಗೆ ಬುದ್ಧಿಯೇ ಇಲ್ಲ. ಅಲ್ಲಿ ಒಳ್ಳೇ ಸ್ಕೂಲಂತೆ ! ಒಳ್ಳೆಯ ಮಕ್ಕಳಂತೆ ! ಅಲ್ಲಿ ಶಾಲೆಯಲ್ಲಿ ಬಿಸಿಯೂಟ ಸಿಗುವುದಿಲ್ಲ ಎಂಬ

ಕೊರತೆ ಮಾತ್ರವಾಗಿತ್ತು ವಿಲಾಸಿನಿಗೆ.' ಅವರು ಓದುವ ಕಾಲದಲ್ಲಿ ಶಾಲೆಯಲ್ಲಿ ಊಟ ಇರಲಿಲ್ಲಂತೆ. ಇದ್ದಿದ್ದರೆ ಹತ್ತನೇ ತರಗತಿಯವರೆಗೆ ಓದುತ್ತಿದ್ದೆ ಎಂದವರು ಹೇಳುತ್ತಿದ್ದಾರೆ.

ಜೋಸ್ ಅಂಕಲ್ ಬಳಿಯೂ ಅವನು ಗೋಗರೆದ. ಅಮ್ಮನಿಗಲ್ಲಿ ಯಾವ ಸಮಾಧಾನವೂ ಇಲ್ವಂತೆ. ಪ್ರತಿದಿನ ಅವನನ್ನು ನೆನೆಸಿಕೊಂಡು ಅಳುತ್ತಾರಂತೆ – ಜೋಸ್ ಅಂಕಲ್ ಸುಳ್ಳು ಹೇಳುತ್ತಿದ್ದಾರೆ. ಅವನಿಗೆ ಗೊತ್ತು. ಅಪ್ಪ ಫೋನ್ ಮಾಡಿ ಆಗ ಹೇಳಿದಾಗಲೂ ಅಲ್ಲಿಗೆ ಬಂದು ಎರಡು ದಿನದ ಬಳಿಕ ಬೇಸರವೆಲ್ಲಾ ದೂರವಾಗುತ್ತದೆ ಎಂದು ಹೇಳಿದರು. ಯಾರ ಬಳಿ ಗೋಗರೆದರೂ ಏನೂ ಪ್ರಯೋಜನವಾಗಲಿಲ್ಲ. ಅವನ ಎಲ್ಲ ಉತ್ಸಾಹವೂ ಕುಂದಿಹೋಗಿತ್ತು.

ಪುಟ್ಟ ಗುಬ್ಬಿ ಮರಿಗಳೆಲ್ಲಾ ಹಾರಿಹೋಗಿದ್ದವು. ಅವನ ಬಾಳೆಯ ಚಿಗುರು ಬಿಳುಚಿ ಮುದುರಿತ್ತು. ಇನ್ನು ಆ ಬಾಳೆಯಿಂದ ಏನೂ ಪ್ರಯೋಜನವಿಲ್ವಂತೆ. ಕಡಿದುಹಾಕ ಬೇಕೆಂಬುದು ಮಾಣಿಕ್ಯನ ಉಪದೇಶ. ಹೋಗುವ ಹಿಂದಿನ ದಿನ ಅವನೂ, ಅಜ್ಜನೂ ಹೋಗಿ ವರ್ಗಾವಣಾ ಪತ್ರ ಪಡೆದರು. ಅಂದು ಸಂಜೆ ಅವನು ಕತ್ತಿ ತೆಗೆದುಕೊಂಡು ಅವನ ಬಾಳೆಯ ಬಳಿ ಬಂದ. ಮತ್ತೆ ಅದನ್ನು ಹಿಗ್ಗಾಮುಗ್ಗಾ ಕಡಿದುಹಾಕಿದ. ಕೊನೆಗೆ ಅಜ್ಜಿ ಬಂದು ಅವನನ್ನು ತಡೆಯುವ ತನಕವೂ ಕಡಿಯುತ್ತಲೇ ಇದ್ದ.

ಸಂಜೆ ಕತ್ತಲೆಗೆ ಉರುಳುತ್ತಿತ್ತು. ಸಂಜೆಯಾದರೆ ನಾಗಬನವನ್ನು ನೋಡಲು ಕೂಡ ಹೆದರುತ್ತಿದ್ದ ಅವನು ಯಾವುದೇ ಭಯವಿಲ್ಲದೆ ಚೆನ್ನೆ ಬೀಜ ಸಂಗ್ರಹಿಸಿಟ್ಟಿದ್ದ ಪಾತ್ರೆಯನ್ನು ತೆಗೆದುಕೊಂಡ. ಅವನು ಬೇಲಿ ದಾಟಿ ಅಮ್ಮುವಿನ ಮನೆಗೆ ನಡೆದ. ಅವನಿಗೆ ಕಾಣದಂತೆ ಅವನ ಪಾತ್ರೆಯಿಂದ ಚೆನ್ನೆ ಬೀಜವನ್ನು ಕದಿಯುತ್ತಿದ್ದ ಹುಡುಗಿಯವಳು. ಒಂದು ದಿನ ಸಿಕ್ಕಿಬಿದ್ದು, ಅವಳಿಗೆ ಎರಡು ಏಟನ್ನು ಗುದ್ದಿದ್ದ.

"ಬಾ ಕಣ್ಣಾ... ನಾಳೆ ಬೆಳಗ್ಗೆ ಐದು ಗಂಟೆಗೆ ಹೊರಡಬೇಕು ಅಲ್ವಾ?" ಅಮ್ಮುವಿನ ಅಜ್ಜಿ.

ಅವನು ಅದನ್ನು ಗಮನಿಸಲೇ ಇಲ್ಲ. ಅವನು ಜೋರಾಗಿ ಅಮ್ಮುವನ್ನು ಕರೆದ.

ಅವಳು ಓಡಿ ಹೊರಗಡೆ ಬಂದಳು. ಕಣ್ಣ ಅವಳ ಹೂದೋಟದೊಳಗೆ ಚೆನ್ನೆ ಬೀಜವನ್ನೆಲ್ಲಾ ಸುರಿದ. ಪಾತ್ರೆ ಕೆಳಗಿಟ್ಟು ಯಾರೊಡನೆಯೂ ಒಂದು ಮಾತೂ ಆಡದೆ ಅಲ್ಲಿಂದ ವಾಪಸ್ಸು ಮನೆಗೆ ಮರಳಿದ.

ನಾಳೆ ಅವನು ಹೋಗಬೇಕು. ಅಮ್ಮ, ಉಣ್ಣಿ ಅವರ ಅಪ್ಪ, ಅಮ್ಮ, ಅಜ್ಜಿ ಎಲ್ಲರೂ ಬಂದಿದ್ದಾರೆ. ಎಲ್ಲರೂ ಸೇರಿ ಅವನ ಬ್ಯಾಗನ್ನು ಸಿದ್ಧಪಡಿಸಿದರು. ನಾಳೆ ಅವರೆಲ್ಲಾ ಏಳುವ ಮೊದಲೇ ಅವನು ಹೋಗುತ್ತಾನೆ. ಜೋಸ್ ಅಂಕಲ್ ಬೆಳಗ್ಗೆ ಐದು ಗಂಟೆಗೆ ಕಾರಿನೊಂದಿಗೆ ತಲುಪುತ್ತಾರೆ. ಅಷ್ಟರಲ್ಲಿ ಅವನು ರೆಡಿ ಇರಬೇಕು.

ಅವತ್ತು ಅವನು ಬೇಗನೆ ಮಲಗಿದ.


**ಸುನೀತಾ**
ಸಾಗರ್ ಸ್ಪೋರ್ಟ್ಸ್, ಡಿಸಿಸಿ ಬ್ಯಾಂಕ್ ಹತ್ತಿರ, ಐ. ಬಿ. ರಸ್ತೆ
ಕುಶಾಲನಗರ, ಕೊಡಗು ಜಿಲ್ಲೆ – ೫೭೧ ೨೩೪


# ಸಾದರ ಸ್ವೀಕಾರ

**ದೇಶಭಕ್ತ ದರೋಡೆಕೋರರು ಮತ್ತು ಸರಕಾರಿ ನಾಯಿಗಳು** (ಚೊಚ್ಚಲ ಸ್ವರಚಿತ ಕ್ರಾಂತಿಕಾರಿ ಕವನಗಳ ಸಂಕಲನ) *ಬಿ. ಆರ್. ಗಂಗಪ್ಪನವರ*
***ಪುಟ : x + ೧೧೦ ಬೆಲೆ : ರೂ. ೧೦೦***
**ಗಂಭೀರ ಪ್ರಕಾಶನ,** ಶಾಂತಿನಗರ, ಅಥಣಿ

**ಮುನ್ನುಡಿ ಮೂಗುತಿ** (ಎಪ್ಪತ್ತು ಮುನ್ನುಡಿಗಳು) *ಸಿ.ಪಿ.ಕೆ.*
***ಪುಟ : ೨೬೦ + ೪ = ೨೬೪ ಬೆಲೆ : ರೂ. ೨೦೦***
**ಮಹಿಮಾ ಪ್ರಕಾಶನ,** ನಂ. ೧೪೯೩/೨, ಸಿ. ಹೆಚ್–೩೧, ೬ನೇ ಕ್ರಾಸ್, ಕೃಷ್ಣಮೂರ್ತಿಪುರಂ, ಮೈಸೂರು – ೪

**ಅಪರಾಧಿಯ ಅಂತರಂಗ** (ಅಪರಾಧ ಮನೋವಿಜ್ಞಾನ ಪ್ರವೇಶಿಕೆ) *ಡಾ॥ ಮಹಾಬಲೇಶ್ವರ ರಾವ್*
***ಪುಟ : ೯೬ ಬೆಲೆ : ರೂ. ೬೦***

**ಪ್ರಬಂಧ ಬರೆಯುವುದು ಹೇಗೆ?** (ನವಕರ್ನಾಟಕ ಕನ್ನಡ ಕಲಿಕೆ) *ಟಿ. ಎಸ್. ಗೋಪಾಲ್*
***ಪುಟ : ೭೨ ಬೆಲೆ : ರೂ. ೩೫***

**ಲೇಖನ ಚಿಹ್ನೆಗಳು** (ನವಕರ್ನಾಟಕ ಕನ್ನಡ ಕಲಿಕೆ) *ಟಿ. ಎಸ್. ಗೋಪಾಲ್*
***ಪುಟ : ೪೮ ಬೆಲೆ : ರೂ. ೨೫***

**ಕನ್ನಡ ಛಂದಸ್ಸು** (ನವಕರ್ನಾಟಕ ಕನ್ನಡ ಕಲಿಕೆ) *ಟಿ. ಎಸ್. ಗೋಪಾಲ್*
***ಪುಟ : ೫೨ ಬೆಲೆ : ರೂ. ೩೫***

**ಒಂದು ಹನಿ** (ಹನಿಗವನಗಳ ಸಂಕಲನ)
*ಮಲಯಾಳಂ ಮೂಲ : ಪಿ. ಕೆ. ಗೋಪಿ*
*ಕನ್ನಡಕ್ಕೆ : ಡಾ॥ ಪಾರ್ವತಿ ಜಿ. ಐತಾಳ್*
***ಪುಟ : ೮೦ ಬೆಲೆ : ರೂ. ೬೫***

**ತಂಡ ನಿರ್ವಹಣೆ** (ಟೀಮ್ ಮ್ಯಾನೇಜ್‌ಮೆಂಟ್) *ಪಿ. ಪಿ. ಉಪಾಧ್ಯ*
***ಪುಟ : ೧೫೬ ಬೆಲೆ : ರೂ. ೧೨೦***

**ಕೆಚ್ಚೆದೆಯ ಅಚ್ಚಕನ್ನಡಿಗ ಟೀಪು ಸುಲ್ತಾನ**
*ಸಂಗ್ರಹ–ಸಂಪಾದನೆ : ಲಕ್ಷ್ಮಣ ಕೊಡಸೆ*
***ಪುಟ : ೪೮ ಬೆಲೆ : ರೂ. ೩೫***

**ನಿಮ್ಮ ಪಯಣ ಸುಗಮವಾಗಲಿ!** *ಡಾ॥ ಕೆ. ಎಸ್. ಪವಿತ್ರ*
***ಪುಟ : ೧೦೮ ಬೆಲೆ : ರೂ. ೬೫***

**Five Hundred Miles to Niagara** (A heart warming true to life narrative) *S. R. Gautham*
***ಪುಟ : ೧೬೮ ಬೆಲೆ : ರೂ. ೨೫೦***

*ಮೇಲಿನ ಒಂಬತ್ತು ಪುಸ್ತಕಗಳ ಪ್ರಕಾಶಕರು*
**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು – ೫೬೦ ೦೦೧

**ರನ್ನನ ಗದಾಯುದ್ಧ** (ಜನಪ್ರಿಯ ಪರಿಷ್ಕರಣ)
*ಸಂಪಾದಕರು : ಸಿ.ಪಿ.ಕೆ.*
***ಪುಟ : ೧೨೦ ಬೆಲೆ : ರೂ. ೯೦***
**ಸಂವಹನ,** ೧೨/೧ಎ, ಈವನಿಂಗ್ ಬಜಾರ್ ಹಿಂಭಾಗ, ಶಿವರಾಂ ಪೇಟೆ, ಮೈಸೂರು – ೫೭೦ ೦೦೧

**ಚಿಟ್ಟೆ** (ಕವಿತೆಗಳು) ನಭಾ ಒಕ್ಕುಂದ
***ಪುಟ : ೧೬ + ೪೬ ಬೆಲೆ : ರೂ. ೬೦***
**ಚಿಲಿಪಿಲಿ ಪ್ರಕಾಶನ,** ೪ನೇ ಕ್ರಾಸ್, ಶಿವಾನಂದನಗರ, ಧಾರವಾಡ – ೫೮೦ ೦೦೧

**ಹೃದಯವಂತ ರಂಗರಾವ್ ಕಾಸರಗೋಡು**
*ಭಾರತೀ ಕಾಸರಗೋಡು*
***ಪುಟ : vi + ೩೬ ಬೆಲೆ : ರೂ. ೩೦***
**ಸಿಂಧುಭೈರವಿ ಪ್ರಕಾಶನ,** ಜಿ–೫, ಶ್ರೀನಿಧಿ ಶೆಲ್ಟರ್ಸ್, ನಂ. ೧, ರವಿಗುಡ್ಡ, ಇಟ್ಟಮಡು, ಬಿಎಸ್‌ಕೆ ೩ನೇ ಹಂತ, ಬೆಂಗಳೂರು – ೫೬೦ ೦೮೫

**ಮಣ್ಣಿಗೆ ಬಿದ್ದ ಹೂಗಳು** (ಕವನ ಸಂಕಲನ)
*ಬಿದಲೋಟಿ ರಂಗನಾಥ್*
***ಪುಟ : xii + ೭೯ = ೯೧ ಬೆಲೆ : ರೂ. ೮೫***
**ನಿಶಾಂತ್ ಪ್ರಕಾಶನ,** ಬಿದಲೋಟಿ, ಹೊಳವನಹಳ್ಳಿ ಅಂಚೆ, ಕೊರಟಗೆರೆ ತಾಲ್ಲೂಕು – ೫೭೨ ೧೨೧, ತುಮಕೂರು ಜಿಲ್ಲೆ

**ವಿಶ್ವ ಕಂಡ ಶ್ರೇಷ್ಠ ಆರ್ಥಿಕ ಚಿಂತಕ ಬಾಬಾ ಸಾಹೇಬ್ ಡಾ॥ ಬಿ. ಆರ್. ಅಂಬೇಡ್ಕರ್** *ಎಚ್. ಎಸ್. ಬೇನಾಳ*
***ಪುಟ : xviii + ೧೧೨ ಬೆಲೆ : ರೂ. ೧೧೦***
**ಸಹನಾ ಪ್ರಕಾಶನ,** ಪ್ಲಾಟ್ ನಂ. ೪೦೮, ಸಿ.ಐ.ಬಿ. ಕಾಲೋನಿ, ಕೇಂದ್ರ ಬಸ್ ನಿಲ್ದಾಣದ ಹಿಂದುಗಡೆ, ಎಂ.ಎಸ್.ಕೆ. ಮಿಲ್ ರಸ್ತೆ, ಕಲಬುರಗಿ – ೫೮೫ ೧೦೩

**ಏನಿದು ಬದುಕು? ಇದೆಂತಾ ತಿರುವು?** (ಕಿಡ್ನಿ ಕಸಿ ಕಥಾನಕ) *ಹೆಚ್. ಶೇಷಗಿರಿರಾವ್*
***ಪುಟ : ೧೬+೧೨೮ = ೧೪೪ ಬೆಲೆ : ರೂ. ೧೨೫***
**ಮಲ್ಲಿಗೆ ಪ್ರಕಾಶನ,** ಹೂವಿನ ಹಡಗಲಿ – ೫೮೩ ೨೧೯ (ಬಳ್ಳಾರಿ ಜಿಲ್ಲೆ)

**ಶರಣು ಶರಣಾರ್ಥಿ** (ಆತ್ಮಕತೆ)
*ಪ್ರೊ॥ ಹೇಮಂತ ಭೂತನಾಳ*
***ಪುಟ : xxxviii+೨೭೨+೨೦ ಬೆಲೆ : ರೂ. ೨೦೦***
**ನಿರಂತರ ಪ್ರಕಾಶನ,** ಗಾಂಧಿನಗರ, ೫ನೇ ಅಡ್ಡರಸ್ತೆ, ಲೊಯಲಾ ಕಾನ್ವೆಂಟ್ ಹಿಂಭಾಗ, ಬೆಟಗೇರಿ – ಗದಗ – ೫೮೨ ೧೦೨

**ಮೌಢ್ಯಾಚರಣೆ ನಿಷೇಧ ಕಾಯ್ದೆ ಔಚಿತ್ಯ** (ತತ್ವಜ್ಞಾನ, ನ್ಯಾಯಶಾಸ್ತ್ರ ದೃಷ್ಟಿಯಿಂದ ವಿಶ್ಲೇಷಣೆ) *ಕೋಚೆ*
***ಪುಟ : ೭೨ ಬೆಲೆ : ರೂ. ೪೦***
**ಶ್ರೀ ಅರವಿಂದ ಪ್ರಕಾಶನ,** ನಂ. ೧೨೭, ವೆಸ್ಟ್ ಆಫ್ ಕಾರ್ಡ್ ರೋಡ್, ಬೆಂಗಳೂರು – ೫೬೦ ೦೮೬

**ತರಾತುರಿಯ ಪ್ರಣಯ ಯಾನ**
*ಸಿದ್ಧಾರೂಢ ಗು. ಕಟ್ಟಿಮನಿ*
***ಪುಟ : xii + ೧೨೪ = ೧೩೬ ಬೆಲೆ : ರೂ. ೧೦೦***
**ಪ್ರಸಾದ್ ಏಜೆನ್ಸೀಸ್,** ನಂ. ೯೦೭/೫, ೪ನೇ ಮುಖ್ಯರಸ್ತೆ, ೧ನೇ ಕ್ರಾಸ್, ವಿದ್ಯಾರಣ್ಯಪುರಂ, ಮೈಸೂರು – ೫೭೦ ೦೦೮

# ಸಂತೆಯ ಮೆರವಣಿಗೆ

ವೈ. ಎನ್. ಗುಂಡೂರಾವ್

ಇದೇನಪ್ಪ ಇದು ಸಂತೆ, ಎಲ್ಲಾದರೂ ಮೆರವಣಿಗೆ ಹೊರಡುತ್ತದಾ ? ಸಂತೆ ಎಂದರೆ ಯಾವುದಾದರೊಂದು ನಿರ್ದಿಷ್ಟ ಸ್ಥಳದಲ್ಲಿ ನಡೆಯುವ ವ್ಯಾಪಾರದ ವಹಿವಾಟು. ಹಳ್ಳಿಗಳಲ್ಲಿ ವಾರದ ಒಂದು ನಿರ್ದಿಷ್ಟ ದಿವಸ ಕಾಯಿಪಲ್ಲೆ, ದಿನಬಳಕೆಯ ಸಾಮಾನುಗಳನ್ನು ಒಂದೆಡೆ ತಂದುಹಾಕಿಕೊಂಡು ಮಾರಾಟ ಮಾಡುವ ಪದ್ಧತಿ. ರೈತರು ಹಳ್ಳಿಗಳಲ್ಲಿ ತಾವು ಬೆಳೆದುದನ್ನು ಮಾರಿ ತಮಗೆ ಬೇಕಾದ ವಸ್ತುಗಳನ್ನು ಈ ಸಂತೆಯಿಂದಲೇ ಕೊಂಡೊಯ್ಯುತ್ತಾರೆ.

ಮತ್ತೆ ಈ ಸಂತೆ ಮೆರವಣಿಗೆ ಹೊರಡುವುದಾದರೂ ಹ್ಯಾಗೆ ಎಂದುಕೊಂಡಿರಾ?

ನಾ ಹೇಳ್ತೀನಿ ಕೇಳಿ. ಶುಕ್ರವಾರ ಬೆಳಿಗ್ಗೆ ಹನ್ನೊಂದರ ಹೊತ್ತಿಗೆ ನಮ್ಮ ಬಡಾವಣೆಗೆ ಬನ್ನಿ. ಸಂತೆ ಹೊರಡುವುದನ್ನು ತೋರಿಸ್ತೀನಿ. ಹೋಗ್ಲಿ ಬಿಡಿ. ನೀವು ನಮ್ಮ ಏರಿಯಾದಿಂದ ಎಷ್ಟು ದೂರದಲ್ಲಿದ್ದಿರೋ ಏನೋ ? ನಾ ಕೊಡುವ ವಿವರಣೆಯನ್ನಾದರೂ ಓದುತ್ತಾ ಹೋಗಿ. ನೀವೇ ನೋಡ್ತೀರಾ ಅಥವಾ ಓದ್ತೀರಾ, ಸಂತೆ ಮೆರವಣಿಗೆ ಹೇಗೆ ಹೊರಡುತ್ತದೆ ಎಂಬುದನ್ನು.

ನಾವು ಈ ಬಡಾವಣೆಗೆ ಬಂದ ಹೊಸದರಲ್ಲಿ ನಮ್ಮ ರಸ್ತೆಯಲ್ಲಿ ಐದನೆಯವರಾಗಿ ಮನೆ ಕಟ್ಟಿದವರು ನಾವೆ. ಹೀಗೆ ಪ್ರತಿ ರಸ್ತೆಯಲ್ಲಿಯೂ ಅಲ್ಲೊಂದು ಇಲ್ಲೊಂದು ಮನೆ. ಇಡೀ ಬಡಾವಣೆಯನ್ನು ದಿಬ್ಬದ ಮೇಲೆ ನಿಂತು ನೋಡಿದರೆ ಯಾವುದೋ ಡ್ಯಾಂ ವರ್ಕ್‌ಗೆ ಬಂದವರು ಮನೆ ಕಟ್ಟಿಕೊಂಡಿದ್ದಾರೇನೋ ಎನಿಸುತ್ತಿತ್ತು. ರಸ್ತೆಗೆ ಜೆಲ್ಲಿ ಕಲ್ಲು ಸುರಿದು ಟಾರಿಲ್ಲದ ರಸ್ತೆಯ ಎರಡು ಬದಿಯೂ ಫುಟ್‌ಪಾತ್‌ನಂತಿದ್ದ ಸ್ಥಳದಲ್ಲೇ ಓಡಾಟ, ಸ್ಕೂಟರ್ ಓಡಿಸುತ್ತಿದ್ದುದೂ ಅಲ್ಲೇ. ಇನ್ನು ಅಂಗಡಿ–ಮುಂಗಟ್ಟು ಎಂದು ಕೇಳಿದಿರಾ ? ಎರಡು ಕಿ.ಮೀ. ನಡೆದುಹೋದರೆ ಅಲ್ಲಿ ಕೊಂಚ ಅಂಗಡಿಗಳಿದ್ದು ಡಾಕ್ಟರ ಶಾಪು, ಮೆಡಿಕಲ್ ಸ್ಟೋರು, ತರಕಾರಿ–ದಿನಸಿ ಅಂಗಡಿಗಳು ಎಲ್ಲವೂ ಇದ್ದವು. ಒಂದು ಸಾರಿ ಯಾವುದಾದರೊಂದು ವಸ್ತುವನ್ನು ತರಲು ಮರೆತರೆ ಮತ್ತೆ ಅಷ್ಟು ದೂರ ಓಡಿಹೋಗಬೇಕಿತ್ತು.

ಹೀಗಿದ್ದ ಬಡಾವಣೆಯಲ್ಲಿ ಒಂದೊಂದೇ ಮನೆಗಳು ಏಳುತ್ತಾ ಬಡಾವಣೆಯ ತುಂಬ ಮನೆಗಳು ಬಡಾಯಿಸತೊಡಗಿದವು. ರಸ್ತೆಗೆ ಟಾರು ಬಂತು, ನೀರು ಬಂತು, ಅಂಗಡಿ–ಮುಂಗಟ್ಟು ಎಲ್ಲವೂ ಬಂದವು. ಪ್ರತಿ ರಸ್ತೆಯಲ್ಲೂ ದಿನಸಿ ಅಂಗಡಿ, ತರಕಾರಿ ಅಂಗಡಿ, ಔಷಧಿ ಅಂಗಡಿ. ಡಾಕ್ಟರು ಬಂದ್ರು, ಕಾರ್ಪೆಂಟರ್ ಬಂದ್ರು, ದೇವ್ರೂ ಬಂದ್ರು. ನಾಲ್ಕಾರು ಗುಡಿಗೋಪುರಗಳೊಳಗೆ ಕೂತ್ಕೊಂಬಿಟ್ರು.

ಅಂಗಡಿ–ಮುಂಗಟ್ಟು, ಗುಡಿಗೋಪುರಗಳೆದ್ದ ಮೇಲೆ ಹೌಸ್ ಮೇಕರ್ಸ್ ಹೇಗೆ ಮನೇಲೇ ಕೂತಿರ್ತಾರೆ ? ಸಂಜೆಯಾದ್ರೂ ಮನೆಗೆ ಬಾರದ ಗಂಡಂದ್ರು ಆಫೀಸಿನಲ್ಲಿ ಕೂತಿದ್ರೆ ಸಿಂಗರಿಸಿಕೊಂಡ ಸೀತಾಲಕ್ಷ್ಮಿಗಳು ಸಂಜೆ ದಿಬ್ಬಣದ ರೀತಿ ರೌಂಡ್ ಹೊರಡತೊಡಗಿದರು. ಇವರನ್ನು ಸಿಂಗರಿಸೋಕ್ಕೆ ಬ್ಯೂಟಿಪಾರ್ಲರ್‌ಗಳೂ ಬಂದವು. ಬಂತು... ಬಂತು... ಬಂತು... ಅನ್ನೋದ್ರೊಳ್ಗೆ ಎಲ್ಲವೂ ಬಂತು. ಎಷ್ಟು ಹೊತ್ತಿನಲ್ಲಿ ನೋಡಿದರೂ ರಸ್ತೆಯಲ್ಲಿ ಜನವೋ ಜನ !

ದಿನಬೆಳಗಾಗೆದ್ದರೆ ತಳ್ಳುಗಾಡಿಗಳಲ್ಲಿ ತರಕಾರಿ ಮಾರುವವರು ಬರತೊಡಗಿದರು. ಒಂದು ಕಾಲದಲ್ಲಿ ಜನವಸತಿಯೇ ಇಲ್ಲದ ಪ್ರದೇಶದಲ್ಲಿ ಮನೆ ಕಟ್ಟಿದ್ದಕ್ಕೆ 'ಏನಯ್ಯಾ ಕಾಡಿನಲ್ಲಿ ಬಂದು ಮನೆ ಕಟ್ಕೊಂಡಿದ್ದೀಯಾ' ಎಂದು ರೇಗಿಸುತ್ತಿದ್ದ ಸ್ನೇಹಿತರು ಇಂದು ನಮ್ಮ ಮನೆ ತಲುಪಲು ಹುಡುಕಾಟ ನಡೆಸಿ ಬರುವುದು ಸಾಮಾನ್ಯವಾಯಿತು. ನಮ್ಮ ಮನೆಯಿಂದ ಹತ್ತು, ಹದಿನೈದು ಮೈಲಿಗಳವರೆಗಿನ ಹಳ್ಳಿಗಳನ್ನೆಲ್ಲಾ ನುಂಗಿದ ನಗರ ಬೆಳೆದುಹೋಯಿತು.

ತರಕಾರಿ ಮಾರುವವರು ತಳ್ಳುಗಾಡಿಯಲ್ಲಿ ಬರತೊಡಗಿದರು ಎಂದು ಹೇಳಿದೆನಲ್ಲ, ಇವರ ಹಿಂದೆ ಇತರ ಸಾಮಗ್ರಿ ಮಾರಾಟಗಾರರಾದ ಪ್ಲಾಸ್ಟಿಕ್ ವಸ್ತುಗಳನ್ನು ಹೇರಿ ತಂದವರು, ಬೆಡ್‌ಶೀಟ್ ಮಾರುವವರು, ಚಪ್ಪಲಿ ಮಾರುವವರು ಎಲ್ಲರೂ ಬರತೊಡಗಿದರು. ಎರಡು ಕಿ.ಮೀ. ನಡೆದು ಹೋಗಬೇಕಿದ್ದ ನಮಗೆ ಎಲ್ಲವೂ ಮನೆ ಮುಂದೆ ಫಟಾಫಟ್ ದೊರೆಯುವಂತಾಯಿತು. ನಮ್ಮ ಬಡಾವಣೆಯ ಅಭಿವೃದ್ಧಿಯೇ ದೇಶದ ಅಭಿವೃದ್ಧಿಯ ಸಂಕೇತವೆನಿಸಿಕೊಂಡಿತು.

ಇದ್ದಕ್ಕಿದ್ದಂತೆ ಒಂದು ವಾರಪೂರ್ತಿ ತಳ್ಳುಗಾಡಿಯವರು ಯಾರೂ ಬರದೆ ರಸ್ತೆಗಳು ಬಿಕೋ ಎನಿಸತೊಡಗಿದವು. ಇದೇನಿದು ಏನಾಯ್ತು ? ತರಕಾರಿ ಮಾರಲು ಬರುತ್ತಿದ್ದ ಸಿದ್ದರಾಜುಗೇನಾಯ್ತು, ಹೋಗಲಿ ಪ್ಲಾಸ್ಟಿಕ್ ಐಟಂ ಮಾರಲು



ಬರುತ್ತಿದ್ದ ರಹೀಂಗೇನಾಯಿತು, ಇವರ ಜೊತೆಗೆ ಬೆಡ್‌ಶೀಟ್ ಮಾರಲು ಬರುತ್ತಿದ್ದ ತಂಗಪಿಳ್ಳೈಗೇನಾಯಿತು ಎಂದೆಲ್ಲಾ ಯೋಚಿಸತೊಡಗಿದೆವು. ಮತ್ತೆ ಒಂದೆರಡು ವಾರ ಹೇಗೋ ಕಳದೇಹೋಯಿತು.

ಒಂದು ದಿನ ಇದ್ದಕ್ಕಿದ್ದಂತೆ ಸಾಲಿನಲ್ಲಿ ಮೊದಲನೆಯದಾಗಿ ಈರುಳ್ಳಿ–ಬೆಳ್ಳುಳ್ಳಿ ಗಾಡಿ ಬಂತು. ಏಕಾದಶಿ ದಿನ ಈರುಳ್ಳಿ ಬೆಳ್ಳುಳ್ಳಿ ಯಾರು ತಿಂತಾರೋ ಎಂದು ಕರ್ಮಠರು ಮೂಗು ಮುರಿದರು. ಪಾಪ ಮಾರಾಟಗಾರನಿಗೆಂತಹ ಏಕಾದಶಿ–ದ್ವಾದಶಿ ! ಹಿಂದೆಯೇ 'ಮಂಗಳೂರು ಸೌತೆಕಾಯಿ, ನಾಟಿ ಸೌತೆಕಾಯಿ ಬಂತು. ಅದರ ಹಿಂದೆ ಬೀನ್ಸು, ಕ್ಯಾಬೇಜು, ಕಾಲಿಫ್ಲವರ್ರೂ' ಎಂದು ಕಿರುಚುತ್ತಾ ಒಬ್ಬ ಬಂದ. ಇದರ ಹಿಂದೆ ಬೂದು ಕುಂಬಳ–ಸೀಗುಂಬಳದ ಗಾಡಿ ಬಂತು. ಇದರ ಹಿಂದೆ ಅಗಸೆ, ದಂಟು, ಹೊನಗೊನೆ, ಸಬಸೀಗೆ ಕೀರೆ–ಪಾರೆ ಎಲ್ಲಾ ತರಹದ ಸೊಪ್ಪಿನ ಗಾಡಿಯೂ ಬಂತು. ತರಕಾರಿಯ ಹಿಂದೆ ಹಣ್ಣುಗಳು ಹೂವುಗಳು ನಂತರ ಪ್ಲಾಸ್ಟಿಕ್ ಐಟಂಗಳು, ಪೆಟಿಕೋಟ್–ಪಂಚೆ, ಚಾಪೆ–ಚಾದರ, ಇದರ ಹಿಂದೆ ಸಾಯಿಬಾಬನ ಹಾಡು ಹಾಕಿಕೊಂಡು ಬಂದ ಪಂಜಾಬಿಗಳ ಮಾರುತಿ ವ್ಯಾನ್ – ಹೀಗೆ ಎಲ್ಲವೂ ಬಂದುಬಿಟ್ಟವು. ನೋಡನೋಡು ತ್ತಿದ್ದಂತೆ ಸಂತೆಯೇ ಮೆರವಣಿಗೆ ಹೊರಟಂತೆ ಕಾಣತೊಡಗಿ ಮನೆಯೊಳಗಿದ್ದ ಹೌಸ್ ಮೇಕರ್ಸ್ ತಮ್ಮ ಕೆಲಸ ನಿಲ್ಲಿಸಿ ಗೇಟಿನ ಬಳಿ ಬಂದು ನೋಡತೊಡಗಿದರು.

ನೀವು ಯಾವ ವರ್ಷದಲ್ಲಾದರೂ ಬೆಂಗಳೂರು ಕರಗವನ್ನು ನೋಡಿದ್ದರೆ ಕೊಂಚ ಜ್ಞಾಪಿಸಿಕೊಳ್ಳಿ. ರಾತ್ರಿ ಕರಗದ ಉತ್ಸವ ನಡೆದ ನಂತರ ಮಾರನೆಯ ದಿನ ಬೆಳಿಗ್ಗೆ ಸಿಟಿ ಮಾರ್ಕೆಟ್ ಸುತ್ತಮುತ್ತ ಇರುವ ದೇವಸ್ಥಾನಗಳ ಎಲ್ಲ ದೇವರ ರಥಗಳೂ ಒಂದರ ಹಿಂದೊಂದರಂತೆ ಬಂದು, ಸಿಟಿ ಮಾರ್ಕೆಟ್ ಏರಿಯಾವನ್ನು ಬಂದ್‌ಮಾಡಿಬಿಡುತ್ತವೆ. ಅದರಂತೆ ಇಂದು ನಮ್ಮ ರಸ್ತೆಗೆ ಸಂತೆಯಲ್ಲಿ ಮಾರಾಟ ಮಾಡುತ್ತಿದ್ದ ವಸ್ತುಗಳೆಲ್ಲವೂ ಗಾಡಿಯ ಮೇಲೆ ಬರತೊಡಗಿದ್ದನ್ನು ನೋಡಿದರೆ ರಸ್ತೆಯ ಮೇಲೆ ಸಂತೆಯೇ ಮೆರವಣಿಗೆ ಹೊರಟಂತಿತ್ತು.

ಹೌಸ್ ಮೇಕರ್ಸ್ ಇದನ್ನು ನೋಡಿ ಗರ ಬಡಿದು ಗೇಟಿನ ಬಳಿ ಬಂದು ನಿಂತುಬಿಟ್ಟರು. ತಳ್ಳುಗಾಡಿಯವರೆಲ್ಲ ತಮ್ಮ ತಮ್ಮ ವ್ಯಾಪಾರದ ಪದಾರ್ಥಗಳ ಹೆಸರು ಹೇಳಿ ಒಂದೇ ಬಾರಿಗೆ ಗಟ್ಟಿ ಧ್ವನಿಯಲ್ಲಿ ಕೂಗತೊಡಗಿದರು. ದೊಡ್ಡ ಧ್ವನಿಯಲ್ಲಿ ಎಲ್ಲರೂ ಒಟ್ಟಿಗೆ ಕೂಗುತ್ತಿದ್ದುದರಿಂದ ಶಬ್ದಗಳ ಕಲಸುಮೇಲೋಗರದಿಂದ ಯಾರು ಯಾವ ಪದಾರ್ಥದ ಹೆಸರು ಹೇಳುತ್ತಿದ್ದಾರೆಂಬುದೇ ತಿಳಿಯದಂತಾಗಿತ್ತು. ಜೊತೆಗೆ ದೂರದಿಂದ ನೋಡಿದವರಿಗೆ ಏನು ಮಾರಲು ಬಂದಿದ್ದಾರೆಂಬುದೇ ಗೊತ್ತಾಗು ತ್ತಿರಲಿಲ್ಲ. ಇವರ ಶಬ್ದದ ಗಲಾಟೆ ಎಷ್ಟಿತ್ತೆಂದರೆ ಮನೆಯೊಳಗೆ ಉಳಿದಿದ್ದವರು ಒಳಗಿರಲಾರದೆ ಈಚೆ ಬಂದು ಇಣುಕು ಹಾಕಲೇಬೇಕಾಯಿತು.

...ರ್ರೆಕಾಯ್, ರೆಕಾಯ್, ರ್ರೆಕಾಯ್, ರ್ರೆಕಾಯ್ ಎಂದು ಅವರೇಕಾಯಿಯವನ ಕೂಗಾದರೆ, ಮಜ್ಗುಳಿ, ಮಜ್ಗುಳಿ, ಮಜ್ಗುಳಿ ಎಂದು ಕೂಗುತ್ತಿದ್ದ ಬೂದುಕುಂಬಳ ಕಾಯಿಯವನ ಧ್ವನಿ. ಇವರ ಮಧ್ಯೆ ಕಬಡಿ ಕಬಡಿ ಕಬಡಿ ಎಂದು ಆಟಗಾರರು ಹೇಳಿದಂತೆ ಉಸಿರು ಬಿಗಿ ಹಿಡಿದು ಸಪು ಸಪು ಸಪು ಎಂದು ಕೂಗುತ್ತಿದ್ದ ಸೊಪ್ಪು ಮಾರುವವನ ಗಾನ. ಜೊತೆಗೆ ಏರಳಿ ಬಾಳಳಿ, ಏರಳಿ ಬಾಳಳಿ, ಏರಳಿ ಬಾಳಳಿ, ಏರಳಿ ಬಾಳಳಿ ಎಂದು ಕೂಗುತ್ತಿದ್ದವನ ಈರುಳ್ಳಿ–ಬೆಳ್ಳುಳ್ಳಿಯವನ ಸದ್ದಾದರೆ ರೋಜವ್ವ, ರೋಜವ್ವ, ರೋಜವ್ವ ಎಂದು ರೋಜಾ ಹೂವು ಮಾರುವವನ ಕಿರುಚಾಟ.

ಈ ಗಾಡಿಯವರ ಪದಾರ್ಥಗಳ ಮಾರಾಟದ ಸದ್ದಿನ ಜೊತೆಗೆ ಚೌಕಾಸಿ ಮಾಡುವವರ ಏರುಧ್ವನಿ ಒಂದೆಡೆಯಾದರೆ, ಕಡೇ ಮನೆ ಮುದುಕರೊಬ್ಬರು ಪೇಪರ್ರು, ಪೆನ್ನು ಹಿಡಿದು ಎಲ್ಲದರ ದರವನ್ನು ಹತ್ತು ಹತ್ತು ಸಾರಿ ಕೇಳಿ ಕೇಳಿ ಬರೆದುಕೊಳ್ಳತೊಡಗಿದರು. ಏಕೆಂದರೆ ಆ ಸದ್ದಿನಲ್ಲಿ ಗಾಡಿಯವರು ಏನು ಹೇಳುತ್ತಿದ್ದಾರೆಂಬುದೇ ಸರಿಯಾಗಿ ಕೇಳಿಸುತ್ತಿರಲಿಲ್ಲ.

"ಅಲ್ಲಾ ಸಾರ್, ನೀವು ಹೀಗೆ ರೇಟ್ ಕೇಳಿ ಬರ್ಕೊಂಡ್ಹೋದ್ರೆ ಇದೇ ರೇಟಿಗೆ ಬೇರೆಯವರು ಕೊಡ್ತಾರಾ ಅಥವಾ ಬೇರೆಯವರ ರೇಟಿಗಿಂತ ಇವತ್ತು ಕಡಿಮೆ ಇದ್ದರೆ ನಾಳೆ ರೇಟ್ ಏನಿರುತ್ತೋ ಹೇಗೆ ಹೇಳ್ತೀರಾ ?" ಅಂದದ್ದಕ್ಕೆ ಆ ಮುದುಕರು, "ರೀ ಕಂಪೇರ್ ಮಾಡ್ಬೇಕ್ರಿ ಕಂಪೇರು..." ಎಂದು ಮನೆಯೊಳಗೆ ಹೋದಾಗ ಕಂಪೇರು ಮಾಡ್ತಾರಂತೆ ಕಂಪೇರು... ಪಂಕ್ಚರ್ ಮಾಡ್ಬೇಕ್ರೀ ಪಂಕ್ಚರ್ರು ಎಂದು ರೇಗಿಸಿದ ಒಬ್ಬ.

ಇವರ ಹಿಂದೆ ತಲೆಯ ಮೇಲೆ ಮೂಟೆಯಲ್ಲಿ ಹೊತ್ತು ತರುತ್ತಿದ್ದ ಗೋಡಂಬಿ, ಕರ್ಜೂರ, ಒಣದ್ರಾಕ್ಷಿ, ಗಸಗಸೆ, ಸಾಸಿವೆ, ಧನಿಯದವರ ಕೂಗಿನ ಜೊತೆಗೆ ಅಕ್ರಿ ಅಕ್ರಿ ಅಕ್ರಿ ಅಕ್ರಿ... ಎಂದು ಬಲು ಫಾಸ್ಟಾಗಿ ಕೂಗುತ್ತಿದ್ದವನ ಬಳಿ ಏನು ಕೂಗುತ್ತಿದ್ದಾನೆಂದು ತಿಳಿಯದೆ ವಿಚಾರಿಸಿದರೆ 'ಹಳ್ಳಿಯ ಅಕ್ಕಿ ಸೋಮಿ, ಬಲು ರುಚಿಯಾಗೈತೆ' ಎಂದ. ಕೇಳಿದವ, "ಅಲ್ಲಪ್ಪ, ಅಕ್ಕೀನ ಹಳ್ಳಿಲಲ್ದೆ ದಿಲ್ಲೀಲಿ ಬೆಳೀತಾರಾ ? ಪ್ರತಿಯೊಂದನ್ನು ಬೆಳೆಯೋದು ಹಳ್ಳೀಲೆ" ಎಂದು ಒಂದು ಹಿಡಿ ಅಕ್ಕಿಯನ್ನು ತೆಗೆದುಕೊಂಡು ನೋಡಿ ಚೀಲಕ್ಕೆ ಹಿಂದಿರುಗಿ ಹಾಕಿಹೋದ.

ಹೀಗೆ ಸಂತೆಯ ಮೆರವಣಿಗೆ ನಮ್ಮ ರಸ್ತೆಯಲ್ಲಿ ಬಂದ ದಿನ ಕೆಲ ಗಂಟೆಗಳ ಕಾಲ ಫೋನುಗಳು ಸ್ತಬ್ಧವಾಗಿಬಿಡುತ್ತಿದ್ದವು. ತರಕಾರಿ, ಹಣ್ಣು–ಹೂವು, ಸೀರೆ–ಪಂಚೆ ಮಾರಾಟಗಾರರ ಶಬ್ದದಿಂದ ಮನೆಯೊಳಗಿರುವವರು ಫೋನಿನಲ್ಲಿ ಮಾತನಾಡುವುದಕ್ಕೆ ಆಗದೆ ಆ ಒಂದೆರಡು ಗಂಟೆ ಯಾರೂ ಫೋನು ಮಾಡಲು ಹೋಗುತ್ತಲೇ ಇರಲಿಲ್ಲ. ಟಿವಿ ನೋಡುವುದಂತೂ ದೂರವೇ ಉಳಿಯಿತು. ಎಷ್ಟೇ ವಾಲ್ಯೂಮ್ ಕೊಟ್ಟರೂ ಬೀದಿಯಲ್ಲಿನ ಕೂಗಾಟದ ಶಬ್ದಕ್ಕೆ ಮಾತುಗಳೇ ಕೇಳದಾದವು. ಸಂತೆ ಬಂತೆಂದು ಖುಷಿಪಟ್ಟವರೂ ಕೂಡ ತಮ್ಮ ನೆಚ್ಚಿನ ಸೀರಿಯಲ್ ನೋಡಲಾಗುವುದಿಲ್ಲ ಎಂದು ಬೇಸರಿಸತೊಡಗಿದರು. ಈ ಸಮಯದಲ್ಲಿ ಸ್ನೇಹಿತರು, ಸಂಬಂಧಿಗಳು ಬಂದರೂ ಮಾತನಾಡಲಾಗುತ್ತಲೇ ಇರಲಿಲ್ಲ. ಯಾರಾದರು ಮನೆಗೆ ಬರುತ್ತೇವೆ ಎಂದು ಹೇಳಿದರೆ ಆ ನಿರ್ದಿಷ್ಟ ಸಮಯದಲ್ಲಿ ಬಂದರೆ ಸಿಗುವುದಿಲ್ಲ ಎಂದು ಏನೋ ಸಬೂಬು ಹೇಳಿಬಿಡುತ್ತಿದ್ದರು.

...ರ್ರೆಕಾಯ್, ರ್ರೆಕಾಯ್, ರ್ರೆಕಾಯ್, ಮಜ್ಗುಳಿ ಮಜ್ಗುಳಿ ಮಜ್ಗುಳಿ, ಸಪು ಸಪು ಸಪು, ದೊಣ್‌ಣ್‌ಣ್ ಮೆ...ಣ್...ಸಿ...ನ್...ಕಾಯೀೀ, ಕ್ಕಿಕ್ಕಿಕ್ಕಿಕ್ಕಿ... ಬೆರೆಬೆರೆಬೆರೆ ಬೆಡ್‌ಶೀಟ್, ರೋಜವ್ವ ರೋಜವ್ವ... ಅವರೇಕಾಯಿ, ಮಜ್ಜಿಗೆ ಹುಳಿ ಕುಂಬಳಕಾಯಿ, ಸೊಪ್ಪು, ದೊಣ್‌ಮೆಣಸಿನಕಾಯಿ, ಅಕ್ಕಿ, ಬೆಡ್‌ಶೀಟ್, ರೋಜ ಹೂ ಮುಂತಾದವುಗಳ ಮಾರಾಟಗಾರರು ಕೂಗುತ್ತಿದ್ದ ಸದ್ದು ಒಂದೇ ರೀತಿಯಾಗಿರುತ್ತಿದ್ದವು ಎಂದುಕೊಂಡಿರಾ? ಖಂಡಿತ ಇಲ್ಲ. ಒಬ್ಬನದು ತಾರಕಸ್ಥಾಯಿಯಾದರೆ, ಮತ್ತೊಬ್ಬನದು ಮಂದ್ರದ ಗತಿ, ಇನ್ನೊಬ್ಬನದು ಕೀಚಲು ಧ್ವನಿಯಾದರೆ ಮತ್ತೊಬ್ಬ ಎಳೆದೆಳೆದು ಕೂಗುತ್ತಿದ್ದುದು ಕೈಕೇಯಿಯ ದುಃಖಾಲಾಪದ ಧ್ವನಿಯಂತೆ. ಹೀಗೆ ಎಲ್ಲ ಸಂಮಿಶ್ರಣದ ಧ್ವನಿಗಳು ಮುಗಿಲು ಮುಟ್ಟುವಂತಿದ್ದುದನ್ನು ಕೇಳುತ್ತಿದ್ದ ನಮ್ಮದೆಂತಹ ವಿನೋದಭರಿತ ಜೀವನ !

ಒಂದೊಂದು ಬಾರಿ ನನಗನ್ನಿಸುತ್ತದೆ. ಮೇಲೆ ನಾನು ಬರೆದಿರುವ ಅವರೇಕಾಯಿ, ಮಜ್ಜಿಗೆ ಹುಳಿ, ಸೊಪ್ಪು, ಅಕ್ಕಿ ಮಾರುವವರ ಕೂಗನ್ನು ಅವರು ಕಿರುಚುತ್ತಿರುವ ರೀತಿಯೇ ನಾನು ಬರೆದಿರುವೆನಲ್ಲ, ಆದರೆ ಅವರ ಕಿರುಚುವ ರೀತಿಯನ್ನು ನೀವು ಕೇಳಿರದಿದ್ದುದರಿಂದ ಯಾವ ರಾಗದಲ್ಲಿ, ಯಾವ ಸ್ಥಾಯಿಯಲ್ಲಿ ಕಿರುಚುತ್ತಿದ್ದರು ಎಂಬುದನ್ನು ಕಲ್ಪಿಸಿಕೊಳ್ಳುವುದು ಕೊಂಚ ಕಷ್ಟವೆ.

ಅವರು ಕಿರುಚುತ್ತಿದ್ದುದನ್ನು ಅದೇ ರೀತಿ ಅಕ್ಷರಗಳಲ್ಲಿ ಹಿಡಿದಿಡಲು ಪ್ರಯತ್ನಿಸಿದ್ದೇನೆ. ಈಗ ಕ್ಷಣಕಾಲ ಕಲ್ಪಿಸಿಕೊಳ್ಳಿ, ಅವರು ಕಿರುಚುತ್ತಿದ್ದ ಅಕ್ಷರಗಳ ಮೇಲೆ ನೀವು ಕಣ್ಣಾಡಿಸುತ್ತಾ ಓದುತ್ತಾ ಹೋದಂತೆಲ್ಲ ಅವರು ಕಿರುಚುತ್ತಿದ್ದ ಶಬ್ದ ನಿಮ್ಮ ಕಿವಿಗೆ ಕೇಳಿಸು ವಂತಾದರೆ... ಇದೊಂದು ಅದ್ಭುತ ಸಂಶೋಧನೆಯಲ್ಲವೇ? ಮುಂದೊಂದು ದಿನ ಸೈನ್ಸ್‌ನ ಕೊಡುಗೆಯಾಗಿ ಲಿಪಿ–ಧ್ವನಿಯ ಅವತಾರವಾಗಿ, ಹೀಗೆ ಆದರೂ ಆಗಬಹುದಲ್ಲವೇ?

ಇರಲಿ–

ತಳ್ಳುಗಾಡಿಯ ಮಾರಾಟಗಾರರ ಹಿತ ಕಾಯಲು ಕಾಯಿದೆಗಳು ಬಂದಿರುವು ದಾಗಲೀ, ವೆಂಡಿಂಗ್ ಕಮಿಟಿ ಮಾರಾಟದ ಸ್ಥಳವನ್ನು ನಿಷ್ಕರ್ಷೆ ಮಾಡುತ್ತಾರೆ ಎಂಬುದನ್ನಾಗಲೀ, ಹೀಗೆ ಮಾರಾಟ ಮಾಡಲು ಪರವಾನಗಿ ಪಡೆಯಬೇಕೆನ್ನು ವುದನ್ನಾಗಲೀ ಅರಿಯದ ತಳ್ಳುಗಾಡಿಯ ಮಾರಾಟಗಾರರು ವಾರಕ್ಕೊಮ್ಮೆ ಈ ಸಂತೆಯ ಮೆರವಣಿಗೆಯನ್ನು ಹೊರಡಿಸುತ್ತಾರೆ. ಪ್ರತಿಯೊಂದು ಪದಾರ್ಥಗಳೂ ಬಾಗಿಲ ಮುಂದೆಯೇ ದೊರೆಯುವಂತಾದದ್ದು ಅನುಕೂಲವೇ ಆಗಿದ್ದು, ಮಾರಾಟಗಾರರು ತಮ್ಮ ವಸ್ತುವಿನ ಹೆಸರು ಹೇಳುವ ಕೂಗಾಟ, ಅರಚಾಟ, ಚೌಕಾಸಿಯವರ ವಾಗ್ವಾದ ಎಲ್ಲವೂ ಸೇರಿ ಮನೆಯೊಳಗಿದ್ದವರು ಟಿವಿ ನೋಡಲಾಗದ, ಫೋನ್ ಮಾಡಲಾಗದ, ನೆಂಟರಿಷ್ಟರಿಗೆ ಬರಹೇಳಲಾಗದ, ಅಚಾನಕ್ಕಾಗಿ ಬಂದವರೊಡನೆ ಮಾತನಾಡಲಾಗದ ಅನನುಕೂಲತೆಗಳ ನಡುವೆಯೂ ನೆರೆಯುವ ಸಂತೆಯ ಮೆರವಣಿಗೆಗೆ ಈ ರಸ್ತೆಯಲ್ಲಿನ ಈ ಜನ, ಈ ಮಾರುಕಟ್ಟೆಯ ಮೋಜು ಸವಿಯಲು ವಾರದ ದಿನಕ್ಕಾಗಿ ಬೇಸರಿಸದೆ ಕಾಯುತ್ತಾರೆ.

**ವೈ. ಎನ್. ಗುಂಡೂರಾವ್**
ನಂ. ೧೨೩೧, ೧೩ನೇ ಕ್ರಾಸ್, ೨ನೇ ಹಂತ, ಗಿರಿನಗರ, ಬೆಂಗಳೂರು – ೫೬೦ ೦೮೫



ಟ್ರಿನಿಟಿ' ಪರಮಾಣು ಬಾಂಬಿನ ಪರೀಕ್ಷೆ

ಓಪನ್‌ಹೈಮರ್ ಅವರ ಜೀವನ ಒಬ್ಬ ದುರಂತ ನಾಯಕನದ್ದು ಎಂದು ಕೆಲವರು ಅಭಿಪ್ರಾಯಪಡುತ್ತಾರೆ. ಅವರ ಪ್ರಿಯ ಸ್ನೇಹಿತೆ ಜೀನ್ ಆತ್ಮಹತ್ಯೆ ಮಾಡಿಕೊಂಡಿದ್ದೂ ಅವರ ವೈಯಕ್ತಿಕ ಜೀವನದ ಒಂದು ಮುಖ್ಯ ದುರಂತ. ಸತತವಾಗಿ ಸಿಗರೇಟು ಸೇದುತ್ತಿದ್ದು, ಸಮಸ್ಯೆಗಳಿದ್ದಾಗ ಊಟ-ತಿಂಡಿ ಮರೆಯುವ ಉತ್ಕಟತೆ ಇದ್ದಿತು. ಬಹಳ ಆಕಾಂಕ್ಷೆಯೂ ಇದ್ದಿತು, ಆದರೂ ಎಲ್ಲೋ ಅದು ಮುಖ್ಯವಲ್ಲ ಎಂಬ ಅರಿವೂ ಇದ್ದಿತು. ಅಂತೂ ಯಾವುದೋ ಅನಾಥಪ್ರಜ್ಞೆ ಅವರನ್ನು ಜೀವನಪರ್ಯಂತ ಕಾಡಿಸಿದ್ದಿರಬಹುದು.

# ರಾಬರ್ಟ್ ಓಪನ್‌ಹೈಮರ್ ಪರಮಾಣು ಬಾಂಬಿನ ಬ್ರಹ್ಮ

## ಮೇಧಾವಿ ವಿಜ್ಞಾನಿಯ ಗೊಂದಲಮಯ ಜೀವನ

**ಸ**ಮಯ ೧೯೪೫ ಜುಲೈ. ಸ್ಥಳ ಅಮೆರಿಕದ ಪಶ್ಚಿಮದ ನ್ಯೂ ಮೆಕ್ಸಿಕೊ ಪ್ರಾಂತ್ಯದಲ್ಲಿನ ಮರುಭೂಮಿಯ ಪ್ರದೇಶದ ಅಲಮಗೊರ್ಡೊ ಎಂಬ ಪುಟ್ಟ ಊರಿನ, ಹತ್ತಿರದಲ್ಲೇ ಜಗತ್ತಿನ ಬಹಳ ಮುಖ್ಯ ಅಸ್ತ್ರಪರೀಕ್ಷೆಯೊಂದು ಬೆಳಿಗ್ಗೆ ೪ ಗಂಟೆಗೆ ಪ್ರಾರಂಭವಾಗಿ ಒಂದು ಆಸ್ಫೋಟನೆ ನಡೆಯಿತು. ೧೦ ಮೈಲು ದೂರದಲ್ಲಿದ್ದ ಒಬ್ಬ ವಿಜ್ಞಾನಿಯ ಪ್ರಕಾರ : "ನನ್ನ ತಲೆಯನ್ನು ಭೂಮಿಯ ಮೇಲಿಟ್ಟಿದ್ದೆ. ತಕ್ಷಣವೇ ಅದು ಬಿಸಿಯಾಗತೊಡಗಿತು. ತಲೆ ಎತ್ತಿ ನೋಡಿದಾಗ ಬಹಳ ಬೆಳಕಿನ ಸೂರ್ಯನಿದ್ದಂತೆ ಕಾಣಿಸಿತು. ದೂರದಲ್ಲಿ ಹೊಗೆಯ ಮೋಡ ಮೇಲೆ ಹೋಗುತ್ತಿತ್ತು. ೫೦ ಸೆಕೆಂಡುಗಳ ನಂತರ ಅಗಾಧ ಶಬ್ದ." ಸುಮಾರು ೨೦೦ ಮೈಲುಗಳ ತನಕ ಪ್ರಕಾಶ ಕಂಡುಬಂದು ಒಂದು ಕಿಲೋಮೀಟರ್ ಸುತ್ತ ಎಲ್ಲವೂ ನಾಶವಾಗಿ ೩ ಕಿ.ಮೀ. ಸುತ್ತಮುತ್ತ ಇದ್ದ ಕಟ್ಟಡಗಳೆಲ್ಲಾ ಉರುಳಿದವು. ಟ್ರಿನಿಟಿ ಎಂಬ ಹೆಸರಿದ್ದ ಈ ಪರೀಕ್ಷೆ ಸಫಲವಾಗಿತ್ತು! ಅದನ್ನು ಹತ್ತಿರದಿಂದ ವೀಕ್ಷಿಸಿದ ವಿಜ್ಞಾನಿಯೊಬ್ಬರು, "ಕೆಲವರು ಅತ್ತರು. ಕೆಲವು ನಕ್ಕರು, ಬಹಳ ಜನ ಮೌನದಿಂದಲೇ ಇದ್ದರು. ಆದರೆ ನನಗೆ ಭಗವದ್ಗೀತೆಯ ಕೃಷ್ಣ ರಾಜಕುಮಾರ ಅರ್ಜುನನಿಗೆ ನಿನ್ನ ಕರ್ತವ್ಯವನ್ನು ನೀನು ಮಾಡು" ಎಂದದ್ದು ಜ್ಞಾಪಕಕ್ಕೆ ಬಂದಿತು. ಅದಲ್ಲದೆ ಅಲ್ಲಿಯ ಒಂದು ಶ್ಲೋಕ "(ಕಾಲೋಸ್ಮಿ...) ನಾನು ಮೃತ್ಯು. ನನ್ನ ಕಾರ್ಯ ವಿನಾಶ"ವನ್ನೂ ನಾನು ಹೇಳಿಕೊಂಡೆ. ಅವನ ಕರ್ತವ್ಯ ಪರಿಪಾಲನೆಗೆ ಗೀತೆಯ ಉಪದೇಶವನ್ನು ಅನುಸರಿಸಿದ ಈ ವಿಜ್ಞಾನಿ ಯಾರು ?

### (೧) ವಿವಿಧ ಆಸಕ್ತಿಗಳ ವಿಜ್ಞಾನಿ

ಹಿಂದಿನ ಕಾಲದಲ್ಲಿ ಕೋಪರ್ನಿಕಸ್, ನ್ಯೂಟನ್ ಇತ್ಯಾದಿ ವಿಜ್ಞಾನಿಗಳಿಗೆ ಅನೇಕ ವಿಷಯಗಳಲ್ಲಿ ಆಸಕ್ತಿ ಇದ್ದಿತು. ಆದರೆ ಈಗಿನ ಕಾಲದಲ್ಲಿ ಇಂದಿನ ಪ್ರಪಂಚದ ವೈವಿಧ್ಯತೆಗಳಿಂದಾಗಿ ವಿದ್ವಾಂಸರಿಗೆ ಒಟ್ಟಿಗೆ ಹಲವಾರು ಆಸಕ್ತಿಗಳನ್ನು ನಡೆಸಿಕೊಂಡು ಬರಲು ಆಗುವುದಿಲ್ಲ. ಆದರೂ ಇದಕ್ಕೆ ಅಪವಾದವಾಗಿದ್ದವರು ೧೯೦೪ರಲ್ಲಿ ನ್ಯೂಯಾರ್ಕ್ ನಗರದ ಮೇಲ್ವರ್ಗದ ಯೆಹೂದಿ ಕುಟುಂಬವೊಂದರಲ್ಲಿ ಹುಟ್ಟಿದ ರಾಬರ್ಟ್ ಓಪನ್‌ಹೈಮರ್. ಅವರ ತಂದೆ ಬಟ್ಟೆ ವ್ಯಾಪಾರಿ, ತಾಯಿ ಕಲಾವಿದೆ. ನಗರದ ಮ್ಯಾನ್‌ಹ್ಯಾಟನ್ ಪ್ರದೇಶದ ದೊಡ್ಡ ಮನೆಯಲ್ಲಿ ಬೆಳೆದರು. ಮನೆಯ

**ಪಾಲಹಳ್ಳಿ ವಿಶ್ವನಾಥ್**



*ರಾಬರ್ಟ್ ಓಪನ್‌ಹೈಮರ್*



*ಓಪನ್‌ಹೈಮರರ ಪತ್ನಿ ಕ್ಯಾಥರೀನ್ (ಕಿಟ್ಟಿ)*

ಗೋಡೆಗಳನ್ನು ವಾನ್ ಗೋ ಮತ್ತು ಇತರ ಖ್ಯಾತ ಕಲಾಕಾರರ ಚಿತ್ರಗಳ ಮೂಲ ಪ್ರತಿಗಳು ಅಲಂಕರಿಸಿದ್ದವು. ೧೭ನೆಯ ವಯಸ್ಸಿನಲ್ಲಿ ಖ್ಯಾತ ಹಾರ್ವರ್ಡ್ ವಿದ್ಯಾಲಯಕ್ಕೆ ಓದಲು ಹೋದರು. ಅಲ್ಲಿ ಭೌತವಿಜ್ಞಾನವಲ್ಲದೆ ತತ್ವಶಾಸ್ತ್ರ, ಪೂರ್ವದ ಧಾರ್ಮಿಕ ಗ್ರಂಥಗಳು ಇತ್ಯಾದಿಗಳ ಬಗ್ಗೆಯೂ ಅಧ್ಯಯನ ಮಾಡಿ "ಅವರ ಅದ್ಭುತ ಬುದ್ಧಿಯನ್ನು ಪ್ರದರ್ಶಿಸುತ್ತಿದ್ದರಂತೆ." ಅನಂತರ ೨೨ನೆಯ ವಯಸ್ಸಿನಲ್ಲಿ ಜರ್ಮನಿಯ ಗಾಟೆಂಗೆನ್ ವಿದ್ಯಾಲಯಕ್ಕೆ ಹೋಗಿ ಖ್ಯಾತ ಕ್ವಾಂಟಮ್ ಭೌತಶಾಸ್ತ್ರಜ್ಞ ಮ್ಯಾಕ್ಸ್ ಬಾರ್ನ್ ಜೊತೆ ಸಂಶೋಧನೆಗಳನ್ನು ನಡೆಸಿ ಅಲ್ಲಿ ಸೆಮಿನಾರುಗಳಲ್ಲಿ ಬಹಳ ಉತ್ಸಾಹದಿಂದ, ಕೆಲವರ ಪ್ರಕಾರ ಅತಿ ಅನ್ನಿಸುವಷ್ಟು ಮಟ್ಟದಲ್ಲಿ ಭಾಗವಹಿಸುತ್ತಿದ್ದರು; ಪಿಎಚ್.ಡಿ. ಪರೀಕ್ಷೆಯಲ್ಲಿ ಅವರನ್ನು ಪ್ರಶ್ನಿಸಲು ಬಂದಿದ್ದ ವಿಜ್ಞಾನಿ, "ಸದ್ಯ ಮುಗಿಯಿತಲ್ಲ ! ನನ್ನನ್ನೇ ಪ್ರಶ್ನೆ ಮಾಡುವುದರಲ್ಲಿ ಇದ್ದನಲ್ಲ" ಎಂದಿದ್ದರಂತೆ ! ಅವರು ಮತ್ತು ಮ್ಯಾಕ್ಸ್ ಬಾರ್ನ್ ಒಟ್ಟಿಗೆ ಬರೆದ ಒಂದು ಸಂಶೋಧನಾ ಲೇಖನ ಕ್ವಾಂಟಮ್ ಚಲನಶಾಸ್ತ್ರದಲ್ಲಿ ಬಹಳ ಮಹತ್ವದ್ದು. ೧೯೨೮ರಲ್ಲಿ ಅಮೆರಿಕಕ್ಕೆ ವಾಪಸ್ಸು ಬಂದು ಕ್ಯಾಲಿಫೋರ್ನಿಯಾದ ಖ್ಯಾತ ವಿದ್ಯಾಲಯಗಳಾದ ಕ್ಯಾಲ್ಟೆಕ್ ಮತ್ತು ಬರ್ಕ್ಲಿಯಲ್ಲಿ ಪ್ರಾಧ್ಯಾಪಕರಾದರು. ೧೯೩೦ರ ದಶಕದಲ್ಲಿ ಕಪ್ಪುಕುಳಿಗಳ ಬಗ್ಗೆ ಚಿಂತಿಸಿ ಆ ಸ್ವಾರಸ್ಯಕರ ಪರಿಕಲ್ಪನೆಯ ಪಿತಾಮಹರಾಗಿ ಸಂಶೋಧನಾ ಲೇಖನವನ್ನು ಬರೆದರು; ಇದನ್ನು ನೊಬೆಲ್ ಪ್ರಶಸ್ತಿಗೆ ತಕ್ಕ ಸಂಶೋಧನೆ ಎಂದು ಅನೇಕರು ಗುರುತಿಸಿದ್ದಾರೆ. ಭಾರತೀಯ ಸಂಸ್ಕೃತಿಯ ಬಗ್ಗೆ ಅಪಾರ ಜ್ಞಾನ ಗಳಿಸಿದ್ದ ಆರ್ಥರ್ ರೈಡರ್‌ರ ಜೊತೆ ಸ್ನೇಹವಿದ್ದು ಭಗವದ್ಗೀತೆಯನ್ನು ಸಂಸ್ಕೃತದಲ್ಲಿ ಓದುವಷ್ಟು ಪಾರಂಗತರಾಗಿದ್ದರು. ಒಂದು ರೈಲ್ವೆ ಪ್ರಯಾಣದಲ್ಲಿ ಕಾರ್ಲ್ ಮಾರ್ಕ್ಸ್‌ರ ಮಹಾಗ್ರಂಥ 'ದಾಸ್ ಕ್ಯಾಪಿಟಲ್'ಅನ್ನು ಪೂರ್ತಿ ಓದಿ ಮುಗಿಸಿದರಂತೆ !

ಅದೇ ಸಮಯದಲ್ಲಿ ಕಮ್ಯೂನಿಸಂನ ಆದರ್ಶಗಳಿಂದ ಬಹಳ ಪ್ರಭಾವಿತರಾದರು. ಯೂರೋಪಿನಲ್ಲಿ ನಾಜಿಗಳು ಯಹೂದಿಗಳಿಗೆ ಕೊಡುತ್ತಿದ್ದ ಹಿಂಸೆ ನೋಡಿಯೋ ಅಥವಾ ಅಮೆರಿಕದ ಭಾರೀ ಪ್ರಮಾಣದ ಆರ್ಥಿಕ ಕುಸಿತಕ್ಕೆ ಪ್ರತಿಕ್ರಿಯೆಯೋ ಇದ್ದಿರಬಹುದು ಎಂದು ಕೆಲವು ಇತಿಹಾಸಕಾರರ ಅಭಿಪ್ರಾಯ. ಆ ಸಮಯದಲ್ಲಿ ಅವರಿಗೆ ಜೀನ್ ಟಾಟ್ಲಾಕ್ ಎಂಬ ಯುವತಿಯ ಸ್ನೇಹ ಶುರುವಾಗಿ ೨ ಬಾರಿ ಮದುವೆಯ ಪ್ರಸ್ತಾಪದ ತನಕವೂ ಹೋಗಿದ್ದಿತು. ಆಕೆಯ ಜೊತೆ ಇವರು ಕಮ್ಯುನಿಸ್ಟ್ ಪಕ್ಷದ ಸಭೆಗಳಿಗೆ ಹೋಗುತ್ತಿದ್ದರು. ಹಾಗೂ ಆ ಪಕ್ಷಕ್ಕೆ ಪರೋಕ್ಷವಾಗಿ ಹಣ ಸಹಾಯ ಮಾಡುತ್ತಿದ್ದರು; ೧೯೩೭ರಲ್ಲಿ ಅವರ ತಂದೆಯ ನಿಧನದ ನಂತರ ಇವರ ಹಣಕಾಸು ಸ್ಥಿತಿ ಬಹಳ ಸುಧಾರಿಸಿದ್ದು, ಆ ಧನಸಹಾಯ ಇನ್ನೂ ಹೆಚ್ಚಿತು. ಅನಂತರ ೧೯೩೯ರಲ್ಲಿ ಕ್ಯಾಥರೀನ್ ಎಂಬ ವಿಧವೆಯ ಜೊತೆ ಸ್ನೇಹ ಶುರುವಾಗಿ ಇಬ್ಬರೂ ಮದುವೆಯಾದರು. ಕ್ಯಾಥರೀನ್ ಅಲ್ಲದೆ ರಾಬರ್ಟರ ತಮ್ಮ ಫ್ರ್ಯಾಂಕ್ ಕೂಡ ಕಮ್ಯುನಿಸ್ಟ್ ಪಕ್ಷಕ್ಕೆ ಸದಸ್ಯರಾಗಿದ್ದರು.

**೨) ಬಾಂಬ್**

೧೯೩೦ರ ದಶಕದಲ್ಲಿ ಹೊಸ ಕ್ಷೇತ್ರವಾದ ಬೈಜಿಕ ವಿಜ್ಞಾನದಲ್ಲಿ ಬಹಳ ಪ್ರಯೋಗಗಳು ನಡೆಯುತ್ತಿದ್ದು, ಅವುಗಳಲ್ಲಿ ಒಂದು ಪ್ರಯೋಗದಲ್ಲಿ ಅಗಾಧ ಶಕ್ತಿಯ ಉದ್ಭವ ಕಂಡುಬಂದಿತು. ಅದೇ "ಬೈಜಿಕ ವಿದಳನ (ನ್ಯೂಕ್ಲಿಯರ್ ಫಿಷನ್)." ಈ ಪ್ರಕ್ರಿಯೆಯನ್ನು ಸತತವಾಗಿ ನಡೆಸಿದ್ದಲ್ಲಿ ಹಿಂದೆ ಕಾಣದಷ್ಟು ಅಪಾರ ಶಕ್ತಿ ಹೊರಬರುವ ಸಾಧ್ಯತೆಯನ್ನು ವಿಜ್ಞಾನಿಗಳು ಗುರುತಿಸಿದರು. ಇದರ ಬಗ್ಗೆ ೧೯೩೯ರ ಆಗಸ್ಟ್ ತಿಂಗಳಲ್ಲಿ ಆಲ್ಬರ್ಟ್ ಐನ್‌ಸ್ಟೈನ್ ಅಮೆರಿಕದ ಅಧ್ಯಕ್ಷ ರೂಸ್‌ವೆಲ್ಟ್‌ಗೆ ಒಂದು ಪತ್ರ ಬರೆದರು. ಅದರ ಸಾರಾಂಶ : 'ಪರಮಾಣುವನ್ನು ಒಡೆಯುವುದರಿಂದ ಮಹಾಶಕ್ತಿಯನ್ನು ಉಂಟುಮಾಡಬಹುದು. ಜರ್ಮನರು ಈ ಶಕ್ತಿಯನ್ನು ಉಪಯೋಗಿಸಿಕೊಂಡು ಬಾಂಬನ್ನು ತಯಾರಿಸುವ ಮುಂಚೆ ಅಮೆರಿಕ ಈ ಅಸ್ತ್ರವನ್ನು ತಯಾರಿಸಬೇಕು !' ಯುರೇನಿಯಮ್ ಮೂಲಧಾತುವಿನಲ್ಲಿ ಈ ಸರಪಳಿ ಕ್ರಿಯೆ ನಿಜವಾಗಿಯೂ ನಡೆಯುತ್ತದೆ ಎಂದು ಶಿಕಾಗೋದಲ್ಲಿ ಎನ್ರಿಕೊ ಫರ್ಮಿಯವರ ನೇತೃತ್ವದಲ್ಲಿ ನಡೆದ ಪ್ರಯೋಗ ತೋರಿಸಿತು. ಆದ್ದರಿಂದ ಈ ಪ್ರಕ್ರಿಯೆಯಿಂದ ವಿನಾಶಕಾರಿ ಅಸ್ತ್ರವನ್ನು ತಯಾರಿಸಬಹುದೆಂಬ ನಂಬಿಕೆ ಹುಟ್ಟಿತು.

೧೯೪೧ ಅಕ್ಟೋಬರ್‌ನಿಂದ ಓಪನ್‌ಹೈಮರ್ ಪರಮಾಣು ಬಾಂಬಿನ ಬಗ್ಗೆ ಕೆಲವು ಸೈದ್ಧಾಂತಿಕ ಚಿಂತನೆಗಳನ್ನು ಮಾಡುತ್ತಿದ್ದರು. ಸರ್ಕಾರ ಈ ಪರಮಾಣು ಬಾಂಬಿನ ಯೋಜನೆಯನ್ನು ಮಿಲಿಟರಿಯವರಿಗೆ ವಹಿಸಿ ಜನರಲ್ ಗ್ರೋವರ್ ಎನ್ನುವರನ್ನು ಮುಖ್ಯಸ್ಥರನ್ನಾಗಿ ಮಾಡಿತು. ಓಪನ್‌ಹೈಮರ್ ಕಮ್ಯುನಿಸ್ಟ್ ಹಿನ್ನೆಲೆ ಹೊತ್ತಿದ್ದರೂ ಅವರ ಸಾಮರ್ಥ್ಯದ ಎದುರು ಅದು ಮುಖ್ಯವೆನಿಸದೆ ೧೯೪೨ರಲ್ಲಿ ಅವರನ್ನು 'ಮ್ಯಾನ್‌ಹ್ಯಾಟನ್ ಪ್ರಾಜೆಕ್ಟ್‌ನ ನಿರ್ದೇಶಕರಾಗಿ ನೇಮಿಸಲಾಯಿತು. ಈ ಗುಟ್ಟಿನ ಕೆಲಸಕ್ಕೆ ಮತ್ತು ಎಲ್ಲ ಕೆಲಸಗಾರರನ್ನೂ ಒಟ್ಟಿಗೆ ಇಡಲು ಜನನಿಬಿಡ ನ್ಯೂ ಮೆಕ್ಸಿಕೋ ಪ್ರಾಂತ್ಯದ ಪರ್ವತ ಪ್ರದೇಶದ ಲಾಸ್ ಅಲಮೋಸ್ ಎಂಬ ಜಾಗವನ್ನು ಆಯ್ಕೆ ಮಾಡಿದರು. ಓಪನ್‌ಹೈಮರ್ ಅವರಿಗಿಂತ ಹೆಚ್ಚು ಮೇಧಾವಿ ವಿಜ್ಞಾನಿಗಳು ಅವರ ಕೆಳಗೆ ಕೆಲಸ ಮಾಡಲು ಒಪ್ಪದಿರಬಹುದು ಎಂಬ ಅನುಮಾನ ಮೊದಲು ಇದ್ದಿತು. ಆದರೆ ಓಪನ್ ಹೈಮರ್ ವಿಜ್ಞಾನವೊಂದೇ ಅಲ್ಲದೆ ಎಲ್ಲ ತರಹದ ವಿಷಯಗಳನ್ನೂ ಅರಗಿಸಿಕೊಳ್ಳುವ ಸಾಮರ್ಥ್ಯ

**ಅಭಿನಂದನೆ...**

ಉಡುಪಿಯ ರಾಷ್ಟ್ರಕವಿ ಗೋವಿಂದ ಪೈ ಸಂಶೋಧನಾ ಕೇಂದ್ರದವರು ಕೊಡಮಾಡುವ 'ಸೇಡಿಯಾಪು ಪ್ರಶಸ್ತಿ'ಯು ೨೦೧೭ರ ಸಾಲಿಗಾಗಿ ಸಾಹಿತಿಯಾದ ಗಿರಡ್ಡಿ ಗೋವಿಂದರಾಜು ಅವರಿಗೆ ಲಭಿಸಿದೆ. ಸಾಹಿತಿಗೆ 'ಹೊಸತು' ಹಾಗೂ 'ನವಕರ್ನಾಟಕ'ದ ಅಭಿನಂದನೆಗಳು.

ಹೊಂದಿದ್ದು, ಎಲ್ಲರ ಗೌರವವನ್ನೂ ಗಳಿಸಿದ್ದರು. ಅವರಿಗೆ ಒಳ್ಳೆಯ ಜ್ಞಾಪಕಶಕ್ತಿಯ ಜೊತೆ ಆಕರ್ಷಕ ವ್ಯಕ್ತಿತ್ವವೂ ಇದ್ದಿತು. ಅವರಲ್ಲಿ ಅಪಾರ ಆಕಾಂಕ್ಷೆ ಇದ್ದಿದ್ದನ್ನೂ ಗ್ರೋವರ್ ಗುರುತಿಸಿ ಅವರಿಗೆ ಎಲ್ಲ ವಿಷಯಗಳಲ್ಲೂ ಬೆಂಬಲ ಕೊಟ್ಟರು. ಅಲ್ಲಿ ಮುಂದೆ ಕೆಲಸ ಮಾಡಿದ ವಿಜ್ಞಾನಿ ವಿಕ್ಟರ್ ವೈಸ್ ಕಾಫ್ ಓಪನ್‌ಹೈಮರ್ ಬಗ್ಗೆ ಹೀಗೆ ಬರೆದಿದ್ದಾರೆ: "ಅವರು ತಮ್ಮ ಕೋಣೆಯಲ್ಲಿ ಕುಳಿತು ದರ್ಬಾರು ನಡೆಸುತ್ತಿರಲಿಲ್ಲ. ಪ್ರತಿಯೊಂದು ಮುಖ್ಯ ಹೆಜ್ಜೆಯಲ್ಲೂ ಅವರ ಛಾಪು ಇದ್ದಿತು. ಕೆಲಸ ಮಾಡುವವರ ಬಳಿ ಹೋಗಿ ಚರ್ಚಿಸುತ್ತಿದ್ದರು. ವಿಷಯಗಳ ಮೂಲ ಸತ್ವವನ್ನು ತಿಳಿಯುವುದರಲ್ಲಿ ನಿಸ್ಸೀಮರಾಗಿದ್ದರು."

ಬಾಂಬಿನ ಯೋಜನೆ ಪ್ರಾರಂಭವಾದ ನಂತರ ಅವರು ನಿಧಾನವಾಗಿ ಕಮ್ಯುನಿಸ್ಟರ ಸಂಗವನ್ನು ತೊರೆಯಲು ಪ್ರಯತ್ನಪಟ್ಟರು. ಆದರೂ ೧೯೪೩ರಲ್ಲಿ ಒಂದು ಇಡೀ ರಾತ್ರಿ ಅವರು ಗೆಳತಿ ಜೀನ್ ಟಾಟ್ಲಾಕ್ ಅವರ ಜೊತೆ ಇದ್ದಿದ್ದನ್ನು ಗಮನಿಸಿದ ಗುಪ್ತ ಪೊಲೀಸರು ಅವರನ್ನು ಈ ಕಾರ್ಯದಿಂದ ತೆಗೆದುಹಾಕಲು ಒತ್ತಾಯ ಮಾಡಿದರು. ಮತ್ತೊಬ್ಬ ಕಮ್ಯುನಿಸ್ಟ್ ಗೆಳೆಯ ಬರ್ಕ್ಲಿ ವಿಶ್ವವಿದ್ಯಾಲಯದ ಚೆವಲಿಯರ್‌ರನ್ನು ಕೂಡ ಅವರು ಸಂಧಿಸುತ್ತಿದ್ದರು. ಆದರೂ "ಒಟ್ಟಿನಲ್ಲಿ ಅವರು ಖ್ಯಾತಿಯ ಬೆನ್ನು ಹತ್ತಿರುವುದರಿಂದ ಅವರಿಂದ ತೊಂದರೆ ಏನೂ ಇಲ್ಲ" ಎಂದು ಪರಿಗಣಿಸಲಾಗಿತ್ತು. ೧೯೪೪ರಲ್ಲಿ ಜೀನ್ ಟಾಟ್ಲಾಕ್ ಆತ್ಮಹತ್ಯೆ ಮಾಡಿಕೊಂಡರು; ಆಗ ಓಪನ್‌ಹೈಮರ್ ಬಹಳ ವ್ಯಥೆ ಪಟ್ಟಿದ್ದು ಕೂಡ ವರದಿಯಾಗಿತ್ತು. ಅವರದ್ದು ಆತ್ಮಹತ್ಯೆಯೋ ಅಥವಾ ಅಮೆರಿಕದ ಗುಪ್ತ ಪೊಲೀಸ್ ಕಡೆಯಿಂದ ನಡೆದ ಕೊಲೆಯೋ ಎನ್ನುವುದು ಕಡೆಗೂ ತಿಳಿಯಲೇ ಇಲ್ಲ. ಕೆಲ ಸಮಯದ ನಂತರ ಬರ್ಕ್ಲಿ ವಿಶ್ವವಿದ್ಯಾಲಯ ಚೆವಲಿಯರ್‌ರನ್ನು ಕೆಲಸದಿಂದ ತೆಗೆದುಹಾಕಿತು. ಈ ವಿಷಯಗಳೆಲ್ಲ ಆಗ ಮಹತ್ವವೆನಿಸದಿದ್ದರೂ ಮುಂದೆ ರಾಬರ್ಟರ ಕುತ್ತಿಗೆಗೆ ಸುತ್ತಿಕೊಳ್ಳಲಿದ್ದವು.

ಪ್ರಪಂಚದ ಅನೇಕ ಖ್ಯಾತ ವಿಜ್ಞಾನಿಗಳು ಈ ಕಾರ್ಯದಲ್ಲಿ ಭಾಗವಹಿಸಿದ್ದರು. ಅವರಲ್ಲಿ ಖ್ಯಾತನಾಮರಾದ ಎನ್ರಿಕೊ ಫರ್ಮಿ, ನೀಲ್ಸ್ ಬೋರ್, ಫೈನ್ ಮನ್, ಸೆಗ್ರೆ, ಟೆಲ್ಲರ್, ವಿಗ್ನರ್, ಬ್ಲಾಕ್, ಚಾಡ್ವಿಕ್, ಬೆಥೆ, ರಾಬರ್ಟ್ ವಿಲ್ಸನ್ ಮತ್ತು ಇತರರು ಇದ್ದರು. ಇವರಲ್ಲಿ ಅನೇಕರು ಆಗಲೇ ನೊಬೆಲ್ ಪ್ರಶಸ್ತಿ ಗಳಿಸಿದ್ದರು. ಇನ್ನು ಕೆಲವರು ಮುಂದೆ ಅದನ್ನು ಗಳಿಸಲಿದ್ದರು. ಪ್ಲುಟೋನಿಯಮ್ ಎಂಬ ಬೇರೆಯ ಪರಮಾಣು ನಿಂದಲೂ ಈ ಪರಮಾಣು ಶಕ್ತಿ ಹೊರತೆಗೆಯಬಹುದು ಎಂದು ಗೊತ್ತಾಗಿತ್ತು. ಟ್ರಿನಿಟಿ ಪರೀಕ್ಷೆಯ ನಂತರ ಶತ್ರುಸೇನೆಯ ಮೇಲೆ ಹಾಕಲು ಎರಡು-ಒಂದು ಯುರೇನಿಯಮ್, ಮತ್ತೊಂದು ಪ್ಲುಟೋನಿಯಮ್ ಬಾಂಬುಗಳನ್ನು ತಯಾರಿಸಲಾಯಿತು. ಅಲಮೊಗೊರ್ಡೊ ಪರೀಕ್ಷೆಯ ಮೊದಲೇ ಅಧ್ಯಕ್ಷ ರೂಸ್‌ವೆಲ್ಟ್ ಮೃತರಾಗಿ ಟ್ರೂಮನ್ ಪದವಿಗೆ ಬಂದಿದ್ದರು. ಅದಲ್ಲದೆ ಮೇ ತಿಂಗಳಲ್ಲಿ ಜರ್ಮನಿ ಶರಣಾಗಿತ್ತು. ಈಗ ಉಳಿದಿದ್ದ ಶತ್ರು ದೇಶ ಜಪಾನ್ ಒಂದೇ. ತಯಾರಿಸಿದ ಬಾಂಬನ್ನು ಉಪಯೋಗಿಸಬೇಕೇ, ಬೇಡವೇ ಎಂಬ ಚರ್ಚೆಗಳು ನಡೆದು ಕಡೆಯಲ್ಲಿ ಅಮೆರಿಕಾ ಆಗಸ್ಟ್ ೬ರಂದು ಯುರೇನಿಯಮ್ ಬಾಂಬನ್ನು ಹಿರೋಷಿಮಾ ನಗರದ ಮೇಲೆ ಮತ್ತು ಮೂರೇ ದಿನಗಳ ನಂತರ ನಾಗಸಾಕಿಯ ಮೇಲೆ ಪ್ಲುಟೋನಿಯಮ್ ಬಾಂಬನ್ನು ಹಾಕಿತು. ಈ ಎರಡೂ ಬಾಂಬುಗಳಿಗೆ ಒಟ್ಟಿನಲ್ಲಿ ೨ ಲಕ್ಷಕ್ಕೂ ಹೆಚ್ಚು ಜನ ಆಹುತಿಯಾಗಿದ್ದರು !




ನವಕರ್ನಾಟಕ ಪ್ರಕಟಿಸಿರುವ ಕೋ.ಚೆ. ಅವರ "ಬೇಡಿ ಕಳಚಿತು ದೇಶ ಒಡೆಯಿತು – ಕೃತಿ ಪರಿಚಯ" ಪುಸ್ತಕವನ್ನು ದಿ. ೨೩.೦೪.೨೦೧೮ರಂದು ಬೆಂಗಳೂರಿನ ರಾವ್ ಬಹದ್ದೂರ್ ಧರ್ಮಪ್ರವರ್ತ ಗುಬ್ಬಿ ತೋಟದಪ್ಪ ಧರ್ಮಸಂಸ್ಥೆಯಲ್ಲಿ ಲೋಕಾರ್ಪಣೆ ಮಾಡಲಾಯಿತು. ವೇದಿಕೆಯಲ್ಲಿ ಶ್ರೀ ಎಲ್. ರೇವಣ ಸಿದ್ಧಯ್ಯ, ಡಾ॥ ಕೋ.ಚೆ., ಪ್ರೊ॥ ಎಚ್. ಪಿ. ಖಿಂಚ, ಜಸ್ಟಿಸ್ ಶ್ರೀ ಪಿ. ವಿಶ್ವನಾಥ ಶೆಟ್ಟಿ, ಶ್ರೀ ಲಕ್ಷ್ಮಣ ಕೊಡಸೆ ಮುಂತಾದವರು ಉಪಸ್ಥಿತರಿದ್ದರು.



ಐನ್‌ಸ್ಟೈನ್ ಮತ್ತು ಓಪನ್‌ಹೈಮರ್

### (೩) ವಿಜ್ಞಾನಿ ಮತ್ತು ರಾಜಕೀಯ

೧೯೪೫ರ ನಂತರ ಓಪನ್‌ಹೈಮರ್ ಅವರ ಚಿತ್ರಗಳು ಮತ್ತು ಅವರ ಹೇಳಿಕೆಗಳು ಪತ್ರಿಕೆಗಳಲ್ಲಿ ಪ್ರಕಟವಾಗುತ್ತಿದ್ದು, ವೈಜ್ಞಾನಿಕ ವಲಯಗಳ ಹೊರಗೂ ಖ್ಯಾತಿ ಗಳಿಸಿ, ಜನ ಅವರನ್ನು ನಾಯಕನ ರೀತಿ ನೋಡಲು ಶುರು ಮಾಡಿದರು. ಪರಮಾಣು ಬಾಂಬಿಗೆ ಸಂಬಂಧಪಟ್ಟ ಹಲವಾರು ಸರ್ಕಾರಿ ಸಮಿತಿಗಳಲ್ಲಿ ಮುಖ್ಯಸ್ಥರಾಗಿ ಅಥವಾ ಸದಸ್ಯರಾಗಿ ಭಾಗವಹಿಸುತ್ತಿದ್ದರು. ಬಾಂಬಿನ ವಿನಾಶಕಾರಿ ಗುಣಗಳ ಪರಿಚಯ ಹತ್ತಿರದಿಂದಿದ್ದು ಬಾಂಬಿನ ತಯಾರಿಕೆ ಅನೇಕ ರಾಷ್ಟ್ರಗಳಲ್ಲಿ ಪ್ರಾರಂಭವಾಗಬಹುದೆಂಬ ಭಯ ಅವರಿಗಿತ್ತು. ಅದನ್ನು ಬಹಳ ಕಡೆ ವ್ಯಕ್ತಪಡಿಸಿ ಪರಮಾಣು ಶಕ್ತಿಯ ನಿಯಂತ್ರಣ ಅತಿ ಅವಶ್ಯ ಎಂದು ಪ್ರಚಾರ ಮಾಡಿದರು. ಪರಮಾಣು ಸಂಬಂಧದ ಯಾವ ಪ್ರಯೋಗಗಳೂ ಗುಟ್ಟಾಗಿ ನಡೆಸಬಾರದು ಮತ್ತು ಸರ್ಕಾರ ಈ ವಿಷಯಗಳನ್ನು ಪ್ರಜೆಗಳ ಮುಂದೆ ಇಡಬೇಕು ಎಂದು ಕೂಡ ಒತ್ತಾಯ ಮಾಡಿದರು. ಪರಮಾಣು ಬಾಂಬಿನ ನಂತರ ಜಲಜನಕ ಬಾಂಬಿನ ಪ್ರಸ್ತಾವನೆ ಪ್ರಾರಂಭವಾಗಿದ್ದು,



*ಬಾಂಬಿನ ಯೋಜನೆಯ ಮುಖ್ಯಾಧಿಕಾರಿ ಗ್ರೋವರ್, ಓಪನ್‌ಹೈಮರ್*

ಇದು ಬಹಳ ಹೆಚ್ಚು ವಿನಾಶಕಾರಿ ಎಂದು ಖಂಡಿಸಿದರು. ಆದರೂ ೧೯೫೧ರಲ್ಲಿ ಟೆಲ್ಲರ್ ಮತ್ತು ಇತರರು ಜಲಜನಕ ಬಾಂಬನ್ನು ತಯಾರಿಸುವುದರಲ್ಲಿ ಸಫಲರಾದರು.

ಅಮೇರಿಕದ ಅಧ್ಯಕ್ಷ ಟ್ರೂಮನ್ ಅವರಿಗೆ ಓಪನ್‌ಹೈಮರ್ 'ನಮ್ಮ (ವಿಜ್ಞಾನಿಗಳ) ಕೈಗಳು ರಕ್ತಸಿಕ್ತವಾಗಿವೆ' ಎಂದಾಗ ಅವರು 'ಕೈ ತೊಳೆದುಕೊಂಡರೆ ರಕ್ತ ಹೊರಟು ಹೋಗುತ್ತೆ' ಎಂದರಂತೆ; ಅದಲ್ಲದೆ ಅವರ ವಿಶ್ವಶಾಂತಿಯ ಮೇಲಿನ ಒತ್ತು ಅಧ್ಯಕ್ಷರಿಗೆ ಸರಿಬರದೆ 'ಆ ಮನುಷ್ಯ ಮುಂದೆ ನನ್ನನ್ನು ಸಂಧಿಸುವುದು ಬೇಡ' ಎಂದು ಆದೇಶ ಕೊಟ್ಟರಂತೆ! ಹೀಗೆಯೆ ತನ್ನ ನಂಬಿಕೆಗಳು ಮತ್ತು ಧೋರಣೆಗಳಿಂದ ಓಪನ್‌ಹೈಮರ್ ಹಲವಾರು ಪ್ರಭಾವಶಾಲಿ ವ್ಯಕ್ತಿಗಳ ದ್ವೇಷವನ್ನು ಸಂಪಾದಿಸಿದರು. ಅವರಲ್ಲಿ ಗುಪ್ತಚರ ಸಂಸ್ಥೆ ಎಫ್. ಬಿ. ಐ.ನ ಎಡ್ಗರ್ ಹೂವರ್, ಪರಮಾಣು ಸಮಿತಿಯ ಅಧ್ಯಕ್ಷ ಸ್ಟ್ರಾಸ್ ಮತ್ತು ಕಮ್ಯುನಿಸ್ಟ್ ದ್ವೇಷಿ ಸೆನೆಟರ್ ಮೆಕಾರ್ಥಿ ಮುಖ್ಯರು. ೧೯೫೩ರಲ್ಲಿ ಓಪನ್‌ಹೈಮರ್ ಕಮ್ಯುನಿಸ್ಟ್ ಪಕ್ಷಪಾತಿಯೆಂದೂ ಅಮೇರಿಕದ ಹಿತಕ್ಕೆ ವಿರೋಧಿ ಎಂದೂ ಆಪಾದನೆಗಳು ಬಂದವು. ಜಲಜನಕ ಬಾಂಬನ್ನು ಅವರು ವಿರೋಧಿಸಿದ್ದೂ ಈ ಆಪಾದನೆಗಳಿಗೆ ಸಹಾಯವಾಗಿ ಸೂಕ್ಷ್ಮ ವಿಷಯಗಳ ಚರ್ಚೆಗಳಿಂದ ಅವರನ್ನು ಹೊರಗಿಡಲು ಸರ್ಕಾರ ನಿರ್ಧರಿಸಿ ೧೯೫೪ ಏಪ್ರಿಲ್‌ನಲ್ಲಿ ಅವರ ವಿಚಾರಣೆಯನ್ನು ಶುರು ಮಾಡಿತು. ೩ ವಾರ ನಡೆದ ಆ ವಿಚಾರಣೆಯಲ್ಲಿ ೪೦ ಮಂದಿ ಸಾಕ್ಷಿ ಹೇಳಿದರು. ಓಪನ್‌ಹೈಮರ್‌ರ ಹಿಂದಿನ ಜೀವನದ ಕಮ್ಯುನಿಸ್ಟ್ ಸಹಾನುಭೂತಿಯ ಬಗ್ಗೆ ಅನೇಕ ಚರ್ಚೆಗಳು ನಡೆದವು. ಓಪನ್‌ಹೈಮರ್ ಹಲವಾರು ವಿಷಯಗಳಲ್ಲಿ ಸರಿಯಾದ ವಿವರಣೆಯನ್ನು ಕೊಡಲಾಗಲಿಲ್ಲ. ಅವರನ್ನು ತೀವ್ರವಾಗಿ ಖಂಡಿಸಿದವರು ಹಿಂದೆ ಅವರ ಜೊತೆ ಕೆಲಸ ಮಾಡಿದ್ದ ವಿಜ್ಞಾನಿ ಎಡ್ವರ್ಡ್ ಟೆಲ್ಲರ್, "ಬಹಳ ವಿಷಯಗಳಲ್ಲಿ ಅವರ ಧೋರಣೆ ನನಗೆ ಅರ್ಥವಾಗಲಿಲ್ಲ. ಅವರ ಮನಸ್ಸಿನಲ್ಲಿ ಬಹಳ ಗೊಂದಲಗಳಿದ್ದವು. ಇಂತಹವರ ಕೈಯಲ್ಲಿ ರಾಷ್ಟ್ರದ ಹಿತಾಸಕ್ತಿಗಳು ಇದ್ದರೆ ಕಷ್ಟವಾಗುತ್ತದೆ" ಎಂದಿದ್ದರು. ಓಪನ್‌ಹೈಮರ್‌ರ ವಿಚಾರಣೆಯನ್ನು ಆಲ್ಬರ್ಟ್ ಐನ್‌ಸ್ಟೈನ್, ವರ್ನರ್ ವಾನ್ ಬ್ರಾವುನ್, ಇಸಡೋರ್, ರಾಬಿ ಮತ್ತು ಇತರರು ಖಂಡಿಸಿದರು. ಏನೇ ಆದರೂ ಕಡೆಯಲ್ಲಿ ಸರ್ಕಾರ ಅವರಿಗೆ ಕೊಟ್ಟಿದ್ದ ರಕ್ಷಣಾ ರಹದಾರಿಯನ್ನು ವಾಪಸ್ಸು ತೆಗೆದುಕೊಂಡಿತು. ಸರ್ಕಾರದ ಕಣ್ಣಿನಲ್ಲಿ ಓಪನ್‌ಹೈಮರ್ ಕೆಳಗೆ ಇಳಿದರೂ ವೈಜ್ಞಾನಿಕ ವಲಯಗಳು ಮತ್ತು ಅಮೇರಿಕದ ಪ್ರಜೆಗಳು ಅವರಿಗೆ ಗೌರವ ಕೊಡುವುದನ್ನು ನಿಲ್ಲಿಸಲಿಲ್ಲ.

ಈ ಘಟನೆಯ ನಂತರ ಓಪನ್‌ಹೈಮರ್ ತಮ್ಮ ಜೀವನವನ್ನು ವಿಜ್ಞಾನಕ್ಕೆ ಪೂರ್ತಿ ಮುಡುಪಾಗಿಟ್ಟರು. ೧೯೪೭ರಲ್ಲಿಯೇ ಅವರು ಅಮೇರಿಕದ ಪ್ರಿನ್ಸ್‌ಟನ್‌ನಲ್ಲಿ ಆಲ್ಬರ್ಟ್ ಐನ್‌ಸ್ಟೈನ್ ಕೆಲಸ ಮಾಡುತ್ತಿದ್ದ 'ಉನ್ನತ ಅಧ್ಯಯನಗಳ ಸಂಸ್ಥೆಯ' ನಿರ್ದೇಶಕರಾಗಿದ್ದರು. ೧೯೩೦ರ ದಶಕದಲ್ಲಿ ಕ್ಯಾಲಿಫೋರ್ನಿಯಾದ ವಿದ್ಯಾಲಯಗಳಲ್ಲಿ ಭೌತವಿಜ್ಞಾನ ಪ್ರಮುಖ ಅಧ್ಯಯನವಾಗಲು ಶ್ರಮಪಟ್ಟಂತೆಯೇ ಈಗ ಅವರು ಪ್ರಿನ್ಸ್‌ಟನ್‌ನಲ್ಲಿ ಅಮೇರಿಕದ ವಿಜ್ಞಾನದ ಏಳಿಗೆಗೆ ಮತ್ತೆ ಕಾರ್ಯಮಗ್ನರಾದರು. ವಿಜ್ಞಾನವಲ್ಲದೆ ಇತರ ಕ್ಷೇತ್ರಗಳ ಪಂಡಿತರನ್ನೂ (ಉದಾಹರಣೆ : ಇಂಗ್ಲಿಷ್ ಸಾಹಿತ್ಯದ ಟಿ. ಎಸ್. ಎಲಿಯಟ್) ಕರೆಸಿ ಅವರಿಗೆ ಅಲ್ಲಿರಲು ಏರ್ಪಾಟು ಮಾಡಿದರು. ಹೊರದೇಶದಿಂದ ಮತ್ತು ಅಮೇರಿಕದ ಇತರ ವಿದ್ಯಾಲಯಗಳಿಂದ ಅನೇಕ ವಿಜ್ಞಾನಿಗಳನ್ನು ಕರೆಸಿ, ಚರ್ಚೆಗಳನ್ನು ನಡೆಸಿದರು, ಅವರುಗಳಿಗೆ ಅಲ್ಲೇ ಇರಲು ಅವಕಾಶ ಕೊಟ್ಟರು. ೧೯೬೦ರಲ್ಲಿ ಜಾನ್ ಕೆನೆಡಿ ಅಮೇರಿಕದ ಅಧ್ಯಕ್ಷರಾದ ನಂತರ ಓಪನ್‌ಹೈಮರ್ ಬಗ್ಗೆ ಸರ್ಕಾರಿ ಧೋರಣೆಗಳು ಬದಲಾಗಿ ೧೯೬೩ರಲ್ಲಿ ಅಧ್ಯಕ್ಷ ಜಾನ್ಸನ್, ಅವರಿಗೆ ದೇಶದ ಅತಿ ಉನ್ನತ ಫರ್ಮಿ ಪ್ರಶಸ್ತಿಯನ್ನು ಕೊಟ್ಟರು. ಅದನ್ನು ಸ್ವೀಕರಿಸುತ್ತಾ ಓಪನ್‌ಹೈಮರ್ ಈ ಪ್ರಶಸ್ತಿಯನ್ನು ಕೊಡಲು ಅಧ್ಯಕ್ಷರಿಗೆ ಬೇಕಾಗಿದ್ದ ಧೈರ್ಯವನ್ನು ಪ್ರಶಂಸಿಸಿದರು. ೧೯೬೭ ಫೆಬ್ರವರಿಯಲ್ಲಿ ಗಂಟಲಿನ ಕ್ಯಾನ್ಸರಿಗೆ ತುತ್ತಾದರು.

ಓಪನ್‌ಹೈಮರ್ ಅವರ ಜೀವನ ಒಬ್ಬ ದುರಂತ ನಾಯಕನದ್ದು ಎಂದು ಕೆಲವರು ಅಭಿಪ್ರಾಯಪಡುತ್ತಾರೆ. ಅವರ ಪ್ರಿಯ ಸ್ನೇಹಿತೆ ಜೀನ್ ಆತ್ಮಹತ್ಯೆ ಮಾಡಿಕೊಂಡಿದ್ದೂ ಅವರ ವೈಯಕ್ತಿಕ ಜೀವನದ ಒಂದು ಮುಖ್ಯ ದುರಂತ. ಸತತವಾಗಿ ಸಿಗರೇಟು ಸೇದುತ್ತಿದ್ದು, ಸಮಸ್ಯೆಗಳಿದ್ದಾಗ ಊಟ-ತಿಂಡಿ ಮರೆಯುವ ಉತ್ಕಟತೆ ಇದ್ದಿತು. ಬಹಳ ಆಕಾಂಕ್ಷೆಯೂ ಇದ್ದಿತು, ಆದರೂ ಎಲ್ಲೋ ಅದು ಮುಖ್ಯವಲ್ಲ ಎಂಬ ಅರಿವೂ ಇದ್ದಿತು. ಅಂತೂ ಯಾವುದೋ ಅನಾಥಪ್ರಜ್ಞೆ ಅವರನ್ನು ಜೀವನಪರ್ಯಂತ ಕಾಡಿಸಿದ್ದಿರಬಹುದು. ಅವರ ಸ್ನೇಹಿತ ವಿಜ್ಞಾನಿ ಇಸಿಡೊರ್ ರಾಬಿ, "ಹಿಂದೂ ಧರ್ಮದಲ್ಲಿ ಅವರಿಗೆ ಬಹಳ ಆಸಕ್ತಿ ಇದ್ದಿತು. ಅವರಿಗೆ ಅವರು ಯಾರು ಎಂದು ತಿಳಿದಿರಲಿಲ್ಲ" ಎಂದಿದ್ದರು. ಅವರ ಬುದ್ಧಿಶಕ್ತಿ ಅಪಾರವಾಗಿದ್ದರೂ ವಿಜ್ಞಾನದಲ್ಲಿ ಅವರು ಇನ್ನೂ ಹೆಚ್ಚು ಸಾಧಿಸಬಹುದಿತ್ತು ಎಂದು ಕೆಲವರು ಅಭಿಪ್ರಾಯಪಟ್ಟಿದ್ದರು. ಖ್ಯಾತ ವಿಜ್ಞಾನಿ ಡಿರಾಕ್ ಅವರಿಗೆ, "ಸಾಹಿತ್ಯ-ಗೀಹಿತ್ಯ ಬಿಟ್ಟು ವಿಜ್ಞಾನದ ಬಗ್ಗೆ ನೀನು ಕೇಂದ್ರೀಕರಿಸಿದರೆ ಇನ್ನೂ ಮಹತ್ವದ ಸಂಶೋಧನೆಗಳು ಹೊರಬರಬಹುದು" ಎಂದು ಹೇಳಿದ್ದರು. ಅವರ ಮತ್ತೊಬ್ಬ ಕಿರಿಯ ಸಹೋದ್ಯೋಗಿ ಮುರ್ರೇ ಗೆಲ್ಮನ್ "ಹಲವಾರು ಮುಖ್ಯ ವಿಚಾರಧಾರೆಗಳನ್ನು ಅವರು ಶುರುಮಾಡಿದರೂ ಯಾವ ಸಂಶೋಧನೆಯನ್ನೂ ಬಹಳ ಕಾಲ ಮುಂದುವರಿಸುತ್ತಿರಲಿಲ್ಲ. ಆದರೆ ಇತರರಿಗೆ ಒಳ್ಳೆಯ ಸ್ಫೂರ್ತಿಯಾಗಿದ್ದರು" ಎಂದಿದ್ದರು. "ಬಾಂಬಿನ ತಯಾರಿಕೆಯ ಬಗ್ಗೆ ನನಗೆ ಯಾವ ಪಶ್ಚಾತ್ತಾಪವೂ ಇಲ್ಲ. ಆದರೆ ಜಪಾನಿನ ಮೇಲೆ ಬಾಂಬ್ ಹಾಕಿದ್ದು ನನಗೆ ಸರಿ ಎನಿಸುವುದಿಲ್ಲ. ಜಪಾನಿಗೆ, ಪ್ರಪಂಚಕ್ಕೆ ಈ ಬಾಂಬಿನ ಬಗ್ಗೆ ಎಚ್ಚರಿಕೆ ನೀಡಬಹುದಾಗಿತ್ತು" ಎಂದಿದ್ದರು. ಸಾಯುವ ಕೆಲವು ತಿಂಗಳುಗಳ ಹಿಂದೆ ಅವರ ವಿದ್ಯಾರ್ಥಿ ಬೋಮ್‌ರಿಗೆ "ಜವಾಬ್ದಾರಿ ಮತ್ತು ಪಶ್ಚಾತ್ತಾಪದ ಮಧ್ಯೆ ನನ್ನ ಜೀವನದ ಕೆಲ ಭಾಗ ಕಳೆದುಹೋಯಿತು" ಎಂದಿದ್ದರಂತೆ. ಜೀವನ ವಿಜ್ಞಾನ ಮಾತ್ರವಲ್ಲ. ಆದರೆ ವಿಜ್ಞಾನಕ್ಕೆ ಅದರದ್ದೇ ಸೌಂದರ್ಯವಿದೆ ಎಂಬ ಅಭಿಪ್ರಾಯವನ್ನು ಹಲವಾರು ಬಾರಿ ವ್ಯಕ್ತಪಡಿಸಿದ್ದ ಈ ವ್ಯಕ್ತಿ ೨೦ನೆಯ ಶತಮಾನದ ಸ್ವಾರಸ್ಯಕರ ವಿಜ್ಞಾನಿಗಳಲ್ಲಿ ಒಬ್ಬರಾಗಿದ್ದರು. ಇಂದು ಅಮೇರಿಕ ಭೌತವಿಜ್ಞಾನದಲ್ಲಿ ಮೊದಲನೆಯ ಸ್ಥಾನದಲ್ಲಿರಲು ರಾಬರ್ಟ್ ಓಪನ್‌ಹೈಮರ್ ಮುಖ್ಯ ಕಾರಣರು.

*(ಆಕರ ಅಂತರಜಾಲ ತಾಣಗಳು : ಇಲ್ಲಿನಾಯ್.ಎಡು, ನ್ಯೂಕ್ಲಿಯರ್‌ಸೀಕ್ರೆಸಿ.ಕಾಮ್, ಅಟಾಮಿಕ್ ಹೆರಿಟೇಜ್, ಪ್ಲಾಸಿನ್.ಕಾಮ್)*



*ಓಪನ್‌ಹೈಮರರನ್ನು ವಿರೋಧಿಸಿದ ಖ್ಯಾತ ವಿಜ್ಞಾನಿ, ಜಲಜನಕ ಬಾಂಬಿನ ಶೋಧಕ, ಎಡ್ವರ್ಡ್ ಟೆಲ್ಲರ್*

**ಪಾಲಹಳ್ಳಿ ವಿಶ್ವನಾಥ್**
ನಂ. ೯, ಕಾಳಪ್ಪ ರಸ್ತೆ, ಬಸವನಗುಡಿ, ಬೆಂಗಳೂರು – ೫೬೦ ೦೦೪

# ಜನಪದ ಸಂಗೀತ ಮತ್ತು ರಾಷ್ಟ್ರೀಯ ಚಳುವಳಿಗಳು

ಶ್ವೇತಾ ಎಂ. ಬಿ.

**ಜನಪದ ಸಂಗೀತವು ಅತ್ಯಂತ ಪ್ರಭಾವೀ ಮಾಧ್ಯಮವಾಗಿ ಕೆಲಸ ಮಾಡಿದೆ. ಜನಪದ ಸಂಗೀತ ಸಾಮಾಜಿಕರಲ್ಲಿ ಉಂಟುಮಾಡುತ್ತಿದ್ದ ಎಚ್ಚರ ಹೋರಾಟಕ್ಕೆ ನೀಡುತ್ತಿದ್ದ ಸ್ಫೂರ್ತಿ–ಪ್ರೇರಣೆ ಅಪಾರವಾದದ್ದು. ಗೀಗೀ–ಲಾವಣಿಗಳಂಥ ಪ್ರಕಾರಗಳನ್ನು ಗಾಯಕರು ತಮ್ಮ ಜೋರು ಕಂಠದಿಂದ ದನಿಯೆತ್ತಿ ಹಾಡುವಾಗ ಎಂಥ ಕೇಳುಗನಾದರೂ ಅವುಗಳ ಪರಿಣಾಮಕ್ಕೆ ಒಳಗಾಗಲೇಬೇಕು. ಹೀಗಾಗಿ ರಾಷ್ಟ್ರೀಯ ಚಳುವಳಿಗಳಿಗೆ ಜನಪದ ಸಂಗೀತವು ನೀಡಿದ ಕೊಡುಗೆ ಅತ್ಯಂತ ಮಹತ್ವದ್ದು.**

ಸಂಗೀತ ಒಂದು ಶಕ್ತಿ. ಅದು ಜಡವನ್ನು ಚೇತನಗೊಳಿಸಬಲ್ಲ, ಘನವನ್ನು ಮೆದುವಾಗಿಸಬಲ್ಲ ಶಕ್ತಿ! ಆದುದರಿಂದಲೇ ಸಂಗೀತವನ್ನು 'ತೆರಪಿ' ಎಂದು ಜಗತ್ತು ಒಪ್ಪಿಕೊಂಡಿರುವುದು. ಸಂಗೀತಕ್ಕೆ ಮನಸೋಲದವರು ಯಾರೂ ಇಲ್ಲ. ಮುಂದುವರಿದ ದೇಶಗಳಲ್ಲೆಲ್ಲ ಜನ ಇಂದು ಸಂಗೀತವನ್ನು ಒಂದು 'ಫ್ಯಾಷನ್' ಎನ್ನುವಂತೆ ಅದರ ಬೆನ್ನು ಹತ್ತಿದ್ದಾರೆ. ಇವೆಲ್ಲವುಗಳಿಗೆ ಕಾರಣ ಸಂಗೀತದ ಗುಣ. ಸಂಗೀತವನ್ನು ಗ್ರಹಿಸಲು ಶಾಸ್ತ್ರಬದ್ಧ ಕಲಿಕೆಯೇ ಅಗತ್ಯವಿಲ್ಲ ಎನ್ನುತ್ತದೆ ವಿಜ್ಞಾನ. ಹೀಗಾಗಿಯೇ ಶಾಸ್ತ್ರೀಯವಾಗಿ ಸಂಗೀತ ಕಲಿಯದವನೂ ಅದರ ಮೋಡಿಗೆ ಒಳಗಾಗಬಲ್ಲನು. ವಿಜ್ಞಾನದ ಪ್ರಕಾರ ಮೆದುಳಿಗೆ ವೈವಿಧ್ಯಮಯ ಲಯವನ್ನು ಗುರುತಿಸುವ ಶಕ್ತಿ ಇರುವುದರಿಂದ ಅನಕ್ಷರಸ್ಥರೂ ಸಂಗೀತದ ಸಾಂಗತ್ಯ ಪಡೆಯಬಹುದು. ಇದು ಒಬ್ಬ ವ್ಯಕ್ತಿಯ ವೈಯಕ್ತಿಕ ಗ್ರಹಣಶಕ್ತಿಯ ಮೇಲೂ ನಿರ್ದಿಷ್ಟ ಸ್ವರಗಳ ಕುರಿತಾದ ಆತನ ಆಸಕ್ತಿಯ ಮೇಲೂ ಅವಲಂಬಿತ ವಾಗಿರುತ್ತದೆ. ಹೀಗಾಗಿ ಸಂಗೀತ ಎನ್ನುವುದು ಸಾರ್ವಕಾಲಿಕವಾಗಿ, ಸರ್ವರ ಸ್ವತ್ತಾಗಿ ಈ ಜಗತ್ತಲ್ಲಿ ನೆಲೆ ಕಂಡಿದೆ. ಸಂಗೀತದ ಶಾಸ್ತ್ರೀಯ ಪ್ರಕಾರಗಳು ರೂಪುಗೊಳ್ಳುವ ಮೊದಲೇ ಅಸಂಖ್ಯಾತ ಸಂಗೀತ ನಮೂನೆಗಳು ಜನಪದರಲ್ಲಿದ್ದುದನ್ನು ನಾವು ಕಾಣುತ್ತೇವೆ. ಇಲ್ಲೆಲ್ಲ ಸಂಗೀತದ ಮೂಲ ಉದ್ದೇಶ ಸಂವಹನ. ಹೀಗಾಗಿ ಸಂಗೀತವು ಒಂದು ಪ್ರಭಾವೀ ಸಂವಹನ ಮಾಧ್ಯಮ. ಅದರಲ್ಲೂ ಜನಪದರು ಈ ಸಂಗೀತವನ್ನು ಸಂವಹನ ಮಾಧ್ಯಮವನ್ನಾಗಿ ಬಳಸಿಕೊಂಡ ಬಗೆ ಅಚ್ಚರಿ ಮೂಡಿಸುತ್ತದೆ! ಹಳ್ಳಿಗಳೇ ಹೆಚ್ಚಾಗಿರುವ ಭಾರತದಂತಹ ರಾಷ್ಟ್ರಗಳಲ್ಲಿ ಚಳುವಳಿ ಗಳಿಗೆ ಜನಸಾಮಾನ್ಯರನ್ನು ಎಚ್ಚರಿಸಲು, ಅವರಿಗೆ ಮಾಹಿತಿ ನೀಡಲು ಜನಪದ ಗೀತೆಗಳನ್ನು ಯಶಸ್ವಿ ಮಾಧ್ಯಮವನ್ನಾಗಿ ಬಳಸುವುದು ಸಾಧ್ಯವಾಯಿತೆನ್ನ ಬಹುದು. ಇದಕ್ಕೆ ಉತ್ತಮ ಉದಾಹರಣೆಯೆಂದರೆ ಭಾರತದ ರಾಷ್ಟ್ರೀಯ ಚಳುವಳಿ.

ಭಾರತವು ಹಲವು ಬಗೆಯಲ್ಲಿ ಸಾಮಾಜಿಕ ಸ್ಥಿತ್ಯಂತರಗಳಿಗೆ ಒಳಗಾಗುತ್ತಲೇ ಬಂದಿದೆ. ಅವುಗಳಲ್ಲಿ ದೇಶವು ವಸಾಹತುಶಾಹಿ ಹಿಡಿತಕ್ಕೆ ಒಳಗಾಗಿರುವುದೂ ಒಂದು. ಈ ಹಿನ್ನೆಲೆಯಲ್ಲಿ ದೇಶದಾದ್ಯಂತ ಅನೇಕ ಹೋರಾಟ, ಚಳುವಳಿಗಳು ನಡೆದಿವೆ. ಅದರಲ್ಲೂ ಕರ್ನಾಟಕದಲ್ಲಿ ನಡೆದ ಹೋರಾಟ–ದಂಗೆಗಳು ಚರಿತ್ರೆಯ ಅಳಿದುಳಿದ ಸಂಪುಟಗಳಾಗಿವೆ. ಅವುಗಳಲ್ಲಿ ಎಷ್ಟೋ ಮಹತ್ವದ ಅಂಶಗಳನ್ನು ಇತಿಹಾಸಕಾರರು ದಾಖಲಿಸಿಲ್ಲ. ಇಂಥವುಗಳನ್ನು ನಮ್ಮ ಜನಪದ ಸಂಗೀತಗಾರರು ಅವರ ಮೌಖಿಕ ರಚನೆಗಳ ಮೂಲಕ ಮತ್ತೆ–ಮತ್ತೆ ಜನಸಾಮಾನ್ಯರಿಗೆ ತಲುಪಿಸಿದ್ದಾರೆ. ಶಿಷ್ಟ ಸಾಹಿತ್ಯ ಪರಂಪರೆಯನ್ನು ಗಮನಿಸಿದರೂ ಜನಪದರ ದಾರಿಯಲ್ಲಿಯೇ ಸಾಗಿ ವಚನಕಾರರು, ದಾಸರುಗಳು, ತತ್ವಪದಕಾರರು ತಮ್ಮ ಪರಿಣಾಮಕಾರಿ ಹಾಡುಗಾರಿಕೆಯಿಂದ ಸಾಮಾಜಿಕ ಕ್ಷೇತ್ರದಲ್ಲಿ ಕ್ರಾಂತಿಯನ್ನೇ ಮಾಡಿದ್ದಾರೆ.

**ರಾಷ್ಟ್ರೀಯ ಚಳುವಳಿಗಳು**

ಭಾರತದ ರಾಷ್ಟ್ರೀಯ ಚಳುವಳಿಯು ಸುಮಾರು ಹನ್ನೆರಡರಿಂದ ಹದಿಮೂರು ದಶಕಗಳ ಕಾಲ ನಡೆದ ಒಂದು ಸುದೀರ್ಘ ಆಂದೋಲನ. ಸಾವಿರಾರು ಬಿಡಿ ಹೋರಾಟಗಳಿಂದ ಕೂಡಿದ ಚಳುವಳಿಯಿದು. ದಂಗೆ, ಸೆರೆಮನೆ ವಾಸ, ಗಡೀಪಾರು, ಲಾಠಿಚಾರ್ಜು, ಗೋಲಿಬಾರು, ಮರಣದಂಡನೆ ಎಲ್ಲವುಗಳಿಂದ ಕೂಡಿದ ವೈವಿಧ್ಯಮಯ ಚರಿತ್ರೆಯಿದು. ಪ್ರಾಂತ್ಯ, ಭಾಷೆ, ಜಾತಿ, ಮತ ಎಲ್ಲವುಗಳನ್ನು ಮೀರಿ ಸ್ವಾತಂತ್ರ್ಯವೊಂದೇ ಗುರಿ ಎಂದು ಇಡೀ ದೇಶ ಒಂದಾಗಿ ಹೋರಾಡಿದ ಪರಿ ಅಚ್ಚರಿ ತರುತ್ತದೆ. ಬ್ರಿಟಿಷ್ ಆಡಳಿತ ಹೊಂದಿದ್ದ ದರ್ಪ, ದಬ್ಬಾಳಿಕೆ, ಬಿಗು ನಿಲುವು, ಅದು ರೂಪಿಸಿದ ಕಾಯಿದೆಗಳು, ಆಡಳಿತ ಹೊಂದಿದ್ದ ಜನವಿರೋಧಿ ಧೋರಣೆಗಳು ಜನಸಾಮಾನ್ಯರನ್ನೇ ನಾಯಕರನ್ನಾಗಿಸಿ ಹೋರಾಟ ಕ್ಕಿಳಿಸಿದವು. ಪರಿಣಾಮವಾಗಿ ಸುದೀರ್ಘವಾದ ಚಳುವಳಿ ರೂಪುಗೊಂಡಿತು. ಸ್ವದೇಶಿ ಚಳುವಳಿ, ಹೋಂರೂಲ್ ಚಳುವಳಿ, ಅಸಹಕಾರ ಚಳುವಳಿ, ಕ್ವಿಟ್ ಇಂಡಿಯಾ ಚಳುವಳಿ ಮುಂತಾದುವನ್ನು ರಾಷ್ಟ್ರೀಯ ನೆಲೆಯಲ್ಲಿ ಗಮನಿಸಬಹುದಾದರೆ,

ಕಾರ್ಮಿಕ ಚಳುವಳಿಗಳು, ರೈತ ಆಂದೋಲನಗಳು, ಆದಿವಾಸಿ ದಂಗೆಗಳು ಮೊದಲಾದವು ಸ್ಥಳೀಯ ನೆಲೆಯಲ್ಲಿ ಬಹು ಪ್ರಭಾವಶಾಲಿಯಾಗಿ ಕಾರ್ಯ ನಿರ್ವಹಿಸಿವೆ. ಈ ಎಲ್ಲಾ ಸಂದರ್ಭಗಳಲ್ಲಿ ದೇಶದಾದ್ಯಂತ ಸ್ಥಳೀಯ ಭಾಷೆಗಳಲ್ಲಿ ಬ್ರಿಟಿಷರ ವಿರುದ್ಧ ಜನಪದರ ಹಾಡುಗಳು ಹುಟ್ಟಿಕೊಂಡಿವೆ. ಬ್ರಿಟಿಷ್ ಸರಕಾರದ ವಿರುದ್ಧ ಕ್ರಾಂತಿ ಹೂಡಲು ಪ್ರೇರೇಪಿಸಿದ 'ದೇಶೋನ್ನತಿಯ ಲಾವಣಿ, ಅಸಹಕಾರ ಲಾವಣಿ'ಗಳನ್ನು ಮುಟ್ಟುಗೋಲು ಹಾಕಿದ ಮಾಹಿತಿಯೂ ಚರಿತ್ರೆಯಲ್ಲಿ ಉಲ್ಲೇಖ ವಾಗಿದೆ. ಕರ್ನಾಟಕದಲ್ಲಿ ನಡೆದ ಏಕೀಕರಣ ಚಳುವಳಿಯೂ ಈ ಹಿನ್ನೆಲೆಯಲ್ಲಿ ಗಮನಾರ್ಹವಾದುದು. ರಾಷ್ಟ್ರೀಯ ನೆಲೆಯಲ್ಲಿ ಸ್ವಾತಂತ್ರ್ಯ ಆಂದೋಲನಗಳು ನಡೆಯುತ್ತಿದ್ದ ಸಂದರ್ಭದಲ್ಲಿ ಕರ್ನಾಟಕದಲ್ಲಿ ಸ್ಥಳೀಯವಾಗಿಯೂ ಜನ ಒಂದಾಗಲು ಪ್ರಯತ್ನಿಸಿದುದರ ಫಲವಾಗಿ ನಡೆದದ್ದು ಏಕೀಕರಣ ಚಳುವಳಿ. ಇದಕ್ಕೆ ಸಂಬಂಧಿಸಿದಂತೆಯೂ ಸಾಕಷ್ಟು ಜನಪದ ಗೀತೆಗಳು ರಚನೆಗೊಂಡಿವೆ.

ಭಾರತದಲ್ಲಿ ಬ್ರಿಟಿಷರು ತಮ್ಮ ರಾಜ್ಯವನ್ನು ವಿಸ್ತರಿಸುತ್ತಾ ಹೋದ ಹಾಗೆ ಅವರ ವಿರುದ್ಧ ದೇಶೀಯರ ಹೋರಾಟಗಳು ಹೆಚ್ಚಾದವು. ಇಂಥ ಸಂದರ್ಭಗಳಲೆಲ್ಲಾ ಉತ್ಕೃಷ್ಟ ಜನಪದ ರಚನೆಗಳು ಹೊರಬಂದಿವೆ. ಜನಪದ ಕವಿಗಳು ಸಮೃದ್ಧವಾಗಿ ಜನಪದ ಗೀತೆಗಳನ್ನು ಕಟ್ಟಿ ಜನರನ್ನು ಹೋರಾಟಕ್ಕೆ ಪ್ರೋತ್ಸಾಹಿಸಿದರು. ಹಾಡುವುದನ್ನೇ ಹವ್ಯಾಸ ಹಾಗೂ ವೃತ್ತಿಯಾಗಿಸಿಕೊಂಡ ಹಲವು ಕಲಾವಿದರು ಜನಪದರಲ್ಲಿ ಕಾಣಸಿಗುತ್ತಾರೆ. ಇವರಿಗೆ ಈ ಹಾಡುಗಾರಿಕೆಯೇ ಒಂದು ಗುರುತರವಾದ ಹೊಣೆ. ಎಲ್ಲೆಲ್ಲಿ ಜನ ಸಭೆ ಸೇರಿರುತ್ತಾರೋ ಅಲ್ಲಿ ಹೋಗಿ ತಾವು ತಿಳಿದಿರುವ ಮಾಹಿತಿಗಳನ್ನು, ವಿಚಾರಗಳನ್ನು ತಮ್ಮ ಹಾಡುಗಳ ಮೂಲಕ ಹಂಚುವುದೇ ಅವರ ಧ್ಯೇಯ.

*ತಿಳಿಸುವ ಕರ್ತವ್ಯ ನಮ್ಮದು ವ್ಯತ್ಯಾಸವಿಲ್ಲದೆ ಈ ಸಭಾದಾಗ*
*ಹಿಡಿದ ಅದರ ವರ್ತನೂಕ ಮಾಡಿದರ ಸಾರ್ಥಕ ಆತ ಈ ಜನ್ಮದಾಗ*

ತಮಗೆ ಗೊತ್ತಿರುವ ಘಟನೆಯ ಸಾರವನ್ನು ಇತರರಿಗೆ ತಿಳಿಸಬೇಕೆನ್ನುವ ಈ ಕಲಾವಿದರಿಗೆ ಹಾಡುವುದೇ ಬದುಕಿನ ಸಾರ್ಥಕತೆ. ಟಿ.ವಿ., ಟೆಲಿಫೋನ್‌ಗಳು ಇರದ ಕಾಲದಲ್ಲಿ ಇವರು ತಮ್ಮ ಹಾಡುಗಾರಿಕೆಯ ಮೂಲಕ ಆ ಎಲ್ಲಾ ಅನಿವಾರ್ಯತೆಗಳನ್ನು ನೀಗಿಸುತ್ತಿದ್ದರು. ಡಪ್ಪಿನ ಪದಗಳು, ಗೀಗೀ ಪದಗಳು, ಲಾವಣಿಗಳು ಈ ಬಗೆಯ ಪ್ರಕಾರಗಳಿಗೆ ಉತ್ತಮ ಉದಾಹರಣೆಗಳು.

*ಡಪ್ಪಿನೊಳಗಿನ ಪದ ತಪ್ಪ ಆದರ ಸುದ್ದಾ ಅಪ್ಪಿಕೊಳ್ಳಿರಿ ನಮ್ಮಪ್ಪಗಳಿರಾ*
*ಶಿಸ್ತಾಗಿ ಕೂತಕೊಂಡ ಚಿತ್ತಿಟ್ಟ ಕೇಳ್ರಿ ನಿಮ್ಮ ಹಿತಾ ಬಯಸುವ ತತ್ವದ ಕುಶಲಾ*

ಭಾರತದಲ್ಲಿ ಸ್ವಾತಂತ್ರ್ಯ ಚಳುವಳಿಗಳು ನಡೆದ ಸಂದರ್ಭದಲ್ಲಿ ಹುಟ್ಟಿಕೊಂಡ ಜನಪದ ಪ್ರಕಾರಗಳು ಹೋರಾಟಕ್ಕೆ ಪ್ರೇರಣೆ ನೀಡಿದ ಕ್ರಮ ಅಚ್ಚರಿ ತರುತ್ತದೆ.

*ಕಂಣ ತೆಗೆದಾ ನೋಡಿರಣ್ಣಾ ಚೆನ್ನದಂಥಾ ಹಿಂದೂಸ್ಥಾನ*
*ಮಣ್ಣುಗೂಡಿ ಆಗಿ ಹೋಯಿತಪ್ಪಾ ಮಸಣ...*
*ಸಂಪನ್ನವಾಗುವಂಥ ಯೋಚನಾ*
*ಇನ್ನು ನಾವು ಮಾಡದಿದ್ರ ಉಳಿಯೋದು ಕಠಿಣಾ ॥*
*ಅದಕ್ಕೆ ಹುಟ್ಟಿ ಬಂದಿದಾನ ಮಹಾತ್ಮಗಾಂಧಿ ಮೋಹನಾ*

ದೇಶದ ಸಮೃದ್ಧತೆ ಕಣ್ಣಮುಂದೆಯೇ ನಾಶವಾದುದನ್ನು ಈ ಹಾಡು ನಿರೂಪಿಸುತ್ತದೆ. ಬ್ರಿಟಿಷ್ ಆಡಳಿತದಲ್ಲಿ ಉಂಟಾದ ಆರ್ಥಿಕ ಬಿಕ್ಕಟ್ಟು, ಸಾಮಾಜಿಕ ಸ್ಥಿತ್ಯಂತರಗಳು ಜನಪದರಲ್ಲಿ ತೀವ್ರತರವಾದ ಆತಂಕವನ್ನು ಉಂಟುಮಾಡಿದವು. ಜಲಿಯನ್ ವಾಲಾಬಾಗ್‌ನಲ್ಲಿ ಸಂಭವಿಸಿದ ದುರಂತ, ವಿದುರಾಶ್ವತ್ಥ ದುರಂತ, ಹಲಗಲಿಯ ಬೇಡರ ಮೇಲಿನ ದೌರ್ಜನ್ಯ, ಜನವಿರೋಧಿ ನೀತಿಗಳು ದೇಶವು ಅಭದ್ರತೆಯ ಕಡೆಗೆ ಸಾಗುತ್ತಿದೆ ಎಂಬ ಎಚ್ಚರವನ್ನು ಜನಸಾಮಾನ್ಯರಲ್ಲಿ ನಿಧಾನವಾಗಿಯಾದರೂ ಹುಟ್ಟುಹಾಕಿತು. ಅದಕ್ಕಾಗಿಯೇ 'ಸಂಪನ್ನವಾಗುವಂತಹ ಯೋಚನಾ, ಇನ್ನು ನಾವು ಮಾಡದಿದ್ರ ಉಳಿಯೋದು ಕಠಿಣ' ಎಂಬ ನಿರ್ಧಾರಕ್ಕೆ ಸಾಮಾನ್ಯರೂ ಬರುವಂತಾ ಗುತ್ತದೆ. ಗಾಂಧೀಜಿಯವರ ನಾಯಕತ್ವದ ಕುರಿತಂತೆ ಜನರಲ್ಲಿದ್ದ ಧೈರ್ಯ ಈ ಹಾಡಿನಲ್ಲಿ ಅಭಿವ್ಯಕ್ತಿಗೊಂಡಿದೆ. ಹಿಂದೆ ಮರಾಠ ಪೇಶ್ವೆಗಳು ಯುದ್ಧದ ಸಮಯದಲ್ಲಿ ಸೈನಿಕರಿಗೆ ಹುರುಪು ತುಂಬಲು ಲಾವಣಿಗಳನ್ನು ಹೇಳಿಸುತ್ತಿದ್ದರು. ಮಹಾರಾಷ್ಟ್ರದಲ್ಲಿ ತಮಾಷಾ ಎಂಬ ಜನಪದ ಕಲಾ ಪ್ರಕಾರವೊಂದು ಈ ನಿಟ್ಟಿನಲ್ಲಿ ಮುಖ್ಯವಾಗುತ್ತದೆ. ಮಹಾರಾಷ್ಟ್ರದಲ್ಲಿ ನಡೆದ ವಂಗಭಂಗ ಚಳುವಳಿಯೂ, ಕಾಶ್ಮೀರ, ಅಸ್ಸಾಂ, ಗುಜರಾತ್, ಪಂಜಾಬ್, ತಮಿಳುನಾಡುಗಳಲ್ಲಿ ನಡೆದ ರಾಷ್ಟ್ರೀಯ ಚಳುವಳಿಗಳೂ ಸ್ಥಳೀಯ ಜನಪದ ಹಾಡುಗಳ ಪ್ರೇರಣೆ ಪಡೆದುಕೊಂಡಿರುವುದು ಕಂಡುಬರುತ್ತದೆ. ಈ ಹಾಡು ಗಳನ್ನು ಕೇಳುವಾಗ ಅದರ ಲಯ–ಗತ್ತು ರೋಮಾಂಚನವನ್ನು ಉಂಟುಮಾಡು ವಂತಿರುತ್ತವೆ. ಆದರೆ ಅವುಗಳ ಸಂಗ್ರಹಿತ ಸಾಹಿತ್ಯ – ಪಠ್ಯವನ್ನು ಓದುವಾಗ ನೀರಸ ಎನಿಸಿದರೂ ತಪ್ಪಿಲ್ಲ. ಕಾರಣ ಜನಪದ ಸಂಗೀತ ಪ್ರಕಾರಗಳು ಹಾಡುವಾಗ ಅತ್ಯಂತ ಶ್ರೀಮಂತಿಕೆಯನ್ನು ಪಡೆದಿರುತ್ತವೆ.

**ಲಾವಣಿ ಮತ್ತು ಗೀಗೀ ಪದಗಳು**

ರಾಷ್ಟ್ರೀಯತೆಯನ್ನು ಹುಟ್ಟುಹಾಕಲು ಲಾವಣಿಗಳು ವಹಿಸುತ್ತಿದ್ದ ಪಾತ್ರ ಅವಿಸ್ಮರಣೀಯ. ಇಲ್ಲಿನ ಹಾಡುಗಾರರು ಸ್ವತಃ ತಾವೇ ಆಶುಕವಿಗಳು. "ಬಿದನೂರು ಮಾದೇಗೌಡರು ಲಾವಣಿ ಹೇಳಿ ಕೊಡಗಿನಲ್ಲಿ ಜಾಗೃತಿ ಮಾಡಿದರಾದರೆ, ಗುತ್ತಲದ ನಾಡಿಗೇರರು ಅಂಕೋಲದ ಉಪ್ಪಿನ ಸತ್ಯಾಗ್ರಹ ಕಾಲಕ್ಕೆ ದೇಶೀಯ ದುಮದುಮ (ದುಂದುಮೆ) ಹೇಳಿ ಜನರನ್ನೆಚ್ಚರಿಸಿದರು. ಸಿಂಪಿ ಲಿಂಗಣ್ಣನವರು ಸ್ವತಃ ಲಾವಣಿ ಹೇಳುತ್ತಿದ್ದರೆ, ಸಮೀಪದ ಹಲಸಂಗಿಯ ಧೂಲಾಸಾಹೇಬ ಮತ್ತು ಅವರ ಶಿಷ್ಯರ ತಂಡವಿತ್ತು. ಬೆಳಗಾವಿ ಜಿಲ್ಲೆಯ ಹುಲಕುಂದ ಭೀಮಕವಿಯ ಗೀಗೀ ಮೇಳ ತೀರ ಜನಪ್ರಿಯವಾಗಿದ್ದು, ವಿಜಾಪುರ ಜಿಲ್ಲೆಯಲ್ಲಿ ಅದು ಸಂಚರಿಸಿತ್ತಲ್ಲದೆ, ನೀಲಗುಂದದಲ್ಲಿ ಒಂದು ಮೇಳವನ್ನು ತರಬೇತಿ ಮಾಡಿತ್ತು." ಗೀಗೀ ಪದಗಳನ್ನು ಹಾಡುವಾಗ ಡಪ್ಪು, ತುಂತುಣಿ, ತಾಳಗಳನ್ನು ಬಳಸುತ್ತಾರೆ. ಲಾವಣಿಗಳೇ ಗೀಗೀ ಪದಗಳಾಗಿ ಮಾರ್ಪಟ್ಟಿವೆ ಎಂದೂ ಹೇಳಲಾಗುತ್ತದೆ. ಇವುಗಳನ್ನು ಹಾಡುವಾಗ ನಡು–ನಡುವೆ ಗೀ...ಗೀ... ಎಂದು ಲಯಬದ್ಧವಾದ ಸೊಲ್ಲನ್ನು ಸೇರಿಸುತ್ತಾರೆ. ಮರಾಠಿಯಲ್ಲಿ ಗೀಗೀ ಎಂಬುದರ ಬದಲಿಗೆ ಜೀಜೀ ಎಂದು ಬಳಸುತ್ತಾರೆ. ಗೀಗೀ ಮೇಳದಲ್ಲಿ ಮೊದಲು ಹರದೇಶಿ (ತುರಾ) ಮತ್ತು ನಾಗೇಶಿ (ಕಲ್ಗಿ) ಎಂಬ ಎರಡು ಪಂಗಡಗಳಿದ್ದವು. ಇವು ಹಿಂದೆ ಬಹು ಸಾಂಪ್ರದಾಯಿಕವಾಗಿದ್ದು, ಅನಂತರದಲ್ಲಿ ಲೌಕಿಕ ಹಾಡುಗಳನ್ನು ಹಾಡಲು ಆರಂಭಿಸಿದರು. ಈ ಪರಿವರ್ತನೆಗೆ ಮುಖ್ಯ ಕಾರಣ ದೇಶದಲ್ಲಿ ನಡೆದ ರಾಷ್ಟ್ರೀಯ ಚಳುವಳಿಗಳು. ಈ ಸಂದರ್ಭದಲ್ಲಿ 'ರಾಷ್ಟ್ರೀಯ ಗೀಗೀ ಮೇಳ'ಗಳೆಂದೇ ಹುಟ್ಟಿಕೊಂಡವು. ನಮ್ಮ ಜನ, ನಮ್ಮ ದೇಶ, ನಮ್ಮ ಸಂಸ್ಕೃತಿ, ಸ್ಥಿತಿ, ರೀತಿ–ನೀತಿ ಇಂಥ ವಿಚಾರಗಳ ಕುರಿತು ಪದಗಳನ್ನು ರಚಿಸಲಾಯಿತು. ಹುಲಕುಂದ ಭೀಮಕವಿಗಳು, ಶಿವಲಿಂಗ, ಪಾಂಡುರಂಗ, ಚನ್ನಬಸವ, ಮೊದಲಾದವರು ಆ ಕಾಲಘಟ್ಟದಲ್ಲಿ ಬಹು ಪ್ರಚಲಿತ ದಲ್ಲಿದ್ದ ಗೀಗೀ ಕವಿಗಳು. ಹತ್ತಾರು ಗೀಗೀ ಮೇಳಗಳು ಹುಲಕುಂದ, ಹೊಸಕೋಟೆ, ಹೊಸೂರು, ಬೀದರ್, ಬಿಜಾಪುರ, ಕಲಬುರ್ಗಿ, ಬೆಳಗಾಂ ಮೊದಲಾದೆಡೆ ಅತ್ಯಂತ ಪರಿಣಾಮಕಾರಿಯಾಗಿ ರಾಷ್ಟ್ರೀಯತೆಯ ಪ್ರಚಾರ ಕೈಗೊಂಡವು.

*ತಕ್ಕಡಿ ಹಿಡಕೊಂಡು ಬೇಹಾರ ಮಾಡುತ*
*ಬಿಳುಪಾದ ಪರಕೀಯ ಜನರೆಲ್ಲರು ಬಂದು*
*ಕಕ್ಕಸ ಬಡುತಲಿ ಕೂಡಿದರು । ನಮ್ಮ*
*ಉಕ್ಕುವ ನಾಡನು ಕೆಡಿಸಿದರು*
*ಯುಕ್ತಿಯ ಬಲದಿಂದ ನೆಕ್ಕುತ ರಾಜ್ಯವ*
*ರಾಜಕಾರಣವನ್ನು ಭರದಿ ಹೂಡಿದರು*
*ಮಾತರಂ । ವಂದೇ ಮಾತರಂ*

ದೇಸೀಯ ದುಂದುಮೆ ಪದದ ಸಾಲುಗಳಿವು. ಜನಪದರಲ್ಲಿ ಬ್ರಿಟಿಷರ ಕುರಿತಿದ್ದ ಅತೀವವಾದ ಅಸಹನೆಯನ್ನು ಈ ಸಾಲುಗಳು ಅಭಿವ್ಯಕ್ತಿಸುತ್ತವೆ. ಕೊಪ್ಪಳ ಜಯಚಾಮಾಚಾರ್ಯರು ಹರಿಕಥೆಯ ಮೂಲಕ ಹೋರಾಟಕ್ಕೆ ಜನರನ್ನು ಪ್ರೇರೇಪಿಸು ತ್ತಿದ್ದರು. ಬೆಂಗಳೂರಿನಲ್ಲಿ ಇವರ ಹರಿಕಥೆ ಮುಗಿದ ಮೇಲೆ ರಾಷ್ಟ್ರೀಯ ಕೆಲಸಗಳಾಗಿ ಜನ ತಮ್ಮ ಆಭರಣ, ವಸ್ತುಗಳನ್ನು ಕಿತ್ತು ಇವರ ಆರತಿ ತಟ್ಟೆಗೆ ಹಾಕಿದ ಉಲ್ಲೇಖಗಳನ್ನು ಸೂರ್ಯನಾಥ ಕಾಮತ್‌ರ 'ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು' ಕೃತಿ ವಿವರಿಸುತ್ತದೆ. "ಹುಲಕುಂದ ಭೀಮಕವಿಗಳ ಗೀಗೀ ಪದಗಳ ಪ್ರಭಾವ ನಮ್ಮ ಊರಿನ ಮೇಲೆ ಬಹಳವಾಯಿತು. ಚಹಾ, ಚುಟ್ಟಾ, ತಂಬಾಕು ಬಿಟ್ಟುಬಿಟ್ಟೆವು. ಕಾಂಗ್ರೆಸ್ ಪ್ರಚಾರಕ್ಕೆ ಗೀಗೀ ಮೇಳ ಕಟ್ಟಿಕೊಂಡು ಸುಮಾರು ೫೦–೬೦ ಊರುಗಳಲ್ಲಿ ನಾನೇ ಹಾಡಿದೆ. ೧೯೩೦–೪೦ರ ಅವಧಿಯಲ್ಲಿ ಮನೆಯ ಚಿಂತೆ ಬಿಟ್ಟು ಕಾಂಗ್ರೆಸ್, ಖಾದಿ, ಚುನಾವಣೆ ಇಂಥ ಕೆಲಸಗಳಲ್ಲಿ ಮೈಮರೆತೆವು" ಎನ್ನುತ್ತಾರೆ ಸೂರ್ಯನಾಥ ಕಾಮತ್.

"ರಾಷ್ಟ್ರೀಯ ಚಳುವಳಿ ಅಂಗವಾಗಿ ಗಾಂಧೀಜಿಯವರು ಪ್ರಚಾರಕ್ಕೆ ತಂದ ಖಾದಿ ಪ್ರಚಾರ, ಪಾನ ನಿರೋಧ, ಅಸ್ಪೃಶ್ಯತಾ ನಿವಾರಣೆ ಮುಂತಾದ ವಿಧಾಯಕ ಕಾರ್ಯಕ್ರಮಗಳನ್ನು ಗ್ರಾಮಾಂತರ ಪ್ರದೇಶಗಳಿಗೆ ಹಬ್ಬಿಸುವಲ್ಲಿ ಲಾವಣಿಕಾರನ

## ದಿಟ



ಗಟ್ಟಿ ಕಗ್ಗಲ್ಲನ್ನೂ
ಭೇದಿಸಿ
ಬೇರುಬಿಟ್ಟ
ಈ ಪುಟ್ಟ ಸಸಿಯದೆಷ್ಟು ದಿಟ್ಟ

ವ. ಉಮೇಶ ಕಾರಂತ
ಉಪನ್ಯಾಸಕರು, ಸೈಂಟ್ ಆನ್ಸ್ ಡಿ.ಇಡಿ. ಕಾಲೇಜು, ಮಂಗಳೂರು – ೫೭೫ ೦೦೧

---

ಪಾತ್ರ ಕಡಿಮೆಯೇನಲ್ಲ. ಭಾರತೀಯರು ಖಾದಿ ಉತ್ಪಾದನೆಯಲ್ಲಿ ತೊಡಗಿಸಿಕೊಳ್ಳುವುದರ ಜೊತೆಗೆ ಖಾದಿಧಾರಿಗಳಾಗುವ ಮೂಲಕ ಭಾರತದ ಸಂಪತ್ತು ಇಂಗ್ಲೆಂಡಿಗೆ ಹರಿದುಹೋಗುವುದನ್ನು ತಪ್ಪಿಸಬೇಕೆಂಬ ಗಾಂಧೀಜಿಯವರ ಸಂದೇಶವನ್ನು ಗ್ರಾಮಾಂತರ ಜನರಿಗೆ ಮುಟ್ಟಿಸುವಲ್ಲಿ ಲಾವಣಿಕಾರ ತೋರಿದ ಜಾಣ್ಮೆ ಪ್ರಶಂಸನಾರ್ಹ. ಮನಸೂನ ಗಾಳಿ ಅವಲಂಬಿಸಿದ ಭಾರತದ ಕೃಷಿಕರು ವಿರಾಮ ವೇಳೆಯಲ್ಲಿ ತಮ್ಮ ಮನೆತನದ ಸದಸ್ಯರೊಂದಿಗೆ ಖಾದಿ ಉತ್ಪಾದನೆಯಲ್ಲಿ ತೊಡಗಿಸಿಕೊಂಡಲ್ಲಿ ಅವರ ಆರ್ಥಿಕ ಸ್ಥಿತಿಗತಿಗಳು ಸುಧಾರಿಸಿ ಸ್ವಾವಲಂಬನೆಗೆ ಎಡೆಮಾಡಿಕೊಡುವುದರಿಂದ ಖಾದಿ ಗ್ರಾಮೋದ್ಯೋಗ ಕೇಂದ್ರಗಳ ಸದಸ್ಯರಾಗಲು ರೈತಾಪಿ ಜನರಿಗೆ ಮನವರಿಕೆ ಮಾಡಿಕೊಡುವಲ್ಲಿ ಲಾವಣಿಕಾರ ಯಶಸ್ವಿಯಾದ."

*ಹಿಂದೂಸ್ಥಾನ ಖಜಾನಿ ಖಾಲಿ ಮಾಡಿ*
*ಇಂಗ್ಲೆಂಡಿಗೆ ಒಯ್ಯುತಾರ ಓಡೋಡಿ*
*ಬ್ರಿಟಿಷ್ ಪಾರ್ಲಿಮೆಂಟನೊಳು ಕೂಡಿ*
*ಕಾಯ್ದೆ ತಗಿತಾರ ಬಹಳ ಅಡ್ನಾಡಿ*

ಲಾವಣಿಗಳನ್ನು ಜಗತ್ತಿನ ಜನಪದ ಸಾಹಿತ್ಯದಲ್ಲಿಯೇ ಒಂದು ಪ್ರಮುಖ ಪ್ರಕಾರವೆಂದು ಗುರುತಿಸಲಾಗಿದೆ. ಇವು ಕಥಾನಕಗಳನ್ನು ಒಳಗೊಂಡ ಪದ್ಯ ರೂಪದಲ್ಲಿರುತ್ತವೆ. ಒಂದು ಲಾವಣಿ ಒಂದು ಘಟನೆಯನ್ನು ಮಾತ್ರ ಒಳಗೊಂಡಿರುತ್ತದೆ. ಇದರ ಮುಖ್ಯ ಉದ್ದೇಶ ಕಥೆ ಹೇಳುವುದು. ಅದರ ಮಾಧ್ಯಮ ಹಾಡು. ಇವುಗಳನ್ನು ಬಳಸುವಾಗ ಜನಪದ ವಾದ್ಯ ಪರಿಕರಗಳನ್ನು ಬಳಸಲಾಗುತ್ತದೆ. ಮುಖ್ಯ ಗಾಯಕನಿಗೆ ಈ ವಾದ್ಯಗಳು ಹಾಗೂ ಸಹ ಗಾಯಕರು ನೆರವಾಗುವುದನ್ನು ಗಮನಿಸಬಹುದು. ಭಾರತದ ಸಂದರ್ಭದಲ್ಲಿ ಹಿಂದೆ ಇವು ಹೆಚ್ಚು ಸಾಂಪ್ರದಾಯಿಕವಾಗಿದ್ದವು. ಅಲೌಕಿಕತೆ, ಮನರಂಜನೆ ಹಾಗೂ ತಾತ್ವಿಕ ವಿಚಾರಗಳಿಗೆ ಸೀಮಿತವಾಗಿದ್ದ ಲಾವಣಿಗಳು ರಾಷ್ಟ್ರೀಯ ಚಳುವಳಿಗಳಲ್ಲಿ ಪರಿಣಾಮಕಾರಿಯಾಗಿ ಬಳಕೆಯಾದವು. ಚಳುವಳಿಯ ಸಂದರ್ಭದಲ್ಲಿ ಪತ್ರಿಕೆಯಷ್ಟೇ ಅಥವಾ ಒಂದು ಪಟ್ಟು ಮಿಗಿಲಾಗಿಯೇ ಜನಪದ ಸಂಗೀತ ಪ್ರಕಾರಗಳು ಪ್ರಧಾನ ಮಾಧ್ಯಮಗಳಾಗಿದ್ದವು. ಚಳುವಳಿಗೆ ಗ್ರಾಮಗಳ ಜನರನ್ನು ಆಕರ್ಷಿಸಲು ಲಾವಣಿ ಪ್ರಕಾರಕ್ಕೆ ಹೆಚ್ಚಿನ ಪ್ರಾಮುಖ್ಯತೆ ಕೊಡಲಾಗುತ್ತಿತ್ತು. ಕಿತ್ತೂರ ಚೆನ್ನಮ್ಮ, ಸಂಗೊಳ್ಳಿ ರಾಯಣ್ಣ ಮೊದಲಾದವರ ಮೇಲಿನ ಲಾವಣಿಗಳು ಅತ್ಯಂತ ಪ್ರಸಿದ್ಧವಾಗಿವೆ. ಬ್ರಿಟಿಷ್ ಆಳ್ವಿಕೆಗೆ ವಿರುದ್ಧವಾಗಿ ನಿಂತು ಸೆಣಸಾಡಿದ ಜನವರ್ಗಗಳಲ್ಲಿ ಆದಿವಾಸಿಗರು ಮೊದಲಿಗರು. ಅವರಲ್ಲಿ ಕರ್ನಾಟಕದಲ್ಲಿನ ಹಲಗಲಿಯ ಬೇಡರ ದಂಗೆ ಮುಖ್ಯವಾದುದು. ಇವರ ಕುರಿತೂ ಲಾವಣಿಗಳು ರಚನೆಗೊಂಡಿವೆ. ಇಂಥ ಹಲವು ಮಹತ್ವದ ಲಾವಣಿಗಳನ್ನು ಬ್ರಿಟಿಷ್ ಧರ್ಮ ಪ್ರಚಾರಕರಾದ ಫ್ಲೀಟರು ಸಂಗ್ರಹಿಸಿ ನೀಡಿರುವುದು ಗಮನಾರ್ಹ. ಸಾಮಾನ್ಯ ಜನರಿಗೆ, ನಿರಕ್ಷರಸ್ಥರಿಗೆ ದೇಶ, ಗಾಂಧೀಜಿ, ಕಾಂಗ್ರೆಸ್–ಸ್ವಾತಂತ್ರ್ಯ ಮೊದಲಾದವುಗಳ ಕುರಿತಂತೆ ಇದ್ದ ಅಪಾರ ಪ್ರೀತಿ ಅವರ ಹಾಡುಗಳಲ್ಲಿ ಅಭಿವ್ಯಕ್ತವಾಗಿದೆ. ಅಕ್ಷರ ಬಲ್ಲವರು ಹೋರಾಟಕ್ಕೆಂದು ಕಟ್ಟಿದ ಹಾಡುಗಳು ನಿರಕ್ಷರಿಗಳಿಗೂ, ಅಕ್ಷರ ಕಲಿಯದವರ ಹಾಡುಗಳು ಅಕ್ಷರಸ್ಥ ಹೋರಾಟಗಾರರಿಗೂ ಪರಸ್ಪರ ಪ್ರೇರಣೆ ನೀಡಿದವು.

*ದುಷ್ಟಗುಣದ ಬ್ರಿಟಿಷರನ್ನು ಬಿಟ್ಟು ಇನ್ನು ಫಲ ಇಲ್ಲ*
*ಮೆಟ್ಟಿ ತುಳಿಯಬೇಕ ಪಾತಾಳಕ*
*ಕಾಲಕಟ್ಟಿ ಕುಟ್ಟಿ ಅಟ್ಟಬೇಕ ಇಂಗ್ಲೆಂಡಕ*
*ಎಷ್ಟು ನಿಷ್ಠುರ ಆಡಿದರ ಸಿಟ್ಟ ತಡಿಯದಕ*
*ಬುದ್ಧಿಗೇಡಿ ಬ್ರಿಟಿಷರನ್ನು ಗದ್ದಿಕೊಂತ ಬಿದ್ದ ರಕ್ತ*
*ಹದ್ದು ನಾಯಿ ನರಿಗಳಿಗೆ ನೀಡಾಕ*

ಇಂಥ ಹಾಡುಗಳಲ್ಲಿ ಸ್ಥಳೀಯ ಜನತೆಯ ಆಕ್ರೋಶ ವ್ಯಕ್ತವಾಗಿದೆ. ಹೋರಾಟದ ಭಾವ ಸಾರ್ವತ್ರಿಕಗೊಂಡು ಹೆಚ್ಚು ಉತ್ಸಾಹಿ ಸಮುದಾಯವನ್ನು ಒಂದುಗೂಡಿಸುವುದಕ್ಕೆ ಇವು ಪ್ರಭಾವಶಾಲಿಯಾಗಿ ಬಳಕೆಗೊಂಡಿವೆ. ದಿನೇದಿನೇ ಹೆಚ್ಚುತ್ತಿದ್ದ ಆಡಳಿತಶಾಹಿ ಹಿಡಿತದಿಂದ ಹೊರಬರಲು ಸ್ಥಳೀಯವಾಗಿ ನಡೆದ ಹೋರಾಟಗಳಿಗೆ ಈ ಹಾಡುಗಳು ನೀಡಿದ ಪ್ರೇರಣೆ ಅಪಾರ. ಸ್ವರಾಜ್ಯ ಸ್ಥಾಪನೆಗಾಗಿ ನಡೆಸಿದ ಅಹಿಂಸಾತ್ಮಕ ಹೋರಾಟಗಳಿಗೆ ಇಂಥ ಹಾಡುಗಳು ಬಹುವಿಧದ ಕೊಡುಗೆ ನೀಡಿವೆ. "ಒಂದೇ ಮಾತಿನಿಂದ ನಡೆಯಬೇಕರಿ ಎಲ್ಲ ಜನ, ಅಂದರೆ ಸಿಗುವುದು ಸ್ವರಾಜ್ಯ ನಮಗಿನ್ನ" ಎಂಬುದನ್ನು ದೇಶವಾಸಿಗಳಿಗೆ ಇವುಗಳು ತಿಳಿಸಿ ಹೇಳಿದವು. ಅತ್ಯಂತ ಸಂಪದ್ಭರಿತವಾಗಿದ್ದ ದೇಶವನ್ನು ಬಡತನದ ಸ್ಥಿತಿಗೆ ತಂದೊಡ್ಡಿದ ಕುರಿತಾದ ಸಂಕಟ ಈ ಹಾಡುಗಳಲ್ಲಿವೆ. ಬ್ರಿಟನ್ ರೂಪುಗೊಳಿಸಿದ ವಸಾಹತುನೀತಿಗಳಿಂದಾಗಿ ದೇಶೀಯ ಆರ್ಥಿಕತೆಯಲ್ಲಿ ಮಹತ್ವದ ಏರುಪೇರುಗಳು ಉಂಟಾದವು. ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪೆನಿಯು ಆರಂಭದಲ್ಲಿ ಬ್ರಿಟನ್ ವಸ್ತುಗಳನ್ನು ಭಾರತಕ್ಕೆ ತಂದು ಇಲ್ಲಿಯ ವಸ್ತುಗಳನ್ನು ಅಲ್ಲಿಗೆ ಕೊಂಡೊಯ್ಯುತ್ತಿದ್ದಿತು. ಕಂಪೆನಿಯ ಪ್ರಮುಖ ಆದಾಯದ ಮೂಲವೆಂದರೆ ಭಾರತದ ಸಾಮಗ್ರಿಗಳು. ಇಂಗ್ಲೆಂಡಿನಲ್ಲಾದ ತಾಂತ್ರಿಕ ಬೆಳವಣಿಗೆ, ಬಟ್ಟೆ ಉದ್ಯಮದಲ್ಲಾದ ಆಧುನಿಕ ಬದಲಾವಣೆಗಳು, ಭಾರತದ ವಸ್ತುಗಳ ಬೇಡಿಕೆಯನ್ನು ಕುಗ್ಗಿಸಿದವು. ಭಾರತದ ನೇಕಾರರಿಗೆ ವ್ಯಾಪಾರದಲ್ಲಿ ನಷ್ಟವುಂಟಾಗಿ ಕೃಷಿಯನ್ನು ಆಧರಿಸತೊಡಗಿದರು. ಆದರೆ ಇದಕ್ಕೂ ಬ್ರಿಟಿಷ್ ಆರ್ಥಿಕ ನೀತಿಗಳು ವ್ಯತಿರಿಕ್ತವಾಗಿದ್ದವು. ಬ್ರಿಟನ್ ತನ್ನೆಲ್ಲಾ ಚಟುವಟಿಕೆಗಳಿಗೆ ಭಾರತದ ಭೂಕಂದಾಯದ ಆದಾಯವನ್ನು ಹೆಚ್ಚಾಗಿ ಅವಲಂಬಿಸಿತ್ತು. ತನ್ನ ವ್ಯಾಪಾರ, ವಿಸ್ತರಣೆ, ಅಧಿಕಾರ, ರಫ್ತು ಆಮದು ವ್ಯವಹಾರ ಮೊದಲಾದವುಗಳಿಗಾಗಿ ಕಂದಾಯ ವಸೂಲಿಯಲ್ಲಿ ಏರಿಕೆ ತಂದಿತು. ಕಂದಾಯ ಸಂಗ್ರಹಣೆಯಲ್ಲಿ ಮಧ್ಯವರ್ತಿಗಳು ಹುಟ್ಟಿಕೊಂಡರು. ಇದರಿಂದಾಗಿ, ಜಮೀನ್ದಾರರು, ಮಧ್ಯವರ್ತಿಗಳು ಹಾಗೂ ಬಡ ರೈತರುಗಳೆಂದು ಸಮಾಜದಲ್ಲಿ ಆರ್ಥಿಕ ವಿಂಗಡಣೆ ಉಂಟಾಯಿತು. ಪರಿಣಾಮ ಸಾಗುವಳಿದಾರ ಬಡವನಾದ. ಕ್ಷಾಮ, ಬರಗಾಲ ಸಾಮಾನ್ಯ ಜನರನ್ನು ಇನ್ನಷ್ಟು ಸಂಕಷ್ಟಕ್ಕೆ ದೂಡಿದವು. ಇಂಥ ಸಂದರ್ಭದಲ್ಲಿ ಆಡಳಿತ ವ್ಯವಸ್ಥೆಯ ಕುರಿತು ಬಂಡಾಯವೇಳಲು ಜನಪದ ಗೀತೆಗಳು ಮಾಧ್ಯಮವಾಗಿ ಕೆಲಸ ಮಾಡಿದವು:

*ಮಳೆ ಹೋಗಿ ಬೆಳೆ ಇಲ್ಲ ಅನ್ನುವಂಥ ರೈತಗ*
*ಬಿರಾಡ ಬಿಡುವುದಿಲ್ಲ ಸರಕಾರ*
*ತೆರಿಗೆ ಕೊಟ್ಟ ಬಾಳ ಮರಗುತ ಕುಂತಾರ*
*ಮನಿಯಾಗ ಉಳಿಯಲಿಲ್ಲ ಬಂಗಾರ*

ಪಾಶ್ಚಾತ್ಯ ಸಂಸ್ಕೃತಿಯು ಸ್ಥಳೀಯವಾಗಿ ಉಂಟುಮಾಡಿದ ಪಲ್ಲಟಗಳನ್ನು ಒಂದಷ್ಟು ಕಾಲ ನಾವು ಮೌನವಾಗಿಯೇ ಸ್ವೀಕರಿಸಿದೆವು. ಅವರ ಉದ್ದೇಶಪೂರ್ವಕ ಚಟುವಟಿಕೆಗಳು ತಂದೊಡ್ಡಬಹುದಾದ ಅಪಾಯ ಅರಿವಾಗುವ ಹೊತ್ತಿಗಾಗಲೇ ಹಲವು ಮಹತ್ವದ ಬೆಳವಣಿಗೆಗಳು ದೇಶದಾದ್ಯಂತ ಘಟಿಸಿಹೋಗಿದ್ದವು. ವಿದೇಶೀ ಸಂಸ್ಕೃತಿ ಒಂದು ರೀತಿಯ ಅಮಲನ್ನು ಸಮುದಾಯದೊಳಗೆ ಬಿತ್ತಿ ತನ್ನ ಕಾರ್ಯವನ್ನು ನೆರವೇರಿಸಿಕೊಂಡಿದೆ. ಮಾತ್ರವಲ್ಲ, ಬಹು ಜಾಣತನದಿಂದ ರಾಜ್ಯಭಾರವನ್ನೂ ನಡೆಸಿದೆ. ಸಂವೇದನಾಶೀಲ ಜನಪದ ಗಾಯಕ ಅವುಗಳನ್ನೆಲ್ಲ ಗ್ರಹಿಸಿ ಹಾಡಿನ ಮೂಲಕ ಎಚ್ಚರಿಸಿದ್ದಾನೆ.

*ವೀರ್ಯ ಸಹಿತ ನೀರ ನೀರ ಆಗುವಂಥ ಚಟಗಳ*
*ಕಲಿಸ್ಯಾರ ನಮ್ಮ ದೇಶಕ್ಕ*
*ಸಿರಿ ಹೋಗಿ ನಾವು ಕುರಿಗಳಾದರೂ ಅರವ ಇಲ್ಲ ಹಿಂದು ಕುಲಕ*

ಈ ನಿಟ್ಟಿನಲ್ಲಿ ಜನಪದ ಸಂಗೀತವು ಅತ್ಯಂತ ಪ್ರಭಾವೀ ಮಾಧ್ಯಮವಾಗಿ ಕೆಲಸ ಮಾಡಿದೆ. ಜನಪದ ಸಂಗೀತ ಸಾಮಾಜಿಕರಲ್ಲಿ ಉಂಟುಮಾಡುತ್ತಿದ್ದ ಎಚ್ಚರ ಮತ್ತು ಹೋರಾಟಕ್ಕೆ ನೀಡುತ್ತಿದ್ದ ಸ್ಫೂರ್ತಿ–ಪ್ರೇರಣೆ ಅಪಾರವಾದದ್ದು. ಗೀಗೀ–ಲಾವಣಿಗಳಂಥ ಪ್ರಕಾರಗಳನ್ನು ಗಾಯಕರು ತಮ್ಮ ಜೋರು ಕಂಠದಿಂದ ದನಿಯೆತ್ತಿ ಹಾಡುವಾಗ ಎಂಥ ಕೇಳುಗನಾದರೂ ಅವುಗಳ ಪರಿಣಾಮಕ್ಕೆ ಒಳಗಾಗಲೇಬೇಕು. ಹೀಗಾಗಿ ರಾಷ್ಟ್ರೀಯ ಚಳುವಳಿಗಳಿಗೆ ಜನಪದ ಸಂಗೀತವು ನೀಡಿದ ಕೊಡುಗೆ ಅತ್ಯಂತ ಮಹತ್ವದ್ದು.

ಶ್ವೇತಾ ಎಂ. ಬಿ.
ನಂ–೧೯/ಎ–೨೦, ೬ನೇ ಮುಖ್ಯರಸ್ತೆ, ೭ನೇ ಅಡ್ಡರಸ್ತೆ, ಸರಸ್ವತಿಪುರಂ, ಮೈಸೂರು–೫೭೦೦೦೯

# ಶನಿ ಗ್ರಹದ ಆಗಮನ



**ಸಂ**ಜೆಯ ಆಕಾಶದಲ್ಲಿ ಕಳೆದ ತಿಂಗಳು ಕಾಣುತ್ತಿದ್ದ ಗುರು ಮತ್ತು ಮಂಗಳ ಗ್ರಹಗಳಲ್ಲಿ ಈಗ ಒಂದು ದಿಗಂತದ ಅಂಚನ್ನು ತಲುಪುತ್ತಿದೆ. ಅದೇ ಮಂಗಳ. ಇದನ್ನು ಗುರುತಿಸುವುದೇ ಕಷ್ಟ. ಗುರುಗ್ರಹವನ್ನು ಸುಲಭವಾಗಿ ಗುರುತಿಸಬಹುದು. ಪೂರ್ವದ ಅಂಚಿನಲ್ಲಿ ಶನಿಗ್ರಹ ಕಾಣಿಸಿಕೊಳ್ಳುತ್ತದೆ. ದಿನೇ ದಿನೇ ಸ್ವಲ್ಪ ಮುಂಚೆ ಮುಂಚೆಯೇ ಉದಯಿಸುವುದನ್ನು ಗಮನಿಸಬಹುದು. ಆಕಾಶ ಶುಭ್ರವಾಗಿದ್ದರೆ ಅದರ ಪರಿಸರವನ್ನು ಗಮನಿಸಿ. ವೃಶ್ಚಿಕರಾಶಿಯ ಕೆಂಪು ನಕ್ಷತ್ರ ಜ್ಯೇಷ್ಠಾ – ಅದರ ಮೇಲೆಯೇ ಅನುರಾಧಾ ಕಾಣುತ್ತವೆ. ಚಂದ್ರನಿಲ್ಲದ ರಾತ್ರಿಯಲ್ಲಿ ಅದರ ದಕ್ಷಿಣಕ್ಕೆ ಆಕಾಶಗಂಗೆಯ ನೆಬ್ಯುಲಾ ಮತ್ತು ನಕ್ಷತ್ರಗುಚ್ಛಗಳನ್ನು ಕಾಣಬಹುದು. ಚಿತ್ರ ತೆಗೆದರೆ ಅವು ದಾಖಲಾಗುವುವು. ದೂರದರ್ಶಕದ ಮೂಲಕ ವೀಕ್ಷಿಸಲು ಇದು ಒಳ್ಳೆಯ ಅವಕಾಶ. ಈಗ ಶನಿಗ್ರಹವನ್ನು ಹಿಂದೆ ಹಾಕಿ ಭೂಮಿ ಮುಂದೆ ಹೊರಟಿರುವುದರಿಂದ ಸೂರ್ಯಾಸ್ತವಾಗುವಾಗಲೇ ಶನಿ ಉದಯಿಸುತ್ತಿದೆ. ಇದಕ್ಕೆ ವಿಯುತಿ ಎಂದು ಹೆಸರು. ಯುತಿ ಎಂದರೆ ಸೂರ್ಯ, ಗ್ರಹ ಎರಡೂ ಒಂದೇ ನೇರದಲ್ಲಿ ಇರುವುದು. ವಿಯುತಿ ಎಂದರೆ ಎರಡೂ ಒಂದಕ್ಕೊಂದು ವಿರುದ್ಧವಾಗಿರುವುದು. ಜೂನ್ ೧೫ರಂದು ವಿಯುತಿ ನಡೆಯಲಿದೆ. ಹಾಗಾಗಿ ಈ ತಿಂಗಳುದ್ದಕ್ಕೂ (ಮುಂದಿನ ತಿಂಗಳೂ ಸಹ) ಶನಿಗ್ರಹ ರಾತ್ರಿ ಇಡೀ ನೋಡಲು ಸಿಗುತ್ತದೆ. ಚಂದ್ರ ಕೂಡ ಹೀಗೆ ವಿಯುತಿಗೆ ಒಳಪಡಬಹುದಲ್ಲವೇ ? ಅಂದರೆ ಸೂರ್ಯಾಸ್ತವಾಗುವಾಗ ಚಂದ್ರೋದಯವಾಗಬೇಕು; ರಾತ್ರಿ ಇಡೀ ಚಂದ್ರ ನೋಡಲು ಸಿಗಬೇಕು – ಅದೇ ಹುಣ್ಣಿಮೆ ! ಅಂದರೆ ಹುಣ್ಣಿಮೆ ಎಂಬ ಘಟನೆ ಚಂದ್ರನ ವಿಯುತಿಯನ್ನು ಸೂಚಿಸುತ್ತದೆ.

ಕಳೆದ ತಿಂಗಳು ಶುಕ್ರ ಮತ್ತು ಬುಧ ಬೆಳಗಿನ ಜಾವ ಪೂರ್ವದಲ್ಲಿ ಕಾಣುತ್ತಿದ್ದವು. ದಿನೇ ದಿನೇ ಮೇಲೇರಿ ೩ರಂದು ಶುಕ್ರ ಗರಿಷ್ಠ ಎತ್ತರದಲ್ಲಿ ಕಾಣುತ್ತದೆ. ಬುಧ ಗ್ರಹ ದಿನೇ ದಿನೇ ದಿಗಂತದ ಅಂಚಿನತ್ತ ಸರಿಯುತ್ತದೆ. ೨೧ರಂದು ಯುತಿ ಎಂದರೆ ಸೂರ್ಯ, ಗ್ರಹ ಎರಡೂ ಒಂದೇ ನೇರದಲ್ಲಿರುವುದು. ಆಗ ಅದು ಕಾಣುವುದಿಲ್ಲ (ಕಾರಣ ಸರಳ – ಸೂರ್ಯನೊಡನೆಯೇ ಉದಯಿಸಿ, ಸೂರ್ಯನೊಡನೆಯೇ ಕಂತುತ್ತದೆ.) ಸೂರ್ಯನನ್ನು ಆಚೆ ಬದಿಯಿಂದ ಹಾದು ಬರುವ ಬುಧವನ್ನು ಸೋಹೋ ಉಪಗ್ರಹ ಕಳುಹಿಸುವ ಚಿತ್ರಗಳಲ್ಲಿ ಕಾಣಬಹುದು. ಅದು ಮುಂದಿನ ತಿಂಗಳಿಗೆ ಸಂಜೆಯ ಹೊತ್ತಿನಲ್ಲಿ ಕಾಣುತ್ತದೆ.



ಜೂನ್ ೪ರ ಮುಸ್ಸಂಜೆ
ಚಂದ್ರ, ಗುರು ಮತ್ತು ಸ್ಪೈಕಾ

ಈಗ ಸಂಜೆ ಕಾಣುವ ನಕ್ಷತ್ರಗಳನ್ನು ಪರಿಚಯಮಾಡಿಕೊಳ್ಳೋಣ. ನಕ್ಷೆ ಸಂಜೆ ಏಳು ಗಂಟೆಗೆ ಅನ್ವಯಿಸುತ್ತದೆ. ನೆತ್ತಿಯ ಮೇಲೆ ಕಾಣುತ್ತಿರುವುದೇ ಸಿಂಹರಾಶಿ. ಉತ್ತರಕ್ಕೆ ಸಪ್ತರ್ಷಿಮಂಡಲ; ದಕ್ಷಿಣಕ್ಕೆ ತ್ರಿಶಂಕು (ದಕ್ಷಿಣ ಶಿಲುಬೆ), ಸಿಂಹರಾಶಿಯಿಂದ ಪೂರ್ವಕ್ಕೆ ಕಾಣುವುದು ಕ್ಷೀಣವಾದ ತುಲಾ. ಚಿತ್ರಾದ ಉತ್ತರಕ್ಕೆ ಕಾಣುವ ಕೆಂಪು ನಕ್ಷತ್ರ ಸ್ವಾತಿ. ಚಿತ್ರಾದ ದಕ್ಷಿಣಕ್ಕೆ ಕಾಣುವ ಐದು ನಕ್ಷತ್ರಗಳ ವಿನ್ಯಾಸವೇ ಹಸ್ತಾ. ದಕ್ಷಿಣ ಶಿಲುಬೆಯ ಪಕ್ಕ ಕಾಣುವ ಎರಡು ಪ್ರಕಾಶಮಾನ ನಕ್ಷತ್ರಗಳು ಕಿನ್ನರ (ಸೆಂಟಾರಸ್) ಪುಂಜಕ್ಕೆ ಸೇರಿದ ಆಲ್ಫಾ ಮತ್ತು ಬೀಟಾ. ಆಲ್ಫಾ ಸೆಂಟಾರಿ ಎಂಬುದು ನಮ್ಮ ಸೌರಮಂಡಲಕ್ಕೆ ಅತಿ ಸಮೀಪವಾದ ನಕ್ಷತ್ರ ಎಂದು ಪಠ್ಯ ಪುಸ್ತಕಗಳ ಮೂಲಕ ಪರಿಚಿತವಾಗಿದೆ. ಪಶ್ಚಿಮದಲ್ಲಿ ಮಿಥುನ ಕಾಣುತ್ತದೆ. ಮಹಾವ್ಯಾಧ (ಒರೈಯನ್) ಅಸ್ತಂಗತವಾಗುವುದರಲ್ಲಿದೆ. ಪೂರ್ವದಲ್ಲಿ ವೃಶ್ಚಿಕದ ತಲೆ ಮಾತ್ರ ಕಾಣುತ್ತಿದೆ. ವೃಶ್ಚಿಕ ಇನ್ನೂ ಉದಯಿಸಿರುವುದಿಲ್ಲ. ಎರಡು – ಮೂರು ಗಂಟೆಗಳ ನಂತರ ವೃಶ್ಚಿಕದ ಪೂರ್ಣ ಆಕಾರ ಗೋಚರಿಸುತ್ತದೆ. ಈ ತಿಂಗಳ ೨೧ರಂದು ದಕ್ಷಿಣಾಯನ. ಸೂರ್ಯ ತನ್ನ ಗರಿಷ್ಠ ಎತ್ತರವನ್ನು ತಲುಪುವ ದಿನ. ಅದು ಉತ್ತರದ ಮಿತಿಯೂ ಹೌದು. ಬೇಸಿಗೆಯ ಮುಕ್ತಾಯದ ಸೂಚನೆ ಎಂದೂ ಹೇಳಬಹುದು. ಅಂದು ಹಗಲಿನ ಅವಧಿ ಗರಿಷ್ಠವಾಗಿರುತ್ತದೆ.

**ಖಗೋಳ ದಿನಚರಿ**

ಜೂನ್ ೧ ಚಾಂದ್ರಮಾಸದ ಮೊದಲ ಪಾದ
ಚಂದ್ರಾಸ್ತ ನಡುರಾತ್ರಿಗೆ

| | |
|---|---|
| ೩ | ಶುಕ್ರ ಗ್ರಹದ ಗರಿಷ್ಠ ಕೋನೋನ್ನತಿ (ಮುಂಜಾವು)* |
| | ಗುರು – ಚಂದ್ರ ಜೋಡಿ (ಸಂಜೆ)* |
| ೮ | ಚಂದ್ರ – ಭೂಮಿ ನಡುವೆ ಗರಿಷ್ಠ ದೂರ |
| ೯ | ಹುಣ್ಣಿಮೆ ೧೮:೪೦ಕ್ಕೆ |
| ೧೦ | ಶನಿ – ಚಂದ್ರ ಜೋಡಿ (ಸಂಜೆ)* |
| ೧೫ | ಶನಿ ಗ್ರಹದ ವಿಯುತಿ |
| ೧೭ | ಚಾಂದ್ರಮಾಸದ ಕೊನೆಯ ಪಾದ |
| | ಚಂದ್ರೋದಯ ನಡುರಾತ್ರಿಗೆ |
| ೨೧ | ಶುಕ್ರ – ಚಂದ್ರ ಜೋಡಿ (ಮುಂಜಾವು)* |
| | ದಕ್ಷಿಣಾಯನ; ಬುಧ ಗ್ರಹದ ಯುತಿ |
| ೨೩ | ಚಂದ್ರ – ಭೂಮಿ ನಡುವೆ ಅಂತರ ಕನಿಷ್ಠ |
| ೨೪ | ಅಮಾವಾಸ್ಯೆ ೦೮:೦೧ಕ್ಕೆ |
| ೨೮ | ಮಂಗಳ – ಬುಧ ಜೋಡಿ |

(* ಛಾಯಾಗ್ರಹಣಕ್ಕೆ ಸದವಕಾಶ)

**ಡಾ॥ ಬಿ. ಎಸ್. ಶೈಲಜಾ**
ಜವಾಹರಲಾಲ್ ನೆಹರು ತಾರಾಲಯ
ಹೈಗ್ರೌಂಡ್ಸ್, ಬೆಂಗಳೂರು – ೫೬೦ ೦೦೧

**ಸಮಕಾಲೀನ ಅಧ್ಯಯನ ಮಾದರಿಗಳಲ್ಲಿ ಮುಂಚೂಣಿಯಲ್ಲಿರುವುದು ಅಂತರ್‌ಶಿಸ್ತೀಯ ಮತ್ತು ಬಹುಶಿಸ್ತೀಯ ಅಧ್ಯಯನ ವಿಧಾನಗಳು. ಅಂತರ್‌ಶಿಸ್ತೀಯ ಅಧ್ಯಯನವೆಂದರೆ ಎರಡು ಅಥವಾ ಹಲವಾರು ಅಧ್ಯಯನದ ಶಿಸ್ತುಗಳನ್ನು ಒಳಗೊಂಡು ನಡೆಸುವ ವಿಸ್ತೃತ ಅಧ್ಯಯನ. “ಎರಡು ಭಿನ್ನ ಶಿಸ್ತುಗಳನ್ನು ಒಟ್ಟಿಗೆ ಅಧ್ಯಯನ ಮಾಡಿ ಅವುಗಳ ಪರಸ್ಪರ ಪ್ರಭಾವ, ಪೂರಕತೆಗಳನ್ನು ವಿಶ್ಲೇಷಿಸುವುದು, ಆ ಮೂಲಕ ವ್ಯಕ್ತವಾಗುವ ಹೊಸ ಸತ್ಯವನ್ನು ಶೋಧಿಸುವುದು ಇದರ ಗುರಿಯಾಗಿದೆ.”**

# ಅಧ್ಯಯನ

## ಅಂತರ್‌ಶಿಸ್ತು ಮತ್ತು ಬಹುಶಿಸ್ತು

**ಷಣ್ಮುಖಾನಂದ**



ಸಮಕಾಲೀನ ಅಧ್ಯಯನ ಮಾದರಿಗಳಲ್ಲಿ ಮುಂಚೂಣಿಯಲ್ಲಿರುವುದು ಅಂತರ್‌ಶಿಸ್ತೀಯ ಮತ್ತು ಬಹುಶಿಸ್ತೀಯ ಅಧ್ಯಯನ ವಿಧಾನಗಳು. ಅಂತರ್‌ಶಿಸ್ತೀಯ ಅಧ್ಯಯನವೆಂದರೆ ಎರಡು ಅಥವಾ ಹಲವಾರು ಅಧ್ಯಯನದ ಶಿಸ್ತುಗಳನ್ನು ಒಳಗೊಂಡು ನಡೆಸುವ ವಿಸ್ತೃತ ಅಧ್ಯಯನ. “ಎರಡು ಭಿನ್ನ ಶಿಸ್ತುಗಳನ್ನು ಒಟ್ಟಿಗೆ ಅಧ್ಯಯನ ಮಾಡಿ ಅವುಗಳ ಪರಸ್ಪರ ಪ್ರಭಾವ, ಪೂರಕತೆಗಳನ್ನು ವಿಶ್ಲೇಷಿಸುವುದು, ಆ ಮೂಲಕ ವ್ಯಕ್ತವಾಗುವ ಹೊಸ ಸತ್ಯವನ್ನು ಶೋಧಿಸುವುದು ಇದರ ಗುರಿಯಾಗಿದೆ.”



ಈ ಹೊಸ ಜ್ಞಾನವು ಎರಡು ಅಧ್ಯಯನಗಳ ಶಿಸ್ತಿಗೂ ಪರಸ್ಪರ ಸಹಕಾರಿ. ಆಧುನಿಕ ಸಂದರ್ಭದಲ್ಲಿ ಸಂಶೋಧನೆಯ ಅಧ್ಯಯನಗಳು ಹೊಸ ಹೊಸ ಆಯಾಮಗಳನ್ನು ಪಡೆಯುತ್ತಾ ಬಂದಿದೆ. ಇದರ ಮೂಲ ಉದ್ದೇಶವೆಂದರೆ ಸಂಶೋಧನೆಗಳನ್ನು ಶುದ್ಧ ಶೈಕ್ಷಣಿಕ ಚೌಕಟ್ಟಿನಿಂದ ಹೊರತರುವ ಮತ್ತು ಸಮುದಾಯದ ಚರ್ಚೆಗಳಿಗೆ ಅನುವಾಗುವಂತಹ ಭಿತ್ತಿಯನ್ನು ಸೃಷ್ಟಿಸಿಕೊಳ್ಳುವುದು. ಹಿಂದಿನ ಕಾಲದಲ್ಲಾದರೆ ಮಾನವನ ಅಗತ್ಯಗಳಿಗೆ ಇತಿಮಿತಿ ಇದ್ದುದರಿಂದ ಯಾವುದೇ ಅಧ್ಯಯನದ ಶಿಸ್ತಿಗೂ ಇತಿಮಿತಿ ಇರುತ್ತಿತ್ತು. ಆದರೆ ಸಮಕಾಲೀನ ಪರಿಸ್ಥಿತಿಯಲ್ಲಿ ಸಮಾಜವು ಸಂಕೀರ್ಣವಾಗಿ ಬೆಳೆದಿರುವುದರಿಂದ ಪ್ರತಿಯೊಂದು ಅಧ್ಯಯನದ ಶಿಸ್ತು ಕಾಲದಿಂದ ಕಾಲಕ್ಕೆ ಹೆಚ್ಚು ವ್ಯಾಪಕವೂ ಸಮಕಾಲೀನವೂ ಆಗಿರಬೇಕಾಗುತ್ತದೆ. ಈ ನಿಟ್ಟಿನಲ್ಲಿ ಅಧ್ಯಯನಗಳಿಗೆ ಅಂತರ್‌ಶಿಸ್ತೀಯ ಮತ್ತು ಬಹುಶಿಸ್ತೀಯ ಅಧ್ಯಯನಗಳ ವಿಧಾನಗಳು ಅತ್ಯಂತ ಅಪೇಕ್ಷಣೀಯ.

ಬಹುಶಿಸ್ತೀಯ ಅಧ್ಯಯನಗಳೆಂದರೆ ಯಾವುದೇ ಒಂದು ನಿರ್ದಿಷ್ಟ ಸಂಶೋಧನಾ ಅಧ್ಯಯನಗಳಿಗೆ ಒಂದು ಅಥವಾ ಇನ್ನೂ ಹೆಚ್ಚು ಇತರ ಶಿಸ್ತುಗಳ ಅಧ್ಯಯನ ವಿಧಾನ ಮತ್ತು ದೃಷ್ಟಿಕೋನಗಳನ್ನು ಬಳಸಿಕೊಂಡು ವಿಸ್ತರಿಸುವುದು.

ಆಧುನಿಕ ಕಾಲದಲ್ಲಿ ಮಾನವಿಕ ಕಲೆಗಳು, ಸಾಹಿತ್ಯ ಮತ್ತು ಸಂಸ್ಕೃತಿಗಳ ವಿವೇಚನೆ, ಶುದ್ಧ ವಿಜ್ಞಾನ ಮತ್ತು ತಂತ್ರಜ್ಞಾನಗಳ ಉನ್ನತ ಅಧ್ಯಯನ ಇವುಗಳನ್ನು ಹೆಚ್ಚು ಸಾರ್ಥಕವಾಗುವಂತೆ ಮಾಡಲು ಈ ಎಲ್ಲ ಕ್ಷೇತ್ರಗಳಿಗೂ ಅಂತರ್‌ಶಿಸ್ತೀಯ ಮತ್ತು ಬಹುಶಿಸ್ತೀಯ ಅಧ್ಯಯನದ ಮಾದರಿಗಳ ಮಾನದಂಡಗಳನ್ನು ಜಗತ್ತಿನಾದ್ಯಂತ ವಿಶ್ವವಿದ್ಯಾನಿಲಯಗಳಲ್ಲೂ, ಖಾಸಗೀ ಹಾಗೂ ಸಾರ್ವಜನಿಕ ಸಂಶೋಧನಾ ಸಂಸ್ಥೆಗಳಲ್ಲೂ ಅನ್ವಯಿಸಿಕೊಳ್ಳಲಾಗುತ್ತಿದೆ. ಈ ಹಿನ್ನೆಲೆಯಲ್ಲಿ ಕನ್ನಡ ಭಾಷೆ, ಸಾಹಿತ್ಯ ಮತ್ತು ಸಂಸ್ಕೃತಿಗಳ ಅಧ್ಯಯನದ ಮಾರ್ಗದಲ್ಲಿ ಈ ರೀತಿಯ ಆನ್ವಯಿಕ ವಿಧಾನವನ್ನು ಅಳವಡಿಸದಿದ್ದರೆ ನಮ್ಮ ಸಂಶೋಧನೆಯ ಕ್ಷೇತ್ರದ ಸಮಕಾಲೀನತೆ ಸಾಧ್ಯವಾಗುವುದಿಲ್ಲ. ಆದ್ದರಿಂದ ಈಗ ನಾವು ಅನಿವಾರ್ಯವಾಗಿ ಬಹುಶಿಸ್ತು ಹಾಗೂ ಅಂತರ್‌ಶಿಸ್ತೀಯ ಅಧ್ಯಯನದ ಅನ್ವಯಗಳಿಗೆ ಮೊರೆ ಹೋಗಲೇಬೇಕಾಗಿದೆ.

‘ತೌಲನಿಕ ಅಧ್ಯಯನ’ದ ಮುಂದುವರಿದ ಭಾಗವಾಗಿಯೂ ಅಂತರ್‌ಶಿಸ್ತೀಯ ಅಧ್ಯಯನಗಳನ್ನು ನೋಡಲು ಸಾಧ್ಯವಿದೆ. ಕನ್ನಡ ಸಾಹಿತ್ಯದ ವಿವಿಧ ಅಧ್ಯಯನದ ಶಾಖೆಗಳು ಆಳವಾದ ಪರಿವೀಕ್ಷಣೆಗೆ ಈಡಾದಂತೆ, ಅವುಗಳ ಮೇಲೆ ಅನ್ಯಶಿಸ್ತುಗಳ ಪ್ರಭಾವ ಹಾಗೂ ಅಂತರ್‌ಶಿಸ್ತೀಯ ಅಧ್ಯಯನಗಳ ಅವಲಂಬನೆಗಳು ಸಾಮಾನ್ಯ. ಸಾಹಿತ್ಯದೊಂದಿಗೆ ನೇರ ಸಂಬಂಧ ಹೊಂದಿರುವ ಭಾಷಾವಿಜ್ಞಾನ, ಶಾಸನಶಾಸ್ತ್ರ, ಜಾನಪದ, ಕಾವ್ಯಮೀಮಾಂಸೆ, ಅಲಂಕಾರಶಾಸ್ತ್ರ, ವಿಮರ್ಶೆ, ಛಂದಸ್ಸು, ಗ್ರಂಥ ಸಂಪಾದನೆ, ಹಸ್ತಪ್ರತಿಶಾಸ್ತ್ರ, ನಿಘಂಟುವಿಜ್ಞಾನ ಮುಂತಾದ ಸಾಹಿತ್ಯ ಪೂರಕ ವಿಷಯಗಳ ಜೊತೆಗೆ, ಸಾಹಿತ್ಯದೊಂದಿಗೆ ನೇರ ಸಂಬಂಧ ಹೊಂದದೇ ಇರುವಂತಹ ಅರ್ಥಶಾಸ್ತ್ರ, ಇತಿಹಾಸ, ಮನೋವಿಜ್ಞಾನ, ಆರೋಗ್ಯ ಶಾಸ್ತ್ರ, ವಿವಿಧ ಕಲೆಗಳು ಮುಂತಾದ ಸಮಾಜ ವಿಜ್ಞಾನಗಳ ಶಿಸ್ತುಗಳು ಹೇಗೆ ಸಾಹಿತ್ಯದ ಮೇಲೆ ಪ್ರಭಾವ ಬೀರಿವೆ ಎಂಬುದರ ಅಧ್ಯಯನವು ಕೂಡ ಅಂತರ್‌ಶಿಸ್ತೀಯ ಮತ್ತು ಬಹುಶಿಸ್ತೀಯ ಅಧ್ಯಯನಗಳ ಕಕ್ಷೆಯೊಳಗೇ ಬರುತ್ತದೆ.

ನಿದರ್ಶನಕ್ಕಾಗಿ ಒಂದು ಸಂಶೋಧನೆಯ ಮೇಲೆ ಹೇಗೆ ಅನ್ಯಶಿಸ್ತೀಯ ಅಧ್ಯಯನಗಳು ನೆರವು ನೀಡಬಹುದು ಎಂಬುದನ್ನು ಗಮನಿಸೋಣ : ಭಾರತ ದೇಶಕ್ಕೆ ಈರುಳ್ಳಿಯು ೧೭ನೇ ಶತಮಾನದಲ್ಲಿ ಬಂದಿತು ಎಂಬ ವಿಚಾರ ಸಸ್ಯಶಾಸ್ತ್ರೀಯ ಸಂಶೋಧನೆಯಲ್ಲಿ ಚಾಲ್ತಿಯಲ್ಲಿತ್ತು. ಆದರೆ ಪ್ರಸಿದ್ಧ ಸಸ್ಯವಿಜ್ಞಾನಿಗಳಾದ ಬಿ. ಜಿ. ಎಲ್. ಸ್ವಾಮಿ ಅವರು ಕನ್ನಡ ಸಾಹಿತ್ಯದ ವಿಚಾರವೊಂದನ್ನು ತಮ್ಮ ಸಸ್ಯಶಾಸ್ತ್ರದ ಸಂಶೋಧನೆಗೆ ಬಳಸಿಕೊಂಡರು. ಇದರ ಪ್ರತಿಫಲ ಎಂದರೆ ಭಾರತಕ್ಕೆ ಈರುಳ್ಳಿಯು ಪ್ರವೇಶಿಸಿದ್ದು ೧೩ನೇ ಶತಮಾನದಲ್ಲಿ ಎಂಬುದೇ ಆಗಿದೆ. ಇಲ್ಲಿ ಸ್ವಾಮಿಯವರು ೧೩ನೇ ಶತಮಾನದ ಹರಿಹರನ ‘ಬಸವರಾಜ ದೇವರ ರಗಳೆ’ಯಲ್ಲಿ ಪ್ರಸ್ತಾಪಿತವಾಗಿರುವ ಈರುಳ್ಳಿಯ

ಮೆರವಣಿಗೆಯನ್ನು ತಮ್ಮ ಈ ಹೊಸ ಶೋಧಕ್ಕೆ ಆಧಾರವನ್ನಾಗಿರಿಸಿಕೊಂಡರು. ಹೇಗೆಂದರೆ ಒಂದು ಶುದ್ಧ ವಿಜ್ಞಾನದ ಸಂಶೋಧನೆಯ ಪ್ರತಿಫಲಕ್ಕೆ ಕನ್ನಡ ಸಾಹಿತ್ಯದ ಕೃತಿಯೊಳಗೆ ಬರುವ ವಿಚಾರವೊಂದು ಹೇಗೆ ಪೂರಕವಾಯಿತು ಎಂಬುದೇ ಆಗಿದೆ. ಬಹುಶಃ ಅಂತರ್‌ಶಿಸ್ತೀಯ ಮತ್ತು ಬಹುಶಿಸ್ತೀಯ ಅಧ್ಯಯನ ವಿಧಾನಕ್ಕೆ ಇದೊಂದು ಒಳ್ಳೆಯ ನಿದರ್ಶನ.

ಹಾಗೆಯೇ 'ಪಂಪ ಭಾರತ'ದಲ್ಲಿ ಒಂದು ಪ್ರಸಂಗ ಬರುತ್ತದೆ. ಸುಭದ್ರೆಯು ಅರ್ಜುನನ ಚಿತ್ರಪಟವನ್ನು ಗಮನಿಸುತ್ತಿರುತ್ತಾಳೆ: ಆಗ ಕವಿ ಪಂಪ ಚಿತ್ರಕಲೆಯನ್ನು ಕುರಿತು "ಸಮತಟ್ಟಾದ ಒಂದು ಪದಾರ್ಥದ ಮೇಲೆ ಕೇವಲ ಗೆರೆಗಳ ಮೂಲಕ ಹೇಗೆ ಚಿತ್ರಕಾರ ಆಳ, ಎತ್ತರ, ಉಬ್ಬು, ತಗ್ಗುಗಳನ್ನು ಅನುಭವಕ್ಕೆ ಬಂದಂತೆ ಮಾಡುತ್ತದೆ ಈ ಚಿತ್ರಕಲೆ" ಎಂದು ಉದ್ಗಾರ ತೆಗೆಯುತ್ತಾನೆ. ವಾಗ್ರೂಪದ ಕಲೆಯಾದ ಸಾಹಿತ್ಯ ಕೃತಿಯಲ್ಲಿ ಚಿತ್ರಕಲೆಯ ಈ ಸೂಕ್ಷ್ಮ ವಿಷಯ ಹೇಗೆ ಹೊಂದಾಣಿಕೆಯಾಯಿತು ಮತ್ತು ಔಚಿತ್ಯಪೂರ್ಣವಾಯಿತು ಎಂಬುದಕ್ಕೆ ಅಂತರ್‌ಶಿಸ್ತಿಯ ಮತ್ತು ಬಹುಶಿಸ್ತೀಯ ಅಧ್ಯಯನ ಹೇಗೆ ಅನಿವಾರ್ಯವಾಗುತ್ತದೆ ಎಂಬುದನ್ನು ಈ ಪ್ರಸಂಗದಿಂದ ತಿಳಿದು ಕೊಳ್ಳಬಹುದು. ಇಲ್ಲಿ "ಕನ್ನಡ ಸಂಶೋಧನೆಯ ಆಯಾಮಗಳು ವಿಸ್ತರಿಸುತ್ತಿದ್ದಂತೆ ಭಾಷಾಶಾಸ್ತ್ರ, ಇತಿಹಾಸ, ಸಮಾಜಶಾಸ್ತ್ರ, ಮಾನವಶಾಸ್ತ್ರ, ಜಾನಪದ ಮುಂತಾದವುಗಳ ನೆರವು ಪಡೆಯುವುದು ಅಧಿಕವಾಗಿದೆ. ಸಾಹಿತ್ಯ ಸಂಶೋಧಕರು ಇತಿಹಾಸವನ್ನು ಸಾಹಿತ್ಯಕ್ಕೆ ಅನ್ವಯಿಸಿ ಬರೆಯುವುದು ಹೆಚ್ಚಾಗಿದೆ. ಅದರ ಜೊತೆಗೆ ಇತರ ಅಧ್ಯಯನ ವಿಭಾಗಗಳ ಸಹಯೋಗದೊಂದಿಗೆ ಅಂತರ್‌ವಿಭಾಗೀಯ ಸಂಶೋಧನೆಯನ್ನು ಕೈಗೊಳ್ಳುತ್ತಿದ್ದಾರೆ. ಇದು ಕನ್ನಡ ಸಂಶೋಧನೆಯಲ್ಲಿ ಹೊಸ ತಿರುವು ಪಡೆಯುವುದರಲ್ಲಿ ಸಂಶಯವಿಲ್ಲ" (ಆರ್. ವಿ. ಎಸ್. ಸುಂದರಂ, 'ಅಂತರ್‌ವಿಭಾಗೀಯ ಸಂಶೋಧನೆ' – ಶ್ರೀಮುಖ, ಪುಟ. ೫೮೨). ಇತ್ತೀಚಿನ ವರ್ಷಗಳಲ್ಲಿ ಸಮಾಜಶಾಸ್ತ್ರ, ಇತಿಹಾಸದ ವಿದ್ವಾಂಸರು ತಮ್ಮ ಸಂಶೋಧನೆಗೆ ಸಾಹಿತ್ಯ ಕೃತಿಗಳನ್ನೂ ಆಕರಗಳನ್ನಾಗಿ ಬಳಸಿಕೊಳ್ಳುತ್ತಿರುವುದು ಕಂಡುಬರುತ್ತಿದೆ.

ಸಾಹಿತ್ಯವು ಒಟ್ಟು ಮನುಕುಲದ ಉತ್ಪಾದನೆಯಾದದ್ದರಿಂದ ಮತ್ತು ಮನುಕುಲಕ್ಕೆ ಏನೆಲ್ಲಾ ವಿಷಯಗಳು ಅಗತ್ಯವೋ ಅವೆಲ್ಲವೂ ಸಾಹಿತ್ಯಕ್ಕೂ ಪೂರಕವಾಗಿಯೇ ಇರುತ್ತವೆ. ಸಾಹಿತ್ಯದ ಸ್ವರೂಪವನ್ನು ಗಮನಿಸಿದರೆ ಅದರಲ್ಲಿ ನಾವು ಎರಡು ಅಂಶಗಳನ್ನು ಪರಿಭಾವಿಸಬಹುದು. ೧) ಸಾಹಿತ್ಯವು ಸೌಂದರ್ಯಾನುಭವವನ್ನು ನೀಡಬೇಕು. ೨) ಸಾಹಿತ್ಯವು ಸಾಮಾಜಿಕವಾಗಿ ಪ್ರಸ್ತುತವಾಗಿರಬೇಕು. ಆದರೆ ಇಲ್ಲಿ ಕೆಲವು ಸಾಹಿತ್ಯ ರೂಪಗಳು ಕೇವಲ ಸೌಂದರ್ಯಾನುಭವವನ್ನು ನೀಡುತ್ತವೆ. ಇನ್ನು ಕೆಲವು ಸಾಹಿತ್ಯ ರೂಪಗಳು ಸೌಂದರ್ಯಾನುಭವವನ್ನು ನೀಡದೆ ಕೇವಲ ಸಾಮಾಜಿಕ ಸಮಸ್ಯೆಗಳನ್ನು ಕುರಿತ ಕಾಳಜಿಯನ್ನು ಮಾತ್ರ ತೋರುತ್ತವೆ. ವಾಸ್ತವವಾಗಿ ಸಾಹಿತ್ಯವು ಈ ಎರಡು ಅಂಶಗಳನ್ನು ಅತ್ಯಂತ ಔಚಿತ್ಯಪೂರ್ಣ ಪ್ರಮಾಣದಲ್ಲಿ ಒಳಗೊಂಡಿರಬೇಕಾಗುತ್ತದೆ. ಹೀಗಾಗಿ ಒಂದು ದೃಷ್ಟಿಯಿಂದ ಅಂತರ್‌ಶಿಸ್ತೀಯ ಹಾಗೂ ಬಹುಶಿಸ್ತೀಯ ಅಧ್ಯಯನಗಳ ವಿಧಿವಿಧಾನಗಳ ಅನ್ವಯವನ್ನು ಸಾಹಿತ್ಯಕ್ಕೆ ಅಳವಡಿಸುವುದು ತೀರಾ ಅನಿವಾರ್ಯವೇ ಸರಿ. ಏಕೆಂದರೆ ಸೌಂದರ್ಯಾನುಭವದ ವಿಭಾಗದಲ್ಲಿ ಅಲಂಕಾರಶಾಸ್ತ್ರ, ಸೌಂದರ್ಯ ಶಾಸ್ತ್ರ, ಕಾವ್ಯಮೀಮಾಂಸೆ, ವಿಮರ್ಶೆ, ಛಂದಸ್ಸು ಮುಂತಾದ ಶಾಸ್ತ್ರಗಳ ಆಳವಾದ ತಿಳುವಳಿಕೆ, ವಿವೇಚನೆ ತೀರಾ ಅಗತ್ಯ. ಹಾಗೆಯೇ ಸಾಹಿತ್ಯದಲ್ಲಿ ಬರುವ ಸಾಮಾಜಿಕ ಕಾಳಜಿಗಳ ವಿವೇಚನೆಗೆ ಒಂದು ರಾಷ್ಟ್ರದ ಸ್ವರೂಪ, ಅದರ ಇತಿಹಾಸ, ಅಲ್ಲಿನ ಜನರ ಸಂಸ್ಕೃತಿ ಮೀಮಾಂಸೆ, ಆ ಸಮಾಜದವರು ನಂಬಿಕೊಂಡಿದ್ದ ವಿವಿಧ ಧರ್ಮಗಳು, ಅಂದಂದಿನ ಕಾಲದ ಜನರ ಅಪೇಕ್ಷೆಗಳಿಗೆ ಪೂರಕವಾಗಿ ಬರುವ ಯಾವುದೇ ವಿಚಾರಗಳು ಇವೆಲ್ಲವುಗಳ ತತ್ವದ ಅನ್ವಯವನ್ನು ಸಾಹಿತ್ಯದ ಒಡಲಿಗೆ ತಳುಕುಹಾಕಿ ವಿಮರ್ಶೆ ಮಾಡಲೇಬೇಕಾಗುತ್ತದೆ. ಈ ರೀತಿಯ ಹೊಸನೋಟದ ಅಧ್ಯಯನವೇ ಅಂತರ್‌ಶಿಸ್ತೀಯ ಹಾಗೂ ಬಹುಶಿಸ್ತೀಯ ಅಧ್ಯಯನ.

ಈ ಅಂತರ್‌ಶಿಸ್ತೀಯ ಹಾಗೂ ಬಹುಶಿಸ್ತೀಯ ಅಧ್ಯಯನದ ಬೆಳವಣಿಗೆಯ ದೃಷ್ಟಿಯಿಂದ ಹಂಪಿಯ ಕನ್ನಡ ವಿಶ್ವವಿದ್ಯಾಲಯವು ಡಾ॥ ಅಮರೇಶ ನುಗಡೋಣಿ ಅವರ ಸಂಪಾದಕತ್ವದಲ್ಲಿ 'ಕನ್ನಡ ಸಂಶೋಧನೆಯ ವೈಧಾನಿಕತೆಗಳು' ಎಂಬ ಪುಸ್ತಕವನ್ನು ಹೊರತಂದಿದೆ. ರಹಮತ್ ತರೀಕೆರೆ, ಹೆಚ್. ಎಸ್. ರಾಘವೇಂದ್ರರಾವ್, ಮೊಗಳ್ಳಿ ಗಣೇಶ್, ಬಂಜಗೆರೆ ಜಯಪ್ರಕಾಶ್ ಮುಂತಾದ ವಿಮರ್ಶಕರು ಈ ಹೊಸ ಶಿಸ್ತಿನ ವಿವಿಧ ಮಾನದಂಡಗಳ ಆನ್ವಯಿಕತೆಯ ತತ್ವಚಿಂತನೆಗಳನ್ನು ದೃಷ್ಟಾಂತಗಳೊಂದಿಗೆ ನಿರೂಪಿಸಿದ್ದಾರೆ. ಉದಾಹರಣೆ : ಒಂದು ಸಾಹಿತ್ಯ ಕೃತಿಯ ಅಧ್ಯಯನವನ್ನು ಮಹಿಳಾ ಅಧ್ಯಯನದ ದೃಷ್ಟಿಕೋನದಿಂದ ಹೇಗೆ ಪರಿಭಾವಿಸಬಹುದು ಎಂಬ ಚಿಂತನೆಗಳನ್ನು ಹೆಚ್. ಎಸ್. ರಾಘವೇಂದ್ರ ರಾವ್ ಅವರ 'ಸಾಹಿತ್ಯಾಧ್ಯಯನ ಮತ್ತು ಮಹಿಳಾ ಅಧ್ಯಯನ' ಎಂಬ ಲೇಖನದಲ್ಲಿ ಗಮನಿಸಬಹುದು. ಇಲ್ಲಿ ಸ್ತ್ರೀವಾದದ ಹಿನ್ನೆಲೆಯಲ್ಲಿ ತೇಜಸ್ವಿಯವರ 'ಕಿರಗೂರಿನ ಗಯ್ಯಾಳಿಗಳು' ಕಥಾಸಂಕಲನ ಹೇಗೆ ಗಟ್ಟಿಯಾದ ಕೃತಿಯಾಗಿ ಹೊರಹೊಮ್ಮುತ್ತದೆ ಎನ್ನುವ ರೀತಿಯಲ್ಲೂ ಆಲೋಚನೆಗಳನ್ನು ಮಾಡಬಹುದು ಎಂಬುದನ್ನು ಅವರು ತೋರಿಸಿದ್ದಾರೆ. ಇದು ಅಂತರ್‌ಶಿಸ್ತೀಯ ಹಾಗೂ ಬಹುಶಿಸ್ತೀಯ ಅಧ್ಯಯನಗಳ ಪ್ರಯೋಜನ. ತೇಜಸ್ವಿಯವರ ಒಟ್ಟು ಬರಹಗಳನ್ನು ವಿಜ್ಞಾನ, ಪ್ರಾಣಿಶಾಸ್ತ್ರ, ಛಾಯಾಚಿತ್ರ ವಿಚಾರಗಳು, ಸಸ್ಯವಿಜ್ಞಾನ, ಪರಿಸರ, ಪ್ರಕೃತಿಶಾಸ್ತ್ರ ಇವುಗಳನ್ನು ಹೊರತುಪಡಿಸಿ ವಿಶ್ಲೇಷಣೆಗೆ ಒಳಪಡಿಸಿ ನೋಡಲು ಬರುವುದಿಲ್ಲ; ಎಂದರೆ ಒಂದು ಸಾಹಿತ್ಯ ಪರಂಪರೆಯ ಯಾವುದೇ ಕಾಲಘಟ್ಟದ ಒಬ್ಬ ಮಹತ್ವದ ಲೇಖಕನ ಪೂರ್ಣದರ್ಶನವಾಗಬೇಕಾದರೆ ಕೇವಲ ಸಾಹಿತ್ಯಶಾಸ್ತ್ರ ಮಾತ್ರ ಸಾಕಾಗುವುದಿಲ್ಲ. ಅಂದರೆ ಕೃತಿನಿಷ್ಠ ಅಧ್ಯಯನ ಮಾತ್ರ ಸಾಲದು. ಆ ಕೃತಿಯನ್ನು ನಿರ್ಮಿಸಿದ ಬಾಹ್ಯ ಒತ್ತಡಗಳು, ಶಿಸ್ತುಗಳೂ ಕಾರಣವಾಗಿರುತ್ತವೆ. ಅವುಗಳನ್ನು ಆ ಕೃತಿಯ ಒಳಗಿನಿಂದ ಗುರುತಿಸುವ ಒಂದು ವಿಧಾನವು ಈ ಬಹುಶಿಸ್ತೀಯ ಅಧ್ಯಯನದ ಚೌಕಟ್ಟಿಗೆ ಬರುತ್ತದೆ.

ಇನ್ನು ಹಳೆಗನ್ನಡ, ನಡುಗನ್ನಡ ಕವಿಗಳ ವಿಚಾರಕ್ಕೆ ಬಂದರೆ ಅಂದಿನ ಸಮಾಜದಲ್ಲಿ ರೂಢಿಯಲ್ಲಿದ್ದ ಹಲವಾರು ಶಾಸ್ತ್ರಗಳ ಸ್ವರೂಪದ ಬಗ್ಗೆ ಖಚಿತ ಜ್ಞಾನವನ್ನು ಪಡೆದುಕೊಂಡಿರುವುದು ತುಂಬ ಒಳ್ಳೆಯದು. ನಯಸೇನನಂತಹ ಕವಿಯ 'ಧರ್ಮಾಮೃತ'ದಲ್ಲಿ ಅಂದಿನ ಸಮಾಜದ ಹಲವಾರು ಸಾಮಾಜಿಕ ವಿಚಾರಗಳು ಬರುತ್ತವೆ. ಉದಾಹರಣೆ: ಅವನು ಸಂಸ್ಕೃತ–ಕನ್ನಡದ ಅನಗತ್ಯ ಮಿಶ್ರಣವನ್ನು ಕುರಿತು "ತಕ್ಕುದೇ ಬೆರೆಸಲ್ಕೆ ಘೃತಮುಮಂ ತೈಲಮುಮಂ" ಎನ್ನುತ್ತಾನೆ. ಇಲ್ಲಿ ಸಂಸ್ಕೃತ–ಕನ್ನಡವನ್ನು ಅನಗತ್ಯವಾಗಿ ಬೆರೆಸಬಾರದು ಎಂಬ ಕೇವಲ ಭಾಷಾ




ನವಕರ್ನಾಟಕ ಪ್ರಕಟಿಸಿರುವ ಎಸ್. ಮಾಲತಿಯವರ 'ಸೀತಾ ಚರಿತ' (ನಾಟಕ) ಕೃತಿಯನ್ನು ದಿನಾಂಕ ೨೧.೫.೨೦೧೭ರಂದು ಡಾ॥ ನಾ. ಡಿಸೋಜ ಬಿಡುಗಡೆ ಮಾಡಿದರು. ಸಾಗರದ ಕನ್ನಡ ಸಾಹಿತ್ಯ ಪರಿಷತ್ತು ಮತ್ತು ಅಂತರಂಗ ಟ್ರಸ್ಟ್ ಇವರ ಸಹಯೋಗದಲ್ಲಿ ಏರ್ಪಡಿಸಿದ ಕಾರ್ಯಕ್ರಮದಲ್ಲಿ ಡಾ॥ ಜಿ. ಎಸ್. ಭಟ್, ಪ್ರೊ॥ ರಾಜೇಂದ್ರ ಚೆನ್ನಿ, ಶ್ರೀ ಎಸ್. ವಿ. ಹಿತಕರ ಜೈನ್ ಮತ್ತು ಲೇಖಕಿ ಎಸ್. ಮಾಲತಿ ವೇದಿಕೆಯಲ್ಲಿ ಉಪಸ್ಥಿತರಿದ್ದರು.

ವಿಚಾರವನ್ನು ಮಾತ್ರ ನಾವು ಗಮನಿಸಬಾರದು. ನಯಸೇನನ ಕಾಲದ ಸಮಾಜದಲ್ಲಿ ವ್ಯಾಪಾರಿಗಳು ತುಪ್ಪಕ್ಕೆ ಎಣ್ಣೆಯನ್ನು ಬೆರೆಸುತ್ತಿದ್ದರು ಎಂದು ತಿಳಿಯುತ್ತದೆ. ಈ ಒಂದು ಸಣ್ಣ ಉದಾಹರಣೆಯ ವಿಚಾರದಲ್ಲೇ ಸಹೃದಯರು ವ್ಯಾಪಾರ ಧರ್ಮದ ಬಗ್ಗೆ ತಿಳಿದುಕೊಂಡಿರಲೇಬೇಕಾಗುತ್ತದೆ.

ಹಾಗೆಯೇ 'ಪಂಪ ಭಾರತ'ದಲ್ಲಿ ಬರುವ ಯುದ್ಧದ ಚಿತ್ರಣಗಳು ಬಹಳ ಕುತೂಹಲಕಾರಿಯಾಗಿವೆ. ಯುದ್ಧಾನಂತರ ರಾತ್ರಿಯಲ್ಲಿ ಸೈನಿಕರ ಬಿಡಾರಗಳಲ್ಲಿ ಔಷಧೋಪಚಾರಗಳ ಪ್ರಸ್ತಾಪವು ಬರುತ್ತದೆ. ಒಬ್ಬ ಸೈನಿಕನ ಮಾಂಸಖಂಡದೊಳಗೆ ಸಿಕ್ಕಿಹಾಕಿಕೊಂಡಿದ್ದ ಆಯುಧದ ಚೂರೊಂದನ್ನು ತೆಗೆಯಲು ಬಹಳ ಪ್ರಯತ್ನಪಟ್ಟರೂ ಅದು ಹೊರಕ್ಕೆ ಬರುವುದಿಲ್ಲ. ಆಗ ಒಬ್ಬ ನಾಟಿ ವೈದ್ಯನು ಆ ಭಾಗದ ಮಾಂಸಖಂಡದ ಹತ್ತಿರ ಒಂದು ದೊಡ್ಡ ಅಯಸ್ಕಾಂತವನ್ನು ಹಿಡಿಯುತ್ತಾನೆ. ಆಗ ಸಹಜವಾಗಿಯೇ ಆಯುಧದ ಚೂರು ಅಯಸ್ಕಾಂತಕ್ಕೆ ಸಿಕ್ಕಿಹಾಕಿಕೊಳ್ಳುತ್ತದೆ. ಲೋಹಶಾಸ್ತ್ರದ ಈ ವಿಚಾರವು ಅಂದು ಆ ಶತಮಾನದ ಜನರಿಗೆ ಗೊತ್ತಿತ್ತು ಎಂಬುದನ್ನು ನಾವು ತಿಳಿದುಕೊಳ್ಳಲು ಈ ಹೊಸ ಅಧ್ಯಯನದ ಶಿಸ್ತಿನ ಅರಿವು ನಮಗೆ ಇರಬೇಕಾಗುತ್ತದೆ. ಇದಕ್ಕೆ ಆಳವಾದ ಓದು, ಬಹುಶಿಸ್ತುಗಳ ಪರಿಚಯ ಸಂಶೋಧಕನಾದವನಿಗೆ ಅತ್ಯಗತ್ಯ.

ನಮ್ಮ ಮಹತ್ವದ ಲೇಖಕರಾದ ಕುವೆಂಪು ಅವರ ಕೃತಿಗಳನ್ನು ಅರ್ಥೈಸುವಾಗ ಭಾರತೀಯ ತತ್ವಶಾಸ್ತ್ರ, ವಿಜ್ಞಾನ, ಮೆಟಾಫಿಸಿಕ್ಸ್, ಸಾಮಾಜಿಕ ಹಾಗೂ ಚರಿತ್ರೆಯ ಆಳವಾದ ತಿಳುವಳಿಕೆ, ಭಾರತೀಯ ಪುರಾಣಗಳ ಬಗ್ಗೆ ಹಾಗೂ ಹಳಗನ್ನಡ ಸಾಹಿತ್ಯ, ವರ್ಣಾಶ್ರಮದ ವಿವರಗಳು, ಪರಿಸರ ಇವುಗಳ ಅಂತರ್ ಸಂಬಂಧದ ಆಳವಾದ ತಿಳುವಳಿಕೆ ಅಗತ್ಯ.

ಕನ್ನಡದ ಇನ್ನೊಬ್ಬ ಮಹತ್ವದ ಕವಿ ಬೇಂದ್ರೆಯವರ ಸಾಹಿತ್ಯದ ವಿರಾಟ ಸ್ವರೂಪದ ದರ್ಶನ ಮಾಡಿಕೊಳ್ಳಬೇಕಾದರೆ ಭಾರತೀಯ ದರ್ಶನಶಾಸ್ತ್ರ, ಸ್ವಾತಂತ್ರ್ಯ ಸಂಗ್ರಾಮದ ಚರಿತ್ರೆ, ಅರವಿಂದರ ವಿಚಾರಧಾರೆಗಳು, ಜನಪದ ಸಾಹಿತ್ಯ, ಸಂಖ್ಯಾಶಾಸ್ತ್ರ, ವ್ಯವಸಾಯ ವಿಜ್ಞಾನ ಇನ್ನೂ ಮುಂತಾದ ಹಲವು ಶಾಸ್ತ್ರಗಳ ತಿಳಿವಳಿಕೆ ಅತ್ಯವಶ್ಯಕ.

ನವ್ಯ ಮತ್ತು ನವ್ಯದ ನಂತರ ಬಂದ ಬಂಡಾಯ ಹಾಗೂ ದಲಿತ ಸಾಹಿತ್ಯಗಳ ಗ್ರಹಿಕೆಗೆ ಆ ಸಾಹಿತ್ಯಗಳನ್ನು ಪ್ರಭಾವಿಸಿರುವ ಸಮಾಜೋ-ಸಾಂಸ್ಕೃತಿಕ ವಿಚಾರಧಾರೆಗಳು ಬಹುಮುಖ್ಯ. ಗಾಂಧಿ, ಲೋಹಿಯಾ ಮತ್ತು ಅಂಬೇಡ್ಕರ್ ಅವರ ಪ್ರಖರ ಚಿಂತನೆಗಳ ಆಳವಾದ ಅಧ್ಯಯನ ಅವಶ್ಯ. ಹಲವಾರು ದಲಿತ-ಬಂಡಾಯ ಲೇಖಕರಲ್ಲಿ ಸಾಮಾಜಿಕ ಹಾಗೂ ಮಾನವಿಕ ವಿಜ್ಞಾನಗಳ ಫಲಿತಗಳು ಅಪಾರವಾದ ಪ್ರಮಾಣದಲ್ಲಿ ಹಾಸುಹೊಕ್ಕಾಗಿರುತ್ತವೆ. ಈ ದಿಶೆಯಲ್ಲಿ ಇಂದಿನ ಸಾಹಿತ್ಯಾಧ್ಯಯನಕ್ಕೆ ಅಂತರ್‌ಶಿಸ್ತೀಯ ಮತ್ತು ಬಹುಶಿಸ್ತೀಯ ಅಧ್ಯಯನಗಳು ಹೆಚ್ಚು ಪ್ರಖರತೆಯನ್ನು ಮತ್ತು ನಿಖರತೆಯನ್ನು ತಂದುಕೊಡಬಲ್ಲವು. ಸಂಸ್ಕೃತಿಯ ಅಖಂಡತೆಯನ್ನು ಅರ್ಥಮಾಡಿಕೊಳ್ಳಲು ಈ ಅಧ್ಯಯನಗಳು ತುಂಬಾ ಸಹಕಾರಿಯಾಗಬಲ್ಲವು.

ಅಂತರ್‌ಶಿಸ್ತೀಯ ಮತ್ತು ಬಹುಶಿಸ್ತೀಯ ಅಧ್ಯಯನಗಳ ಆನ್ವಯಿಕತೆಯು ಹೊಸ ಹೊಸ ರೀತಿಯ ಸಮಸ್ಯೆಗಳ ಸೃಷ್ಟಿಗೂ ಕಾರಣವಿರಬಹುದು ಎಂಬ ಎಚ್ಚರ ಸಹೃದಯನ ಮನಸ್ಸಿನಲ್ಲಿ ಸದಾ ಜಾಗೃತವಾಗಿರಬೇಕು. ಒಂದು ಸಾಹಿತ್ಯ ಕೃತಿ ಸಾಮಾಜಿಕವಾದಷ್ಟೂ ಈ ಅಧ್ಯಯನದ ಶಿಸ್ತುಗಳ ಅನ್ವಯ ಔಚಿತ್ಯವಾಗಿರುತ್ತದೆ. ಆದರೆ ರಸನಿಷ್ಠ ಸಾಹಿತ್ಯದ ಅಧ್ಯಯನಗಳಿಗೆ ಈ ಶಿಸ್ತನ್ನು ಬಳಸಬೇಕಾಗದೇ ಇರಬಹುದು. ಇನ್ನು ಯಾವುದೋ ಒಂದು ಕಾವ್ಯ ಭಾಗದ ನಿರ್ದಿಷ್ಟ ಪ್ರಸಂಗದ ವಿಶ್ಲೇಷಣೆಗೆ ಯಾವ ಶಿಸ್ತಿನ ಯಾವ ಭಾಗ ಎಷ್ಟರಮಟ್ಟಿಗೆ ಅನ್ವಯ ಎಂಬುದೂ ಮುಖ್ಯ. ಉದಾಹರಣೆ : ಗೋಪಾಲಕೃಷ್ಣ ಅಡಿಗರ 'ಮಿದುಳು ಬಚ್ಚಲ ಹಂಡೆಯಲಿ ಬೇಯುವ ಆಮೆ' ಎಂಬ ಸಾಲಿನ ಗ್ರಹಿಕೆಗೆ ಮತ್ತು ವಿಮರ್ಶೆಗೆ ಮಿದುಳು ಶಬ್ದವಿದೆ ಎಂಬ ಕಾರಣಕ್ಕೆ ವೈದ್ಯಶಾಸ್ತ್ರವೂ, ಬಚ್ಚಲಿನ ಪ್ರಸ್ತಾಪ ಬರುವುದರಿಂದ ಕಟ್ಟಡ ಶಾಸ್ತ್ರವೂ, ಆಮೆ ಬರುವುದರಿಂದ ಪ್ರಾಣಿಶಾಸ್ತ್ರವೂ ಇಲ್ಲಿ ಅಗತ್ಯವೇನಲ್ಲ. ಇಲ್ಲಿ ಕವಿ ಆಧುನಿಕ ಕಾಲದ ಅಸಹಾಯಕತೆ ಮತ್ತು ಬೇಸರಗಳನ್ನು ಪ್ರತಿಪಾದಿಸಲು ಈ ಶಬ್ದಗಳನ್ನು ಸಾಂಕೇತಿಕವಾಗಿ ಬಳಸುತ್ತಿದ್ದಾನಷ್ಟೆ. ಆದ್ದರಿಂದ ಅಂತರ್‌ಶಿಸ್ತೀಯ ಮತ್ತು ಬಹುಶಿಸ್ತೀಯ ಅಧ್ಯಯನದ ಅನ್ವಯ ಎಲ್ಲಿ ಎಷ್ಟರಮಟ್ಟಿಗೆ ಸರಿ ತಪ್ಪು ಇತ್ಯಾದಿಗಳ ಅರಿವು ಪ್ರಧಾನ ಪಾತ್ರ ವಹಿಸುತ್ತದೆ.

ಅನಗತ್ಯವಾಗಿ ಮತ್ತು ಅಸಂಬದ್ಧವಾಗಿ ಒಂದು ಅಧ್ಯಯನದ ಶಿಸ್ತಿಗೆ ಮತ್ತೊಂದು ಅಧ್ಯಯನದ ಶಿಸ್ತಿನ ಮಾನದಂಡವನ್ನು ಬಳಸಿದಾಗ ರಸಾನುಭವಕ್ಕೆ ಬದಲು ಗ್ರಹಿಕೆಗೆ ತೊಡಕಾಗುವ ಅಪಾಯದ ಸಾಧ್ಯತೆಗಳಿವೆ ಎಂಬ ಪ್ರಜ್ಞೆ ನಮ್ಮ ಮನಸ್ಸಿನಲ್ಲಿರಬೇಕು. ಈ ಶಿಸ್ತಿನ ಸೂಕ್ಷ್ಮವಾದ ಔಚಿತ್ಯಪೂರ್ಣವಾದ ಅನ್ವಯವು ಒಂದು ಸಾಹಿತ್ಯ ಕೃತಿಯನ್ನು ಸಮಗ್ರವಾಗಿ ಆಸ್ವಾದಿಸಲು ನೆರವು ನೀಡುತ್ತದೆ.

ಹಾಗೆ ನೋಡಿದರೆ ಇದರ ಅತ್ಯುತ್ತಮ ಭಾರತೀಯ ಮಾದರಿ ಎಂದರೆ ರಾಮ ಮನೋಹರ ಲೋಹಿಯಾ. ರಾಜಕಾರಣ, ಸಂಸ್ಕೃತಿ ಅಧ್ಯಯನ, ಸಮಾಜಶಾಸ್ತ್ರೀಯ ತಿಳುವಳಿಕೆ, ಜನಪರ ಪ್ರಭುತ್ವದ ಪರಿಕಲ್ಪನೆ, ಶುದ್ಧ ಲೌಕಿಕನೊಬ್ಬನ ಸಹಜ ಆಕಾಂಕ್ಷೆಗಳು ಈ ಎಲ್ಲವನ್ನೂ ಬೆರೆಸಿದ ಅಪರೂಪದ ನಾಗರಿಕ ವ್ಯಕ್ತಿಯ ಮಾದರಿಯೊಂದನ್ನು ಕಟ್ಟಲು ಯತ್ನಿಸಿ ಗೆದ್ದವರು ಲೋಹಿಯಾ. ಕನ್ನಡದಲ್ಲಿ ಪೂರ್ಣಚಂದ್ರ ತೇಜಸ್ವಿ, ಲೋಹಿಯಾ ಅವರ ಕನ್ನಡ ಅನುವಾದದಂತೆಯೇ ಕಾಣಿಸುತ್ತಾರೆ. ಸಂಶೋಧನ ಮತ್ತು ಅಧ್ಯಯನ ಕ್ಷೇತ್ರದಲ್ಲಿ, ಕೆ. ವಿ. ನಾರಾಯಣ, ಡಿ. ಆರ್. ನಾಗರಾಜ, ಬಸವರಾಜ ಕಲ್ಗುಡಿ, ರಹಮತ್ ತರೀಕೆರೆ, ಕಿ. ರಂ. ನಾಗರಾಜ, ಎಸ್. ಚಂದ್ರಶೇಖರ್, ಷ. ಷಟ್ಟರ್, ರಾಜಾರಾಮ್ ತೊಳ್ಪಾಡಿ, ರಾಜೇಂದ್ರ ಚೆನ್ನಿ, ಹೆಚ್. ಎಸ್. ರಾಘವೇಂದ್ರರಾವ್ ಮುಂತಾದವರೆಲ್ಲರೂ ಅಂತರ್‌ಶಿಸ್ತೀಯ ಮತ್ತು ಬಹುಶಿಸ್ತೀಯ ಅಧ್ಯಯನ ವಿಧಾನಗಳಿಗೆ ಅತ್ಯುತ್ತಮ ಮಾದರಿಗಳನ್ನು ಒದಗಿಸಿದವರೇ ಆಗಿದ್ದಾರೆ.

ಎ. ಕೆ. ರಾಮಾನುಜನ್ ಅವರ ಸಾಹಿತ್ಯವನ್ನು ಒಂದು ಶಿಸ್ತಿನ ಅಧ್ಯಯನದಲ್ಲಿ ನೋಡುವುದು ಕಷ್ಟದ ಕೆಲಸ ಎಂಬುದಕ್ಕೆ ರಾಮಾನುಜನ್ ಅವರ ಸಾಹಿತ್ಯವೇ ಸಾಕ್ಷಿ. ಯಾಕೆಂದರೆ ಅವರ ಸಾಹಿತ್ಯ, ಭಾಷಾಶಾಸ್ತ್ರ, ಜಾನಪದ, ತತ್ತ್ವಶಾಸ್ತ್ರ ಮತ್ತು ಹಲವು ಮಾನವಿಕಶಾಸ್ತ್ರಗಳ ಜೊತೆಗೆ ಅವರ ವಿಚಾರಗಳು ಹಾಸುಹೊಕ್ಕಾಗಿವೆ. ಇವರು ಆಳವಾದ ತಿಳುವಳಿಕೆಯಿಂದ ಭಾರತೀಯ ಮತ್ತು ಪಾಶ್ಚಿಮಾತ್ಯ ಸಾಹಿತ್ಯ ಚಿಂತನೆಗೆ ಅಪಾರವಾದ ಕೊಡುಗೆಯನ್ನು ನೀಡಿದ್ದಾರೆ. ಕನ್ನಡ ಮತ್ತು ಭಾರತದಲ್ಲಷ್ಟೇ ಅಲ್ಲದೆ ಅಮೆರಿಕಾದಂತಹ ಮುಂದುವರಿದ ರಾಷ್ಟ್ರಗಳಲ್ಲಿ ಇವರ ಸಾಹಿತ್ಯ ಜ್ಞಾನದ ಕೊಡುಗೆ ಅಪಾರವಾಗಿದೆ. ಹಾಗಾಗಿ ಇವರ ಸಾಹಿತ್ಯ ಹಾಗೂ ಚಿಂತನೆಗಳನ್ನು ಅಂತರ್‌ಶಿಸ್ತೀಯ ಹಾಗೂ ಬಹುಶಿಸ್ತೀಯ ಅಧ್ಯಯನದ ನೆಲೆಯಲ್ಲಿಯೇ ನೋಡಬೇಕಾಗುತ್ತದೆ.

ಆಧುನಿಕ ಹಾಗೂ ಪ್ರಸ್ತುತ ಸಂದರ್ಭದಲ್ಲಿ ಬರೆಯುತ್ತಿರುವ ಲೇಖಕರು ಈ ಅಂತರ್‌ಶಿಸ್ತೀಯ ಮತ್ತು ಬಹುಶಿಸ್ತೀಯ ಅಧ್ಯಯನಗಳ ಮಾದರಿಗಳನ್ನು ಬಳಸಿಕೊಂಡೇ ಸಾಹಿತ್ಯದ ಕೃಷಿಯಲ್ಲಿ ಮುಂದುವರಿಸುತ್ತಿದ್ದಾರೆ ಎಂಬ ಸಂಗತಿಯು ಕಣ್ಣಿಗೆ ಕಟ್ಟುವಷ್ಟು ಗಟ್ಟಿಯಾಗಿ ನಮಗೆ ಕಾಣುತ್ತಿದೆ. ರಾಜೀವ ತಾರಾನಾಥ್ (ಸಾಹಿತ್ಯ ಮತ್ತು ಸಂಗೀತ), ಪಿ. ಲಂಕೇಶ್ (ಸಾಹಿತ್ಯ ಮತ್ತು ಸಿನೆಮಾ), ಪ್ರಸನ್ನ (ಸಾಹಿತ್ಯ ಮತ್ತು ರಂಗಭೂಮಿ), ಕೆ. ವಿ. ಸುಬ್ಬಣ್ಣ (ಸಾಹಿತ್ಯ, ಕೃಷಿ, ಸಂಘಟನೆ), ಈ ಎಲ್ಲ ಲೇಖಕರಲ್ಲೂ ಅನ್ಯಕ್ಷೇತ್ರಗಳ ತಿಳುವಳಿಕೆ ಮತ್ತು ಆಸಕ್ತಿ ಇತರ ಕ್ಷೇತ್ರಗಳಲ್ಲಿನ ಅವರ ಪ್ರಯೋಗಗಳನ್ನು ಹೆಚ್ಚು ಸಮೃದ್ಧವಾಗಿಸಿರುವುದನ್ನು ನಾವು ನೋಡಬಹುದು. ಐಟಿ/ಬಿಟಿ ಕ್ಷೇತ್ರದ ವಸುಧೇಂದ್ರ, ವಿಕ್ರಮ್‌ಸಂಪತ್, ವೈದ್ಯಕೀಯ ಕ್ಷೇತ್ರದ ಗುರುಪ್ರಸಾದ್ ಕಾಗಿನೆಲೆ, ಸಸ್ಯಶಾಸ್ತ್ರ ವಿಭಾಗದ ಕೆ. ಎನ್. ಗಣೇಶಯ್ಯ ಇನ್ನೂ ವಿವಿಧ ಕ್ಷೇತ್ರಗಳಲ್ಲಿ ಕೆಲಸ ಮಾಡುತ್ತಿರುವವರು ಸದ್ಯದಲ್ಲಿ ಬರವಣಿಗೆಯಲ್ಲಿ ತೊಡಗಿರುವ ಸ್ಥಿತಿಯಲ್ಲಿ ಹೇಗೆ ಈ ಅಂತರ್‌ಶಿಸ್ತೀಯ ಮತ್ತು ಬಹುಶಿಸ್ತೀಯ ಅಧ್ಯಯನಗಳು ಮಹತ್ವದ ಪಾತ್ರವನ್ನು ವಹಿಸುತ್ತವೆ ಎಂಬುದನ್ನು ಹೇಳಬೇಕಾದದ್ದೇ ಇಲ್ಲ. ಈ ದೃಷ್ಟಿಯಿಂದ ಇಂದು ಅಧ್ಯಯನಗಳು ಅಂತರ್‌ಶಿಸ್ತೀಯ ಹಾಗೂ ಬಹುಶಿಸ್ತೀಯ ಅಧ್ಯಯನಗಳನ್ನೂ ದಾಟಿ ಇನ್ನೇನೋ ಹೊಸದನ್ನು ಹುಡುಕುವುದರಲ್ಲಿ ತೊಡಗಿರುವುದು ಕಂಡುಬರುತ್ತಿದೆ.

ಷಣ್ಮುಖಾನಂದ
ಸಂಶೋಧನಾ ವಿದ್ಯಾರ್ಥಿ, ಭಾಷಾಂತರ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ, ಬಳ್ಳಾರಿ ಜಿಲ್ಲೆ

**ಬಾಲವಿಕಾಸ ಅಕಾಡೆಮಿ ಪ್ರಶಸ್ತಿ ಪುರಸ್ಕೃತರಿಗೆ ಅಭಿನಂದನೆ...**

ಕರ್ನಾಟಕ ಬಾಲವಿಕಾಸ ಅಕಾಡೆಮಿಯ ೨೦೧೧ರಿಂದ ೨೦೧೬ರ ವರೆಗಿನ ಪ್ರಶಸ್ತಿಗಳನ್ನು ಇತ್ತೀಚೆಗೆ ಪ್ರಕಟಿಸಿದೆ. ಪ್ರಶಸ್ತಿ ಪುರಸ್ಕೃತ ಲೇಖಕರಾದ ಡಾ॥ ನಾ. ಡಿಸೋಜಾ, ಪ್ರೊ॥ ಜಿ. ಎಸ್. ಜಯದೇವ, ಡಾ॥ ಸಿ. ಆರ್. ಚಂದ್ರಶೇಖರ್, ರೂಪಾ ಹಾಸನ್ ಮತ್ತು ಕಂಚ್ಯಾಣಿ ಶರಣಪ್ಪ ಅವರಿಗೆ 'ಹೊಸತು' ಹಾಗೂ 'ನವಕರ್ನಾಟಕ'ದ ಅಭಿನಂದನೆಗಳು.

# ಉತ್ತರ ಕೊರಿಯಾದ ಮೇಲೆ ಅಮೆರಿಕದ ಕೆಂಗಣ್ಣು



**ಈ**ಚೆಗೆ ಉತ್ತರ ಕೊರಿಯಾ ಮತ್ತು ಅಮೆರಿಕಗಳ ಮಧ್ಯೆ ಮತ್ತೊಮ್ಮೆ ಯುದ್ಧದ ವಾತಾವರಣ ಸೃಷ್ಟಿಯಾಗಿದೆ. ಕಾರಣ ನ್ಯೂಕ್ಲಿಯರ್ ಅಸ್ತ್ರಗಳನ್ನು ಹೊಂದಿರುವ ಈ ಪುಟ್ಟ ದೇಶ ನಡೆಸಿದ ಕ್ಷಿಪಣಿ ಪ್ರಯೋಗಗಳು. ತನ್ನ ತಂಟೆಗೆ ಬಂದರೆ ನ್ಯೂಕ್ಲಿಯರ್ ಅಸ್ತ್ರ ಬಳಸಿ ಅಮೆರಿಕವನ್ನು ಧೂಳೀಪಟ ಮಾಡುವುದಾಗಿಯೂ ಉತ್ತರ ಕೊರಿಯಾ ಬೆದರಿಕೆ ಹಾಕಿದೆ. ಇದು ಶ್ವೇತಭವನದ ಅತಿರೇಕದ ಅಧ್ಯಕ್ಷ ಟ್ರಂಪ್ ಎಗರಾಡುವಂತೆ ಮಾಡಿತು. ಜೊತೆಗೆ, ಉತ್ತರ ಕೊರಿಯಾದ ಸ್ಥಾಪಕ ಕಿಮ್ ಇಲ್‌ಸುಂಗ್ ೧೦೫ನೇ ಜನ್ಮದಿನದಂದು ನಡೆಸಿದ ಮಿಲಿಟರಿ ಪೆರೇಡ್ ಬಲಪ್ರದರ್ಶನ ಟ್ರಂಪ್‌ಗೆ ನಿದ್ರೆಗೆಡಿಸಿದೆ. ಏಶಿಯಾದ ಈ ಚಿಕ್ಕ ದೇಶದ ಮೇಲೆ ಮತ್ತಷ್ಟು ದಿಗ್ಬಂಧನ ಹೇರಿದೆ ಅಮೆರಿಕ. ಈಗಾಗಲೇ ಹಲವು ದಶಕಗಳಿಂದ ಅಮೆರಿಕದ ಆರ್ಥಿಕ ದಿಗ್ಬಂಧನ ಇದ್ದೇ ಇದೆ. ರಷ್ಯ, ಚೀಣಾಗಳ ನೆರವಿನಿಂದ ಕೊರಿಯಾ ಪರ್ಯಾಯ ದ್ವೀಪದ ಈ ಭೂಭಾಗ ಉಳಿದುಕೊಂಡಿದೆ.



ಅಮೆರಿಕ–ಉತ್ತರ ಕೊರಿಯಾಗಳ ಮಧ್ಯೆ ದ್ವೇಷ ಇಂದು ನಿನ್ನೆಯದಲ್ಲ, ಹೆಚ್ಚು ಕಡಿಮೆ ಏಳು ದಶಕಗಳಿಗೂ ಹಿಂದಿನದು. ಅಮೆರಿಕದ ಅಧ್ಯಕ್ಷ ಜಾರ್ಜ್ ಬುಷ್ ಉತ್ತರ ಕೊರಿಯಾಗೆ 'ದುಷ್ಟ ರಾಷ್ಟ್ರ' ಎಂಬ ಹಣೆಪಟ್ಟಿ ಹಚ್ಚಿದ್ದ. ಸಂಪೂರ್ಣವಾಗಿ ಮಿಲಿಟರೀಕರಣಗೊಂಡಿರುವ ಏಶಿಯಾ ಖಂಡದ ಪೂರ್ವ ದಿಕ್ಕಿನಲ್ಲಿರುವ ಸುಮಾರು ಮೂರು ಕೋಟಿ ಜನಸಂಖ್ಯೆಯ, ೧–೨ ಲಕ್ಷ ಚದರ ಕಿಲೋಮೀಟರ್ ವಿಸ್ತೀರ್ಣವುಳ್ಳ ಈ ದೇಶ ಅಮೆರಿಕದಂಥ ಪ್ರಬಲ ರಾಷ್ಟ್ರವನ್ನು ಎದುರು ಹಾಕಿಕೊಂಡು ಉಳಿದಿರುವುದೇ ಒಂದು ವಿಸ್ಮಯ. ವಿಶ್ವಸಂಸ್ಥೆಯ ಇತಿಹಾಸದಲ್ಲಿ 'ದುರಾಕ್ರಮಣಕಾರಿ' ಎಂಬ ಖಂಡನೆಗೆ ಈಡಾದ ಮೊದಲ ದೇಶ ಇದು. ಅನಂತರ ಎಷ್ಟೋ ಯುದ್ಧಗಳು ಸಂಭವಿಸಿದ್ದರೂ ಯಾವ ದೇಶವನ್ನೂ ದುರಾಕ್ರಮಣಕಾರಿ ಎಂದು ಹೆಸರಿಸಿಲ್ಲ. ಎರಡನೇ ಮಹಾಯುದ್ಧದ ನಂತರ ಉತ್ತರ, ದಕ್ಷಿಣ ಕೊರಿಯಾಗಳೆಂದು ವಿಭಜನೆಗೊಂಡ ದೇಶ ಇದುವರೆಗೆ ಒಂದಾಗಲೇ ಇಲ್ಲ.

೧೯೧೦ರಲ್ಲಿ ಚೀಣಾದ ಗಡಿಗೆ ಅಂಟಿಕೊಂಡಿರುವ ಕೊರಿಯಾ ಪರ್ಯಾಯ ದ್ವೀಪ ನೆರೆಯ ಜಪಾನಿನ ಆಕ್ರಮಣದಲ್ಲಿತ್ತು. ಬೆಟ್ಟ ಗುಡ್ಡಗಳು, ಗಿರಿಕಂದರಗಳಿಂದ ಕೂಡಿರುವ ಈ ದೇಶ ವಿಮೋಚನೆಗೊಂಡಿದ್ದು ಎರಡನೇ ಮಹಾಯುದ್ಧದ ಕಾಲದಲ್ಲಿ. ೧೯೪೫ರಲ್ಲಿ ಜಪಾನೀ ಮಿಲಿಟರಿಶಾಹಿಯನ್ನು ಪರಾಜಯಗೊಳಿಸಿದ ಮಿತ್ರ ಸೇನೆಗಳ ಪೈಕಿ ಅಂದಿನ ಸೋವಿಯೆತ್ ಒಕ್ಕೂಟ ಈ ಪರ್ಯಾಯ ದ್ವೀಪದ ಉತ್ತರ ಭಾಗವನ್ನು ಆಕ್ರಮಿಸಿಕೊಂಡರೆ ದಕ್ಷಿಣ ಭಾಗವನ್ನು ಆಕ್ರಮಿಸಿದ್ದು ಅಮೆರಿಕ. ಹಾಗಾಗಿ ಇಬ್ಭಾಗವಾದ ಈ ಭೂಭಾಗ ಈಗಲೂ ಒಂದಾಗಲು ಸಾಧ್ಯವಿಲ್ಲವಾಗಿದೆ. ಎರಡನೇ ಮಹಾಯುದ್ಧ ಕಾಲದಲ್ಲಿ ವಿಭಜನೆಗೊಂಡ ದೇಶಗಳು ಜರ್ಮನಿ ಮತ್ತು ವಿಯೆಟ್ನಾಮ್. ಆದರೆ ಅವು ಕೆಲಕಾಲಾನಂತರ ಒಂದಾದುವು. ಆದರೆ ಕೊರಿಯಾ ಮಾತ್ರ ಹಾಗೇ ಉಳಿಯಿತು. ವಿಶ್ವಸಂಸ್ಥೆಯ ನಿರ್ಣಯದ ಪ್ರಕಾರ ಈ ಎರಡು ಭಾಗಗಳನ್ನು ಒಂದಾಗಿಸುವುದು ರಷ್ಯ–ಅಮೆರಿಕ ಬಲಾಢ್ಯ ರಾಷ್ಟ್ರಗಳ ಹೊಣೆಯಾಗಿತ್ತು. ಆದರೆ ಶೀತಯುದ್ಧದ ಭರಾಟೆ ಜೋರಾಗಿದ್ದುದರಿಂದ ಅದು ಕೈಗೂಡಲಿಲ್ಲ.

೧೯೫೦ರಲ್ಲಿ ಎರಡೂ ದೇಶಗಳ ಮಧ್ಯೆ ಒಂದಾಗಲು ಸಶಸ್ತ್ರ ಘರ್ಷಣೆ ಪ್ರಾರಂಭವಾಯಿತು. ಶೀತಯುದ್ಧದ ಕಾಲದಲ್ಲಿ ಜರುಗಿದ ಮೊದಲ ಪ್ರಾದೇಶಿಕ ಯುದ್ಧ ಅದಾಗಿತ್ತು. ಈ ಯುದ್ಧ ಪ್ರಾರಂಭವಾದಾಗ ಸೋವಿಯೆತ್ ಒಕ್ಕೂಟ ವಿಶ್ವಸಂಸ್ಥೆಯ ಭದ್ರತಾ ಮಂಡಳಿಯ ಸಭೆಯಿಂದ ಹೊರನಡೆದು ಬಹಿಷ್ಕರಿಸಿತ್ತು. ಹಾಗಾಗಿ ಅಮೆರಿಕಾಗೆ ಉತ್ತರ ಕೊರಿಯಾವನ್ನು ದುರಾಕ್ರಮಣಕಾರಿ ಎಂದು ಹೆಸರಿಸಲು ಅವಕಾಶವಾಯಿತು. ವಿಶ್ವಸಂಸ್ಥೆಯ ಆಶ್ರಯದಲ್ಲಿ ಜರುಗಿದ ಯುದ್ಧವಾಯಿತು ಅದು. ಮೂರು ವರ್ಷಗಳು ಜರುಗಿದ ಈ ಯುದ್ಧದಲ್ಲಿ ಸೋವಿಯೆತ್ ಒಕ್ಕೂಟ ಉತ್ತರ ಕೊರಿಯಾಗೆ ಶಸ್ತ್ರಾಸ್ತ್ರ ಒದಗಿಸಿದರೆ, ಚೀಣಾ ಸಶಸ್ತ್ರ ಸೈನಿಕರನ್ನು ಸ್ವಯಂಸೇವಕರಾಗಿ ಕಳಿಸಿಕೊಟ್ಟಿತು. ಒಂದು ಹಂತದಲ್ಲಿ ಯುದ್ಧದಲ್ಲಿ ಅಮೆರಿಕ ಬೆಂಬಲಿತ ದಕ್ಷಿಣ ಕೊರಿಯಾ ಸೋಲನ್ನು ಅನುಭವಿಸುವ ಘಟ್ಟ ತಲುಪಿತ್ತು. ಭಾರತದ ಮಧ್ಯಸ್ಥಿಕೆಯಿಂದ ೧೯೫೩ರಲ್ಲಿ ಯುದ್ಧಸ್ತಂಭನ ಏರ್ಪಟ್ಟಿತು. ಉತ್ತರ ಮತ್ತು ದಕ್ಷಿಣ ಕೊರಿಯಾಗಳು ಮೊದಲಿನಂತೆ ಇಬ್ಭಾಗವಾಗಿಯೇ ಉಳಿದವು ಎರಡು ಸ್ವತಂತ್ರ ರಾಷ್ಟ್ರಗಳಾಗಿ. ಗಡಿರೇಖೆ ಉಲ್ಲಂಘನೆಯಾಗದಂತೆ ನೋಡಿಕೊಳ್ಳಲು ಕೆಲಕಾಲ ಭಾರತದ ಸೇನೆ ಉಸ್ತುವಾರಿ ನೋಡಿಕೊಳ್ಳುತ್ತಿತ್ತು. ಉತ್ತರ ಕೊರಿಯಾದಲ್ಲಿ ಕಮ್ಯುನಿಸ್ಟ್ ಸರಕಾರ ಸ್ಥಾಪನೆಗೊಂಡರೆ, ದಕ್ಷಿಣದಲ್ಲಿ ಅಮೆರಿಕ ಬೆಂಬಲಿತ ಸರಕಾರ ಅಸ್ತಿತ್ವಕ್ಕೆ ಬಂತು.

ಹೀಗೆ ಮತ್ತೆ ಇಬ್ಭಾಗಗೊಂಡ ಉತ್ತರ–ದಕ್ಷಿಣ ಕೊರಿಯಾಗಳ ಮಧ್ಯೆ ಆಗಾಗ್ಗೆ ಸಶಸ್ತ್ರ ಘರ್ಷಣೆಗಳು ನಡೆಯುತ್ತಲೇ ಇವೆ. ೧೯೭೦ರಲ್ಲಿ ಎರಡೂ ದೇಶಗಳನ್ನು ಒಂದು ಗೂಡಿಸಲು ಪ್ರಯತ್ನಗಳು ನಡೆದರೂ ಫಲಕಾರಿಯಾಗಲಿಲ್ಲ. ಅಮೆರಿಕದ ಸೇವೆ ಈಗಲೂ ದಕ್ಷಿಣ ಕೊರಿಯಾದಲ್ಲಿ ಭದ್ರವಾಗಿ ನೆಲೆಗೊಂಡಿದೆ. ಎಪ್ಪತ್ತು ವರ್ಷಗಳಿಂದ ಅಮೆರಿಕದ ಬಂಡವಾಳಶಾಹಿಗಳು ದಕ್ಷಿಣದಲ್ಲಿ ಹಲವು ಉದ್ಯಮಗಳನ್ನು ಸ್ಥಾಪಿಸಿದ್ದಾರೆ. ಎರಡು ಭಾಗಗಳೂ ಒಂದಾಗುವುದು ಈಗ ಕನಸಿನ ಮಾತು. ಅಮೆರಿಕ ದಾಳಿ ನಡೆಸುವ ದುಸ್ಸಾಹಸ ಮಾಡಿದರೆ ಪರಿಣಾಮ ನೆಟ್ಟಗಾಗದು. ಉತ್ತರ ಕೊರಿಯಾ ನ್ಯೂಕ್ಲಿಯರ್ ರಾಷ್ಟ್ರ ಎನ್ನುವುದನ್ನು ಮರೆಯುವಂತಿಲ್ಲ. ಅಂತೂ ಎರಡು ಕೊರಿಯಾ ಇಪ್ಪತ್ತನೇ ಶತಮಾನದ ಪಳೆಯುಳಿಕೆ.

**ಸೀಯಾರ್ಕೆ**
'ಚೌಬೀನ', ನಂ. ೮೪೯, ೬ನೇ ಕ್ರಾಸ್, ಬನಶಂಕರಿ ೩ನೇ ಹಂತ
೩ನೇ ಬ್ಲಾಕ್, ಕತ್ರಿಗುಪ್ಪೆ, ಬೆಂಗಳೂರು – ೫೬೦ ೦೮೫


ಉತ್ತರ ಕೊರಿಯಾ ಕ್ಷಿಪಣಿ ಪ್ರದರ್ಶನ

# ದೇವರು ಎಂದರೆ ಏನೆಂದುಕೊಂಡಿದ್ದೀರಿ?

ವೈಜ್ಞಾನಿಕ ಮನೋವೃತ್ತಿ ಆಂದೋಲನದ ಅಂಗವಾಗಿ ನಾವು ನಡೆಸುತ್ತಿರುವ ಸಂಚಾಲಕರ ಸಬಲೀಕರಣ ಶಿಬಿರಗಳಲ್ಲಿ ಆರಂಭದಲ್ಲಿಯೇ ಭಾಗಿಗಳೊಂದಿಗೆ ಒಂದು ಒಪ್ಪಂದಕ್ಕೆ ಬರುತ್ತೇವೆ, 'ನಮ್ಮ ಈ ಶಿಬಿರದಲ್ಲಿ ನಾವು ಯಾವುದೇ ಧರ್ಮ ಮತ್ತು ದೇವರ ಬಗ್ಗೆ ಚರ್ಚಿಸುವುದಿಲ್ಲ' ಎಂದು. ಧರ್ಮ ಮತ್ತು ದೇವರ ಬಗ್ಗೆ ಚರ್ಚಿಸಲು ಅಂಜಿಕೆ ಅಂತಲ್ಲ. ಇದೊಂದು ಕಾರ್ಯತಂತ್ರ. ದೇವರ ವಿಚಾರ ಬಂದಕೂಡಲೇ ಶಿಬಿರದಲ್ಲಿರುವ ಭಾಗಿಗಳಲ್ಲಿ ಎಂಟ್ಹತ್ತು ಗುಂಪುಗಳಾಗಿಬಿಡುತ್ತಾರೆ. ಯಾರಿಗೂ ದೇವರು ಇರುವ ಅಥವಾ ಇಲ್ಲದಿರುವ ಬಗ್ಗೆ ಸ್ಪಷ್ಟ ತಿಳಿವಳಿಕೆ ಇರುವುದಿಲ್ಲ. ತಮ್ಮ ಮೂಗಿನ ನೇರಕ್ಕೆ ವಾದ ಮಾಡುತ್ತಾರೆ. ಶಿಬಿರದ ವಾತಾವರಣ ಕಲುಷಿತವಾಗುತ್ತದೆ. ನಮ್ಮ ಉದ್ದೇಶ ಅದಾಗಿರುವುದಿಲ್ಲ.

ಅಲ್ಲದೆ, ನಮ್ಮ ಶಿಬಿರಗಳು ನಡೆಯುವುದು 'ಮೂಢನಂಬಿಕೆ'ಯ ವಿರುದ್ಧ ಅಲ್ಲ, ಬದಲಿಗೆ ವೈಜ್ಞಾನಿಕ ಮನೋವೃತ್ತಿಯ ಪರ. ಕಾರ್ಯತಂತ್ರದ ಮಟ್ಟಿಗೆ ಇದು ಬಹಳ ಮಹತ್ವದ ಮತ್ತು ಪರಿಣಾಮಕಾರಿ ನಿಲುವು ಎಂಬುದನ್ನು ನಾವು ಶಿಬಿರಗಳಲ್ಲಿ ಕಂಡುಕೊಂಡಿದ್ದೇವೆ. ವೈಜ್ಞಾನಿಕ ಮನೋವೃತ್ತಿ, ಅದಕ್ಕೆ ಆಧಾರವಾದ ವೈಜ್ಞಾನಿಕ ವಿಧಾನ ಮತ್ತು ವೈಜ್ಞಾನಿಕ ಧೋರಣೆ ಇವುಗಳನ್ನು ದೈನಂದಿನ ವಿದ್ಯಮಾನಗಳ ಮೂಲಕ ಸ್ವಯಂ ಮನನ ಮಾಡಿಕೊಳ್ಳುವ ಹಾದಿಯಲ್ಲಿ ಮೂಢನಂಬಿಕೆ ಎಂದರೇನು ಎಂಬುದು ತಾನಾಗಿ ಅರ್ಥವಾಗಿರುತ್ತದೆ, ಅದರ ಆಚರಣೆ ಎಷ್ಟು ನಿರರ್ಥಕ ಎಂಬುದು ಮನವರಿಕೆ ಆಗಿರುತ್ತದೆ. ಮಾಹಿತಿ, ಮನವರಿಕೆಗಳು ಭಾಗಿಗಳ ವರ್ತನೆಯಲ್ಲಿ ಬದಲಾವಣೆ ತರುವ ಸಾಧ್ಯತೆಯನ್ನು ಹೆಚ್ಚಿಸುತ್ತವೆ.

ಆದರೂ ನಮ್ಮ ಶಿಬಿರಗಳಲ್ಲಿ ಮತ್ತೆ ಮತ್ತೆ ದೇವರು ಇಣುಕಿ ಹಾಕುತ್ತಲೇ ಇರುತ್ತಾನೆ (ಸದ್ಯಕ್ಕೆ ದೇವರನ್ನು ಪುಲ್ಲಿಂಗ, ಏಕವಚನ ಸರ್ವನಾಮದಲ್ಲಿಯೇ ಕರೆಯುತ್ತಾ ಹೋಗೋಣ). ಇದನ್ನು ಹೇಗಾದರೂ ನಿಭಾಯಿಸದೇ ಇದ್ದರೆ ಚರ್ಚೆಯನ್ನು ಮುಂದಕ್ಕೆ ತೆಗೆದುಕೊಂಡು ಹೋಗುವುದು ಕಷ್ಟವಾಗುತ್ತಲೇ ಇರುತ್ತದೆ. ಅದಕ್ಕೆ ನಾವೀಗ ಶಿಬಿರದಲ್ಲಿ ಒಂದು ಅಂಶವನ್ನು ಸೇರಿಸಿಕೊಂಡಿದ್ದೇವೆ. ದೇವರು ಎಂದರೇನು ಎಂಬ ಪ್ರಶ್ನೆಗೆ ಈ ಶಿಬಿರದಲ್ಲಿ ಬಂದಿರುವವರು ಸ್ವಲ್ಪ ಎಚ್ಚರಿಕೆಯಿಂದ ಉತ್ತರಿಸುತ್ತಾರೆ: ಸುಮಾರು, 'ದೇವರು ಅಂದರೆ ಒಂದು ಶಕ್ತಿ, ನಿಗೂಢವಾದ, ಅಗೋಚರವಾದ ಒಂದು ದಿವ್ಯ ಚೇತನ...' ಈ ರೀತಿಯ ಪ್ರತಿಕ್ರಿಯೆಗಳು ಬರುತ್ತವೆ. ಹೆಚ್ಚಿನವರು ಒಪ್ಪುವ ಒಂದು ಮಾತು ಎಂದರೆ, 'ಈ ವಿಶ್ವದ ಸೃಷ್ಟಿಕರ್ತನೇ ದೇವರು' ಎಂದು. ಇದನ್ನು ಆ ಹೊತ್ತಿಗೆ ಒಪ್ಪಿಕೊಂಡು ನಾವು ದೇವರು ಸೃಷ್ಟಿಸಿರಬಹುದಾದ ಈ 'ವಿಶ್ವ'ವನ್ನು ತಕ್ಕಮಟ್ಟಿಗೆ ಅರ್ಥ ಮಾಡಿಕೊಳ್ಳುವ ಪ್ರಯತ್ನಕ್ಕೆ ಕೈಹಾಕುತ್ತೇವೆ. ಈ ಕುರಿತು ಆಂದೋಲನದಲ್ಲಿ ತಯಾರಾಗಿರುವ ಆರು ನಿಮಿಷದ ಒಂದು ವಿಡಿಯೋವನ್ನು ತೋರಿಸಲಾಗುತ್ತದೆ. ಅದರ ವಸ್ತುವನ್ನು ನಾನಿಲ್ಲಿ ಸಂಕ್ಷಿಪ್ತವಾಗಿ ಬರೆಯುತ್ತೇನೆ.

**ವಿಶ್ವ ಎಷ್ಟೊಂದು ವಿಶಾಲ !**

ನಮ್ಮೂರ ಪಕ್ಕದಲ್ಲಿ ಒಂದು ಹಳ್ಳಿ ಇತ್ತು, ತಿಪ್ಪಾಪುರ ಅಂತ. ಅಲ್ಲೊಂದು ಮಠ ಇತ್ತು. ಹೈಸ್ಕೂಲಿನಲ್ಲಿ ನನ್ನ ಸಹಪಾಠಿಯಾಗಿದ್ದ ಬಸವನೇ ಅಲ್ಲಿ ಹೇಗೋ ಏನೋ ಮುಖ್ಯಸ್ಥನಾಗಿದ್ದ.

ನಾವು ಮಾತು ಮಾತಿಗೆ 'ದೇವರಿಟ್ಟ ಹಾಗೆ ಆಗಲಿ', 'ದೇವರಿದ್ದಾನೆ ಬಿಡು, ನೋಡ್ಕೋತಾನೆ', 'ದೇವರೇ ಕಾಪಾಡಪ್ಪ', 'ಅಯ್ಯೋ ದೇವರೇ, ಹೀಗ್ಯಾಕಪ್ಪಾ ಮಾಡಿದೆ ?' ಎಂದು ಹೇಳುವುದಲ್ಲದೇ, 'ಓ ದೇವರೇ, ನಿನಗೆ ನೂರು ತೆಂಗಿನಕಾಯಿ ಒಡಿಸ್ತೀನಿ, ನನ್ನ ಮಗಳಿಗೆ ಒಂದು ಒಳ್ಳೆ ವರ ಕೊಡಿಸಪ್ಪ' ಅಂತೇವೆ. ಪರೀಕ್ಷೆಯ ಹಾಲ್ ಟಿಕೇಟನ್ನು ದೇವರ (ಅಂದರೆ ದೇವರ ಫೋಟೋ, ಅಥವಾ ಮೂರ್ತಿ) ಎದುರು ಇಟ್ಟು 'ದೇವರೇ, ನನ್ನ ಮಗನನ್ನು ಪಾಸು ಮಾಡಪ್ಪ' ಅಂತೇವೆ. ಪರೀಕ್ಷೆ ಬರೆಯೋ ಮುಂಚೆ, ಪ್ರಶ್ನೆ ಪತ್ರಿಕೆ ಕೈಗೆ ಬಂದಕೂಡಲೇ ಅದನ್ನು ಕಣ್ಣಿಗೆ ಒತ್ತಿಕೊಂಡು, 'ಓ ದೇವರೇ, ಈ ಪೇಪರ್ನಲ್ಲಿ ಎಲ್ಲ ನಾನು ಓದಿದ ಪ್ರಶ್ನೆಗಳೇ ಬಂದಿರ್ಲಪ್ಪ', 'ಓ ದೇವರೇ, ನಿನಗೆ ಒಂದು ವಜ್ರ ಕಿರೀಟ ಮಾಡಿಸಿಕೊಡ್ತೀನಿ, ನನ್ನ ಕಳ್ಳ ದಂಧೆ ಯಾವುದೂ ಸರಕಾರಕ್ಕೆ ಪತ್ತೆ ಆಗದ ಹಾಗೆ ನೋಡಿಕೊಳ್ಳಪ್ಪ' ಎಂದೆಲ್ಲಾ ನಾನಾ ರೀತಿಯ ಕೆಲಸಗಳನ್ನು ಮಾಡಿಕೊಡಲು ದೇವರಂಥ ದೇವರಿಗೆ ಕೇಳಿಕೊಳ್ಳುತ್ತೇವೆ (ನೀವು 'ದೇವರೇ...' ಎಂದು ಏನೇನನ್ನು ಹೇಳುತ್ತೀರಿ ಎಂಬುದನ್ನು ಒಮ್ಮೆ ನೆನಪಿಸಿಕೊಳ್ಳಿ, ನಿಮಗೇ ಅರ್ಥವಾಗುತ್ತೆ, ಇದು ಎಷ್ಟು ತಮಾಷೆಯಾಗಿದೆ ಎಂದು). ಆ ದೇವರು ಯಾವಾಗಲೂ ನಮ್ಮ ಮನೆಯ ಆಳು, ಮದುವೆ ದಲ್ಲಾಳಿ, ಲಾಟರಿ ಏಜೆಂಟ್, ಬಾಡಿಗಾರ್ಡ್ ಇತ್ಯಾದಿ; ಒಂದಷ್ಟು ಲಂಚ ಕೊಟ್ಟರೆ ನಮಗೆ ಬೇಕಾದ್ದನ್ನು ಮಾಡಿಕೊಡುತ್ತಾನೆ ಅಂದುಕೊಳ್ಳುತ್ತೇವೆ.

**ಎಂ. ಅಬ್ದುಲ್ ರೆಹಮಾನ್ ಪಾಷ**

ನಮ್ಮ ಜೊತೆಯಲ್ಲಿ ಕಬಡ್ಡಿ ಆಡುತ್ತಿದ್ದ ಈತ ಈಗ ಅಲ್ಲಿ 'ಜಗದ್ಗುರು' ಬಸವಾರಾಧ್ಯರಾಗಿದ್ದ. ತಿಪ್ಪಾಪುರ ಮತ್ತು ಐದಾರು ಹಳ್ಳಿಗಳೇ ಆತನ ಜಗತ್ತು. ನಾನು ಆಗಾಗ ಹೇಳುವುದುಂಟು 'ಶಿವನಹಳ್ಳಿಯಲ್ಲಿಯೇ ನಾನು ವರ್ಲ್ಡ್ ಫೇಮಸ್' ಎಂದು. ಹೀಗೆ ಮನುಷ್ಯನಿಗೆ ತನ್ನ ತಕ್ಷಣದ ವಿಸ್ತಾರವೇ ಜಗತ್ತು ಎಂಬ ಭಾವನೆ ಬರುವುದು ಸಹಜವೇ. ಅದಕ್ಕಿಂತ ಆಚೆಯ ಕುರಿತು ಯೋಚಿಸುವುದು ಎಲ್ಲರಿಗೂ ಅಗತ್ಯವಿರುವುದಿಲ್ಲ.

ನಿಜವೆಂದರೆ, ಪುರಾಣ, ಪುಣ್ಯಕಥೆಗಳು, ಐತಿಹ್ಯಗಳು, ಜನಪದ ಕಥೆಗಳು ಇತ್ಯಾದಿಗಳಲ್ಲಿ ಜಗತ್ತು ಎಂಬ ಪರಿಕಲ್ಪನೆ ಬಹಳ ಸ್ಥೂಲವಾದ ಅರ್ಥವನ್ನು ಹೊಂದಿರುತ್ತದೆ. ಪ್ರಾಚೀನರು ಭೂಮಿ ಚಪ್ಪಟೆಯಾದ ತಟ್ಟೆಯಾಕಾರದಲ್ಲಿದೆ, ಅದನ್ನು ನಾಲ್ಕು ಭಾರೀ ಆನೆಗಳು ಹೊತ್ತುಕೊಂಡಿವೆ, ಆ ಆನೆಗಳು ಒಂದು ಭಾರೀ ಆಮೆಯ ಬೆನ್ನ ಮೇಲೆ ನಿಂತಿವೆ ಎಂದು ಪರಿಕಲ್ಪಿಸಿಕೊಳ್ಳುತ್ತಿದ್ದರು. ಆದರೆ ಆ ಆಮೆ ಎಲ್ಲಿ ನಿಂತಿದೆ ಎಂಬ ಪ್ರಶ್ನೆಯನ್ನು ಅವರು ಕೇಳಿಕೊಳ್ಳಲು ಹೋಗುತ್ತಿರಲಿಲ್ಲ. ಭೂಮಿ ದುಂಡಗಿದೆ ಎಂದು ಮೊದಲಿಗೆ ವಾದಿಸಿದ್ದು ಗ್ರೀಕ್ ತತ್ವಜ್ಞಾನಿ ಅರಿಸ್ಟಾಟಲ್, ಕ್ರಿ. ಪೂ. ೩೩೦ರಲ್ಲಿ. ಆ ಹೊತ್ತಿಗಾಗಲೇ ವಿಶ್ವ ಎಂದರೆ ಭೂಮಿಯೊಂದೇ ಅಲ್ಲ, ಅಸಂಖ್ಯಾತ ನಕ್ಷತ್ರಗಳೂ ಇವೆ ಎಂಬುದು ತಿಳಿದಿತ್ತಾದರೂ ಭೂಮಿಯೇ ವಿಶ್ವದ ಕೇಂದ್ರ ಎಂದು ಭಾವಿಸಲಾಗುತ್ತಿತ್ತು. ಸುಮಾರು ೧೫೩೨ರ ಹೊತ್ತಿಗೆ ಪೋಲಂಡಿನ ನಿಕೋಲಸ್ ಕೋಪರ್ನಿಕಸ್ ಸೂರ್ಯನನ್ನು ವಿಶ್ವದ ಕೇಂದ್ರವೆಂದು ಪ್ರತಿಪಾದಿಸಿದ. ಮುಂದೆ ಸೂರ್ಯನಾಗಲೀ ಅದಿರುವ ಮಿಲ್ಕಿ ವೇ ಗ್ಯಾಲಕ್ಸಿಯಾಗಲೀ ವಿಶ್ವದ ಕೇಂದ್ರವಲ್ಲ, ಅವು ಇಡೀ ವಿಶ್ವದ ಒಂದು ಮೂಲೆಯಲ್ಲಿರುವ ನಗಣ್ಯ ವಿದ್ಯಮಾನಗಳು ಎಂಬುದರ ಪರಿಕಲ್ಪನೆ ಕ್ರಮೇಣ ಮೂಡತೊಡಗಿತು.

ಆದರೂ ನಮ್ಮ ಭೂಮಿ ಸೂರ್ಯನ ಕುಟುಂಬ. ಆದ್ದರಿಂದ ಸೂರ್ಯನಿಂದ ಆರಂಭಿಸಿ ನಾವು ವಿಶ್ವದ ವೈಶಾಲ್ಯವನ್ನು ಪರಿಚಯಿಸಿಕೊಳ್ಳುವ ಪ್ರಯತ್ನವನ್ನು ಮಾಡೋಣ. ಅದಕ್ಕೂ ಮುನ್ನ, ಮುಂದೆ ಬಳಸಲಾಗುವ ಕೆಲವು ಅಂಕಿ-ಅಂಶಗಳ, ಮಾನಕಗಳ ಒಟ್ಟಾರೆ ಪರಿಚಯವನ್ನು ಮಾಡಿಕೊಳ್ಳೋಣ.

**ಜ್ಯೋತಿರ್ವರ್ಷ :** ಬೆಳಕು ಒಂದು ಸೆಕೆಂಡಿಗೆ ೩,೦೦,೦೦೦ ಕಿ. ಮೀ. ದೂರ ಸಾಗುತ್ತದೆ. ಈ ವೇಗದಲ್ಲಿ ಬೆಳಕು ಒಂದು ವರ್ಷ ಚಲಿಸುವ ದೂರವನ್ನು 'ಜ್ಯೋತಿರ್ವರ್ಷ' ಎನ್ನಲಾಗುತ್ತದೆ. 'ವರ್ಷ' ಎಂಬ ಕಾಲಮಾನದ ಸೂಚನೆ ಇದ್ದರೂ ಇದು ದೂರದ ಮಾನ. ಆ ಲೆಕ್ಕದಲ್ಲಿ

| | | |
|---|---|---|
| ೧ ಜ್ಯೋತಿರ್ವರ್ಷ | = | ೩,೦೦,೦೦೦ X ೬೦ X ೬೦ X ೨೪ X ೩೬೫ |
| | = | ೯೪೬೦೮೦,೦೦,೦೦,೦೦೦ |
| | | (೯೪೬೦೮೦ ಕೋಟಿ ಕಿ. ಮೀ.) |
| ೧ ಮಿಲಿಯನ್ | = | ೧೦,೦೦,೦೦೦ (ದಶಲಕ್ಷ) |
| ೧ ಬಿಲಿಯನ್ | = | ೧೦೦,೦೦,೦೦,೦೦೦ (ನೂರು ಕೋಟಿ) |
| ೧ ಟ್ರಿಲಿಯನ್ | = | ೧೦೦೦೦೦,೦೦,೦೦,೦೦೦ |
| | | (ಸಾವಿರ ಬಿಲಿಯನ್ ಅಥವಾ ೧ ಲಕ್ಷ ಕೋಟಿ) |

### ವಿಶ್ವ ಪಯಣವನ್ನು ಆರಂಭಿಸೋಣ

ಸೂರ್ಯನ ಸಮತಲದಿಂದ ಅದಕ್ಕೆ ಲಂಬ ದಿಕ್ಕಿನಲ್ಲಿ ನಮ್ಮ ಕಾಲ್ಪನಿಕ ಪ್ರಯಾಣವನ್ನು ಆರಂಭಿಸೋಣ. ಬೆಳಕಿನ ವೇಗದಲ್ಲಿ ಪ್ರಯಾಣ ಮಾಡುತ್ತಿದ್ದೇವೆ ಎಂದು ಕಲ್ಪಿಸಿಕೊಳ್ಳೋಣ. ನಮ್ಮ ಪಯಣ ಜನವರಿ ೧ರ ಮಧ್ಯರಾತ್ರಿ ಆರಂಭ ಎಂದಿಟ್ಟುಕೊಳ್ಳಿ. ನೋಡನೋಡುವುದರಲ್ಲಿ, ಎಂದರೆ ಮೂರು ನಿಮಿಷ ಆಗುವಷ್ಟರಲ್ಲಿ ನಾವು ಬುಧಗ್ರಹವನ್ನು ದಾಟಿ ಸಾಗಿರುತ್ತೇವೆ. ನಂತರ ಶುಕ್ರ. ಬರೀ ೮ ನಿಮಿಷ ೧೬ ಸೆಕೆಂಡಿನಲ್ಲಿ, ಎಂದರೆ ೧೪ ಕೋಟಿ ೯೬ ಲಕ್ಷ ಕಿ. ಮೀ. ಪ್ರಯಾಣ ಮಾಡಿದ ನಂತರ ಸಿಗುತ್ತೆ ನಮ್ಮ ಭೂಮಿ. ಹಾಗೇ ಮುಂದುವರಿದರೆ ನಾವು ಕೆಂಪುಗ್ರಹ ಮಂಗಳವನ್ನು ದಾಟಿ ಸಾಗುತ್ತೇವೆ.

ಸೂರ್ಯನಿಂದ ಹೊರಟು ಬೆಳಕಿನ ವೇಗದಲ್ಲಿ, ಸೌರವ್ಯೂಹದ ಅಂಚಿಗೆ ಬರುವ ಹೊತ್ತಿಗೆ ನಾವು ೫೬೩ ಕೋಟಿ ಕಿ. ಮೀ. ದೂರ ಬಂದಿರುತ್ತೇವೆ. ಆದರೆ ಅದಿನ್ನೂ ಜನವರಿ ಒಂದನೇ ತಾರೀಖೇ ಆಗಿರುತ್ತದೆ. ಹೊರಟು ಬರೀ ೫ ಗಂಟೆ ೩೧ ನಿಮಿಷ ಆಗಿರುತ್ತೆ.

ಸೂರ್ಯ ಮತ್ತು ಅದರ ಕುಟುಂಬ, ಮಿಲ್ಕಿ ವೇ ಗ್ಯಾಲಕ್ಸಿಯ ಸುರುಳಿಗಳ ಹೆಚ್ಚುಕಡಿಮೆ ಹೊರ ಅಂಚಿನ ಒಂದು ಸುರುಳಿಯಲ್ಲಿದೆ, ಒಟ್ಟು ಚಿತ್ರದಲ್ಲಿ ಗಮನಕ್ಕೇ ಬಾರದಷ್ಟು ಗೌಣವಾಗಿ. ವಿಜ್ಞಾನಿಗಳ ಅಂದಾಜಿನ ಪ್ರಕಾರ ನಮ್ಮ ಈ ಗ್ಯಾಲಕ್ಸಿಯಲ್ಲಿ ಸೂರ್ಯನ ಹಾಗೆಯೇ ೧೦೦ ಬಿಲಿಯನ್‌ನಿಂದ ೪೦೦ ಬಿಲಿಯನ್ ನಕ್ಷತ್ರಗಳಿವೆ. ಭೂಮಿಯಿಂದ ನೋಡುವಾಗ ನಮಗೆ ನಕ್ಷತ್ರಗಳು ಅಕ್ಕಪಕ್ಕ ಇರುವ ಹಾಗೆ ಕಾಣಿಸುತ್ತವೆ. ಆದರೆ ಅವುಗಳ ನಡುವೆ ಅಗಾಧವಾದ ಅಂತರವಿರುತ್ತದೆ. ಸೂರ್ಯನನ್ನು ಬಿಟ್ಟರೆ ನಮಗೆ ಅತ್ಯಂತ ಹತ್ತಿರದ ನಕ್ಷತ್ರ ಎಂದರೆ ಆಲ್ಫಾ ಸೆಂಟಾರಿ. ಅದು ನಮ್ಮಿಂದ ೪.೩೫ ಜ್ಯೋತಿರ್ವರ್ಷದಷ್ಟು (ಎಂದರೆ ೪೧,೧೫,೪೪೮ ಕೋಟಿ ಕಿ.ಮೀ.) ದೂರವಿದೆ.

ನಮ್ಮ ಮಿಲ್ಕಿವೇ ಗ್ಯಾಲಕ್ಸಿಯ ಹತ್ತಿರದ ಇನ್ನೊಂದು ಗ್ಯಾಲಕ್ಸಿ, ಆ್ಯಂಡ್ರೊಮೆಡಾ, ನಮ್ಮಿಂದ ೨.೫ ಮಿಲಿಯನ್ ಜ್ಯೋತಿರ್ವರ್ಷ ದೂರವಿದೆ. ನಕ್ಷತ್ರಗಳು ಮತ್ತು ಗ್ಯಾಲಕ್ಸಿಗಳ ನಡುವಿನ ಅವಕಾಶದಲ್ಲಿ ಕಾಲಕ್ರಮೇಣ ನಕ್ಷತ್ರ ಅಥವಾ ಗ್ರಹಗಳಾಗಿ ರೂಪುಗೊಳ್ಳಬಲ್ಲ ಸಾಮಗ್ರಿ ಇರುತ್ತದೆ. ಅತ್ಯುತ್ತಮವಾದ ಅಂದಾಜಿನ ಪ್ರಕಾರ ವಿಶ್ವದಲ್ಲಿ ಕನಿಷ್ಠ ಒಂದು ನೂರು ಬಿಲಿಯನ್ ಗ್ಯಾಲಕ್ಸಿಗಳಿವೆ; ಅದೂ 'ವೀಕ್ಷಣೆಗೆ ದಕ್ಕುವಷ್ಟು' ವಿಶ್ವದಲ್ಲಿ ಎಂದೂ ಹೇಳಬೇಕಾಗುತ್ತದೆ. ವಿಶ್ವದಲ್ಲಿ ನಿತ್ಯ ಹೊಸ ಹೊಸ ನಕ್ಷತ್ರಗಳ ಹುಟ್ಟು, ಹಳೆಯ ನಕ್ಷತ್ರಗಳ ಪತನ, ಸಾವು, ಆಸ್ಫೋಟ, ಕಪ್ಪು ಕುಳಿಗಳು, ಬಿಸಿ ಕುಳಿಗಳು, ಡಾರ್ಕ್ ಮ್ಯಾಟರ್, ಡಾರ್ಕ್ ಎನರ್ಜಿ ಹೀಗೆ ವಿಸ್ಮಯಕಾರಿ ವಸ್ತು ಮತ್ತು ಪ್ರಕ್ರಿಯೆಗಳು ನಡೆದಿರುತ್ತವೆ.

ನಮಗೆ ಗೊತ್ತಿರುವ ಹಾಗೆ ಸದ್ಯಕ್ಕೆ ಜೀವವಿರುವುದು ಭೂಮಿಯ ಮೇಲೆ ಮಾತ್ರ. ಭೂಮಿಯಲ್ಲಿಯೇ ಎಂಟು ಲಕ್ಷ ಎಪ್ಪತ್ತು ಸಾವಿರ ವಿವಿಧ ಜೀವಜಾತಿಗಳಿವೆ, ಅವುಗಳೊಂದಿಗೆ ಭೂಗ್ರಹವನ್ನು ಹಂಚಿಕೊಂಡಿದೆ ಮನುಷ್ಯ ಜೀವಿ. ಇಡೀ ವಿಶ್ವದಲ್ಲಿರುವ ಬಿಲಿಯ ಬಿಲಿಯಗಟ್ಟಲೆ ನಕ್ಷತ್ರಗಳು, ಅವುಗಳಿಗೆ ಇರಬಹುದಾದ ಬಿಲಿಯ ಬಿಲಿಯಗಟ್ಟಲೆ ಗ್ರಹಗಳಲ್ಲಿ ಜೀವ ಉಗಮವಾಗಿ ಬೆಳೆಯುವ ಸಾಧ್ಯತೆ ಇರುವ ಬಿಲಿಯಗಟ್ಟಲೆ ಗ್ರಹಗಳು ಇರಲು ಸಾಧ್ಯ. ವಿಶ್ವ ರಂಗದಲ್ಲಿ ನಾವಿರುವ ಭೂಮಿ ಯಾವುದೇ ಕಾರಣಕ್ಕೂ ಅನನ್ಯವಲ್ಲ, ವಿಶಿಷ್ಟವಲ್ಲ. ಸೃಷ್ಟಿಕರ್ತ ದೇವರ ದೃಷ್ಟಿಯಲ್ಲಿ ನಮ್ಮ ಭೂಮಿ ಬಿಲಿಯಗಟ್ಟಲೆ ನಕ್ಷತ್ರ, ಗ್ರಹಗಳ ಇತ್ಯಾದಿ ಆಕಾಶಕಾಯಗಳಲ್ಲಿ ಒಂದು ಮಾತ್ರ. ಹೀಗಾಗಿ ದೇವರು ಎಂಬುದನ್ನು ಒಂದು 'ಶಕ್ತಿ'ಯನ್ನಾಗಿ ಪರಿಕಲ್ಪಿಸಿಕೊಳ್ಳಬಹುದೇ ವಿನಾ 'ಅವನು' ಎಂಬ ಸರ್ವನಾಮವನ್ನು ಕೊಟ್ಟು ಮನುಷ್ಯರ ಹಾಗೆ ಒಬ್ಬ 'ಪುರುಷ' ಎಂದು ಪರಿಮಿತಗೊಳಿಸಿ ಭಾವಿಸುವುದು ಅಜ್ಞಾನದ ಪರಮಾವಧಿಯಾಗುತ್ತದೆ.

### ಒಂದಲ್ಲ ವಿಶ್ವ !

ಹೆಚ್ಚಿನ ವಿಜ್ಞಾನಿಗಳು ಒಪ್ಪಿಕೊಂಡಿರುವ ಸಿದ್ಧಾಂತದ ಪ್ರಕಾರ, ವಿಶ್ವ 'ಬಿಗ್ ಬ್ಯಾಂಗ್' ಎಂಬ ವಿದ್ಯಮಾನದೊಂದಿಗೆ ಹುಟ್ಟಿಕೊಂಡಿತು. ಈ ಘಟನೆ ನಡೆದು ಈಗ್ಗೆ ೧೩.೮ ಬಿಲಿಯನ್ ವರ್ಷಗಳಾಗಿವೆ. ಎಂದರೆ, ನಾವು ಇಂದು ನೋಡುತ್ತಿರುವ ಯಾವುದೇ ಬೆಳಕು ೧೩.೮ ಬಿಲಿಯನ್ ವರ್ಷ ಅಥವಾ ಅದಕ್ಕಿಂತ ಕಡಿಮೆ ಕಾಲ ಪ್ರಯಾಣ ಮಾಡಿ ನಮ್ಮನ್ನು ತಲುಪಿರಬೇಕು ಎಂದರ್ಥ. ಇದನ್ನು ನಾವು 'ವೀಕ್ಷಣೆಗೆ ದಕ್ಕುವ ವಿಶ್ವ' ಎನ್ನುತ್ತೇವೆ. ಅದರಿಂದಾಚೆಯಿಂದ ಹೊರಟಿರ ಬಹುದಾದ ಬೆಳಕು ನಮಗಿನ್ನೂ ತಲುಪಿಲ್ಲ. ಆದ್ದರಿಂದ ಹೇಗೆ ಹೇಳುವುದು ವಿಶ್ವ ಎಷ್ಟೊಂದು ವಿಶಾಲ ಎಂದು ? ಸಾಲದು ಅಂತ ವಿಶ್ವ ನಿತ್ಯ ಅಗಾಧ ವೇಗದಲ್ಲಿ, ನಿತ್ಯ ಹೆಚ್ಚುತ್ತಿರುವ ವೇಗದಲ್ಲಿ ವಿಸ್ತರಿಸುತ್ತಿದೆ. ಒಂದು ವೈಜ್ಞಾನಿಕ ಅಂದಾಜಿನ ಪ್ರಕಾರ ವಿಶ್ವ ೪೬ ಬಿಲಿಯನ್ ಜ್ಯೋತಿರ್ವರ್ಷದಷ್ಟು ವಿಶಾಲವಾಗಿದೆ (ಕಿಲೋಮೀಟರಿನಲ್ಲಿ ಲೆಕ್ಕ ಹಾಕಲು ಹೋಗಬೇಡಿ, ಹಾಳೆ ಸಾಕಾಗಲಿಕ್ಕಿಲ್ಲ).

ನಮ್ಮ ನೆಲೆಯಿಂದ ಆರಂಭಿಸಿ ವಿಶ್ವದ ಕೊನೆಯವರೆಗೆ ಮುಟ್ಟಿ, ಇನ್ನೇನು ಮುಗಿಯಿತು ಎಂದುಕೊಳ್ಳುವಾಗ ಅದು ಇಷ್ಟೇ ಅಲ್ಲ, ನಿತ್ಯವೂ ಹಿಗ್ಗುತ್ತಲೇ ಇದೆ ಎಂದು ಅಚ್ಚರಿಪಟ್ಟುಕೊಳ್ಳುತ್ತಿರುವ ಹೊತ್ತಿಗೇ ವಿಜ್ಞಾನಿಗಳಿಂದ ಇನ್ನೊಂದು ವಿಸ್ಮಯಕಾರಿ ಸುದ್ದಿ ನಮ್ಮನ್ನು ತಲುಪುತ್ತದೆ. ವಿಶ್ವ ಒಂದಲ್ಲ, ಎರಡು ಇವೆ. ಹೌದಾ ಎಂದು ಹುಬ್ಬೇರಿಸಿ ಮುಗಿಸುವ ಮುಂಚೆಯೇ ಇನ್ನೊಂದು ವಿಚಾರ ಹೊರಬೀಳುತ್ತದೆ : ಒಂದಲ್ಲ ಎರಡಲ್ಲ ಹಲವಾರು ವಿಶ್ವಗಳು ಅಸ್ತಿತ್ವದಲ್ಲಿವೆ. ಅದಕ್ಕೆ ಇದನ್ನು "uni-verse" ಎಂದು ಕರೆಯುವ ಬದಲು "multi-verse" ಎಂದು ಕರೆಯುವುದೇ ಹೆಚ್ಚು ಸೂಕ್ತ ಎಂಬುದು ಗೊತ್ತಾಗುತ್ತದೆ.







# ಎರಡು ಜೀವಗಳಿಗೆ ಮತ್ತೆರಡು ಪ್ಯಾರಾ...

ಕೆಲವು ಮನೆಯ ನಾಯಿಗಳು ತಿಂದುಂಡು
ಕೊಬ್ಬಿನಿಂದಲೋ-ಜಿಗಿರಿನಿಂದಲೋ
ಬೀದಿಹೋಕರ ಕಂಡು ಬೊಗಳುತ್ತಲೇ ಇವೆ...
ಆ ಮನೆಯ ತಾಯಿ ಮಾತ್ರ
ಹಸಿವಿನಿಂದಲೋ ಅಸಹನೆಯಿಂದಲೋ
ಕತ್ತಲಲ್ಲಿ ಕಣ್ಣೀರು ಹರಿಸುತ್ತಿದ್ದಾಳೆ...
ಬೆಳಕಿನಲ್ಲಿ ಸ್ತಬ್ಧವಾಗಿ
ಏನೆಲ್ಲ ತ್ಯಾಗ ಮಾಡಿದ ಅವಳು ನಿರ್ಗತಿಕಳಾಗಿದ್ದಾಳೆ
ಪ್ರೀತಿ ತುಂಬಿದ ನಾಲ್ಕು ಮಾತುಗಳಿಗಾಗಿ
ಎದುರು ನೋಡುತ್ತಲೇ ಇದ್ದಾಳೆ...
ಬೀದಿಯಲ್ಲಿ ಬಿರುಗಾಳಿಗೆ ಸಿಲುಕಿ
ಬದುಕಿಗಾಗಿ ನಿರ್ಜೀವ ಭೂಮಂಡಲವನ್ನೇ
ಕೈ ಮಾಡಿ ಕರೆಯುವ ಅನಾಥ ಮಗುವಿನಂತೆ...!

ಕೆಲವು ಮನೆಯ ಗೋಡೆಯಲ್ಲಿನ ಡಬ್ಬಿ ,
ಕೈಯಲ್ಲಿನ ಜಂಗಮವಾಣಿಯ ಪರದೆಯ ಮೇಲೆ
ತೂರಿ ಬರುವ ಶೀಲತೆಯಿಂದಲೋ-ಅಶ್ಲೀಲತೆಯಿಂದಲೋ
ಕಲ್ಲು ಹೃದಯಗಳಲ್ಲಿ ನಗು, ಕೇಕೆ, ಚೀರಾಟ...
ಬಲು ಒಪ್ಪವಾಗಿಯೇ ಮೆರೆಯುತ್ತಿದೆ
ಆ ಮನೆಯ ತಂದೆ ಮಾತ್ರ
ಇರುಳಲ್ಲಿ, ಹೃದಯದಲ್ಲಿಯೇ
ಹೃದಯ ಕಿತ್ತುಬರುವಂತೆ ರೋದಿಸುತ್ತಿದ್ದಾನೆ
ಯಾರಿಗೂ ಹೇಳಲಾಗದೆ, ಸುಮ್ಮನಿರಲೂ ಆಗದೆ
ತನ್ನ ಕಣ್ಣಹನಿಗಳಿಗೆ ಬೊಗಸೆಯೊಡ್ಡಿ
ಕಣ್ಮುಚ್ಚಿ ನುಂಗಿ...
ಪ್ರತೀ ಕ್ಷಣವೂ ಒದ್ದಾಡುತ್ತಲೇ ಇದ್ದಾನೆ
ಯಾವೆಲ್ಲ ಆಸೆಗಳನ್ನು ಪೂರೈಸಿದ ಆತ ಅಪರಿಚಿತನಾಗಿ
ಮತ್ತೆ ಬರುವ ಸೂರ್ಯನ ನಗುವಿಗೆ
ಪ್ರತಿಯಾಗಿ ನಗುವನ್ನೇ ಚೆಲ್ಲುತ್ತಿದ್ದಾನೆ
ತನ್ನೆಲ್ಲ ಸಂಕಟಗಳನ್ನು, ಅವಮಾನಗಳನ್ನು
ಒಡಲಲ್ಲಿಯೇ ಹಿಚುಕಿಕೊಂಡು...
ನೊಂದ ಮಗು ತಾಯಿಯನ್ನು ಕರೆಯುವಂತೆ
ತಂದೆ ಯಾರನ್ನೋ ಕೂಗುತ್ತಿದ್ದಾನೆ
ಶಕ್ತಿಗುಂದಿದ ಪಿಸುಧ್ವನಿಯಲ್ಲಿ...
ಕೂಸುಕಂಡ ಕನಸು ಯಾರೂ ಅರಿಯದಂತೆ !

**ಕಾಶೀಮಸಾಹೇಬ ಜೆ. ಬುರಡಿ, ಅಂಚೆ : ಕೊಣ್ಣೂರ – ೫೮೨ ೨೦೬, ನರಗುಂದ ತಾಲೂಕು, ಗದಗ ಜಿಲ್ಲೆ**

**ಸೃಷ್ಟಿಕರ್ತನಿಗೆ ಬಿಡುವಿಲ್ಲದ ಕೆಲಸ**

ಈಗ ಮತ್ತೆ ಸೃಷ್ಟಿಕರ್ತನ ವಿಚಾರಕ್ಕೆ ಬರೋಣ. ನಾವು ದೇವರು ಎಂದು ಭಾವಿಸಿರುವ ಶಕ್ತಿ ಬರೀ ನಮ್ಮ ವಿಶ್ವದ ಸೃಷ್ಟಿಕರ್ತ ಎಂದುಕೊಂಡಿದ್ದೆವು. ಈಗ ಆ ಶಕ್ತಿ ಬಹುವಿಶ್ವಗಳ ಸೃಷ್ಟಿಕರ್ತ ಎಂಬುದನ್ನು ನಾವು ಒಪ್ಪಿಕೊಳ್ಳಬೇಕಾಗುತ್ತದೆ. ಹೌದೆಂದು ನಂಬುವವರಿಗೆ ಈಗ ಒಂದು ಪ್ರಶ್ನೆ ಇದೆ. ಇಷ್ಟೊಂದು ಅಗಾಧವಾದ, ಮನುಷ್ಯನ ಪರಿಕಲ್ಪನೆಗೆ ಪೂರ್ತಿಯಾಗಿ ನಿಲುಕದ, ಮನುಷ್ಯನ ಭಾಷೆಯಲ್ಲಿ ವರ್ಣನೆಯ ಚೌಕಟ್ಟಿಗೆ ಸಿಗದ ಇಂಥ ಅಗಾಧ ವಿಶ್ವಗಳನ್ನು ಸೃಷ್ಟಿ ಮಾಡಿದ ಶಕ್ತಿ ಅದೆಷ್ಟು ಮಹಾ ನಾನಾನಾ...ನ್ ಇರಬಹುದು ಎಂಬುದನ್ನು ಕಲ್ಪಿಸಿಕೊಳ್ಳಿ.

ಇಂಥ ಮಹಾನ್ ಶಕ್ತಿಯ ದೇವರು ವಿಶ್ವಗಳ ಮೇಲೆ ವಿಶ್ವಗಳನ್ನು ಸೃಷ್ಟಿ ಮಾಡುವುದರಲ್ಲಿ ಬಿಜಿಯಾಗಿದೆ. ಪ್ರತಿ ಸಲವೂ ಒಂದು ವಿಶ್ವ ಸೃಷ್ಟಿ ಮಾಡಿದ ನಂತರ ಅದು ಹೇಗೆ ಮುಂದುವರಿದು ಕೊಂಡು ಹೋಗಬೇಕು ಎನ್ನುವುದನ್ನು ನಿರ್ದೇಶಿಸಲು ಕೆಲವು ನಿಯಮಗಳನ್ನು ರೂಪಿಸಿ ಅದರಲ್ಲಿ ಜಾರಿಗೆ ಬಿಡುತ್ತದೆ. ವಿಶ್ವದ ಅಣುಅಣುವೂ ಇಂಥ 'ವಿಶ್ವ ನಿಯಮ'ಗಳಿಗೆ ಬದ್ಧವಾಗಿ ನಡೆದುಕೊಂಡು ಹೋಗುತ್ತವೆ. ನಾವು ಹತ್ತಿರದಿಂದ ಕಂಡಿರುವ ಭೂಮಿಯೂ ಇಂಥ ಒಂದು ವಿಶ್ವ ನಿಯಮಗಳಿಗೆ ಬದ್ಧ ವಿಶ್ವದ ಒಂದು ಭಾಗ. ಇಲ್ಲಿರುವ ಕಣಕಣವೂ ಅದನ್ನು ಪಾಲಿಸುತ್ತದೆ. ನಮಗೆ ಗೊತ್ತಿರುವ ಹಾಗೆ, ಇಂಥ ವಿಶ್ವ ನಿಯಮಗಳನ್ನು ಮುರಿಯುವ, ಅವುಗಳ ವಿರುದ್ಧ ಹೋಗುವ ಉದ್ಧಟತನವನ್ನು ತೋರುವ, ವಿನಾಶಕಾರಿ ಅಪರಾಧವನ್ನು ಮಾಡುವ ಜೀವಿಯೆಂದರೆ ಮನುಷ್ಯ ಮಾತ್ರ! ವಿಪರ್ಯಾಸದ ಸಂಗತಿಯೆಂದರೆ ಮಾನವ ತನ್ನ ತಪ್ಪಿನಿಂದಾಗಿ ತಾನಷ್ಟೇ ಅಲ್ಲ, ಸಕಲ ಜೀವಕೋಟಿಗೂ ವಿನಾಶವನ್ನು ತರಬಲ್ಲವನಾಗಿದ್ದಾನೆ.

ಇನ್ನು, ನಾವು ಮನುಷ್ಯರು 'ದೇವರು' ಎಂಬ ಶಕ್ತಿಯನ್ನು ಹೇಗೆ ಅರ್ಥೈಸಿಕೊಂಡಿದ್ದೇವೆ ಎಂಬುದನ್ನು ನೋಡೋಣ. ದೇಶ ದೇಶಗಳಲ್ಲಿ ಕಾಲದಿಂದ ಕಾಲಕ್ಕೆ ದಾರ್ಶನಿಕರು ಈ ಮಹಾನ್ ಶಕ್ತಿಯಾದ ದೇವರನ್ನು ನಮ್ಮ ತಿಳಿವಳಿಕೆಯ ಚೌಕಟ್ಟಿನಲ್ಲಿ ಹಿಡಿದಿಡುವ ಪ್ರಯತ್ನವನ್ನು ಮಾಡಿದರು. ಆದಷ್ಟು ಅದನ್ನು ನಿರಾಕಾರವಾಗಿಯೇ ಪ್ರತಿಪಾದಿಸಿದರು. ಆದರೆ, ಸಾಮಾನ್ಯರಿಗೆ ಈ ಅಮೂರ್ತತೆ, ಆಧ್ಯಾತ್ಮಿಕತೆ ಅರ್ಥವೂ ಆಗುವುದಿಲ್ಲ, ಪ್ರಯೋಜನಕಾರಿಯೂ ಅಲ್ಲ. ಅಲ್ಪಬುದ್ಧಿಯ, ಕುಹಕ ಪ್ರವೃತ್ತಿಯ, ಶೋಷಕ ಮನೋವೃತ್ತಿಯ ಮನುಷ್ಯನ ತಲೆ ಬೇರೆ ರೀತಿ ಕೆಲಸ ಮಾಡುತ್ತದೆ. ಶಿವರಾಮ ಕಾರಂತರು ಒಂದು ಕಡೆ ಹೇಳಿದ ಹಾಗೆ ಮನುಷ್ಯರು 'ನಮ್ಮ ಅಳತೆಯನ್ನು ಮೀರಲಾರದ' ದೇವರನ್ನು ಸೃಷ್ಟಿಸಿಕೊಂಡರು. ಆ ಕಾರಣಕ್ಕಾಗಿ ಹೆಚ್ಚಿನ ಧರ್ಮಗಳಲ್ಲಿ ದೇವರು ಮನುಷ್ಯ ಮತ್ತು ಮನುಷ್ಯನ ನೆರೆಹೊರೆಯ ಪ್ರಾಣಿಗಳ ರೂಪವನ್ನೇ ಪಡೆದಿದ್ದಾನೆ. ಎಲ್ಲವೂ ಭೂಗ್ರಹಕ್ಕೆ ಸೀಮಿತ. ಇದೇ ಮುಂದುವರಿದು ದೇವರನ್ನು ಆರಾಧನೆಯ, ಪೂಜೆಯ, ಹರಕೆಯ, ಭಯೋತ್ಪಾದನೆಯ, ಜನರನ್ನು ಒಡೆಯುವ ಅಸ್ತ್ರವನ್ನಾಗಿ ಮಾಡಿಕೊಂಡರು. ದೇವರನ್ನು ಕಾಪಾಡುವ ಗುತ್ತಿಗೆದಾರರು, ಏಜೆಂಟರು, ಕಾನೂನುಗಳು ಹುಟ್ಟಿಕೊಂಡವು. ಇವರಲ್ಲಿ ಯಾರಿಗಾದರೂ ಅರಿವಿದೆಯೇ ಯಾವ 'ದೇವರ'ನ್ನು ಕುರಿತು ಇವರು ಇದನ್ನೆಲ್ಲಾ ಮಾಡುತ್ತಿದ್ದಾರೆ ಎಂದು ? ರಾಜ್‌ಕುಮಾರ್ ಹಿರಾನಿ ನಿರ್ದೇಶನದ 'ಪಿ. ಕೆ.' ಸಿನಿಮಾದಲ್ಲಿ, 'ನಮ್ಮನ್ನು ಸೃಷ್ಟಿಸಿದ ದೇವರು

ಬೇರೆ, ನಾವು ಸೃಷ್ಟಿಸಿದ ದೇವರು ಬೇರೆ' ಎಂದು ಹೇಳುವ ಪಿ. ಕೆ. 'ನಾನು ನಮ್ಮನ್ನು ಸೃಷ್ಟಿಸಿದ ದೇವರನ್ನಷ್ಟೇ ನಂಬುತ್ತೇನೆ' ಎನ್ನುತ್ತಾನೆ.

ಬಹು ವಿಶ್ವಗಳನ್ನು ಸೃಷ್ಟಿ ಮಾಡಿ, ಅವುಗಳನ್ನು ಜಾರಿಗೆ ಬಿಟ್ಟು ಮತ್ತೆ ಹಲವು ವಿಶ್ವಗಳ ಸೃಷ್ಟಿ ಕಾರ್ಯದಲ್ಲಿ ತೊಡಗಿರುವ ಮಹಾನ್ ಶಕ್ತಿಶಾಲಿ ದೇವರು ಯಾರ ಹಂಗಿನಲ್ಲಿಯೂ ಇಲ್ಲ. ಆ ಶಕ್ತಿಯು ಯಾರ ಶರಣಾಗತಿಯನ್ನೂ ಬಯಸುವುದಿಲ್ಲ. ಕ್ಷುಲ್ಲಕ ಮಾನವರ ಆರಾಧನೆಯನ್ನಂತೂ ಮೊದಲೇ ನಿರೀಕ್ಷಿಸುವುದಿಲ್ಲ. ಯಾರ ಓಲೈಕೆಗೂ ಒಲಿಯುವುದಿಲ್ಲ. ಅದಕ್ಕೆ ಯಾರೂ ಯಃಕಶ್ಚಿತ್ ಸಂಪತ್ತು, ಚಿನ್ನ, ಬೆಳ್ಳಿ, ಪಾಯಸ, ಕಡುಬು, ತೆಂಗಿನಕಾಯಿ, ಊದುಕಡ್ಡಿಯಂಥ ಕ್ಷುಲ್ಲಕ ವಸ್ತುಗಳನ್ನು ಕೊಟ್ಟು ಸಂಪ್ರೀತನನ್ನಾಗಿ ಮಾಡಲು ಸಾಧ್ಯವಿಲ್ಲ. ಅದರದು ಒಂದೇ ಆದೇಶ, 'ನೀವಿರುವ ವಿಶ್ವಕ್ಕೆ ಕೆಲವು ವಿಶ್ವ ನಿಯಮಗಳು ಅಂತ ನಿಗದಿಯಾಗಿವೆ, ಅವುಗಳನ್ನು ಅರ್ಥಮಾಡಿಕೊಳ್ಳಿ, ಅದರ ಪ್ರಕಾರ ನಡೆಯಿರಿ, ಇಲ್ಲದಿದ್ದರೆ ಸಾಯಿರಿ' ಎಂದು.

**ದೇವರು ನಮ್ಮ ಮನೆಯಾಳಲ್ಲ**

ನಾವಿರುವ ವಿಶ್ವದಲ್ಲಿ ಭೂಮಿ ಎನ್ನುವ ಗ್ರಹ ಒಂದು ತೃಣಕ್ಕೂ ಸಮನಲ್ಲದ ಒಂದು ವಸ್ತು / ಸಂಗತಿ. ಬಹುಶಃ ಇಡೀ ಭಾರತದ ಪ್ರದೇಶವನ್ನು ಊಹಿಸಿಕೊಂಡರೆ, ಅದರ ವಾತಾವರಣದಲ್ಲಿರುವ ಧೂಳಿನ ಒಂದು ಕಣಕ್ಕೂ ಸಮನಲ್ಲದ ಈ ನಮ್ಮ ಭೂಮಿ; ಇಂಥ ಒಂದು ಕ್ಷುದ್ರ ತಾಣದಲ್ಲಿರುವ ಒಂದು ದುರ್ಬಲ ಜೀವಿ ಮನುಷ್ಯ. ಆದರೂ ಮನುಷ್ಯ ದೇವರಂಥ ದೇವರನ್ನು ಯಾವ ಸ್ಥಿತಿಗೆ ಇಳಿಸಿದ್ದಾನೆ ಎಂಬುದನ್ನು ನೋಡಿ.

ನಾವು ಮಾತು ಮಾತಿಗೆ 'ದೇವರಿಟ್ಟ ಹಾಗೆ ಆಗಲಿ', 'ದೇವರಿದ್ದಾನೆ ಬಿಡು, ನೋಡ್ಕೋತಾನೆ', 'ದೇವರೇ ಕಾಪಾಡಪ್ಪ', 'ಅಯ್ಯೋ ದೇವರೇ, ಹೀಗ್ಯಾಕಪ್ಪಾ ಮಾಡಿದೆ ?' ಎಂದು ಹೇಳುವುದಲ್ಲದೇ, 'ಓ ದೇವರೇ, ನಿನಗೆ ನೂರು ತೆಂಗಿನಕಾಯಿ ಒಡಿಸ್ತೀನಿ, ನನ್ನ ಮಗಳಿಗೆ ಒಂದು ಒಳ್ಳೆ ವರ ಕೊಡಿಸಪ್ಪ' ಅಂತೇವೆ. ಪರೀಕ್ಷೆಯ ಹಾಲ್ ಟಿಕೇಟನ್ನು ದೇವರ (ಅಂದರೆ ದೇವರ ಫೋಟೋ, ಅಥವಾ ಮೂರ್ತಿ) ಎದುರು ಇಟ್ಟು 'ದೇವರೇ, ನನ್ನ ಮಗನನ್ನು ಪಾಸು ಮಾಡಪ್ಪ' ಅಂತೇವೆ. ಪರೀಕ್ಷೆ ಬರೆಯೋ ಮುಂಚೆ, ಪ್ರಶ್ನೆ ಪತ್ರಿಕೆ ಕೈಗೆ ಬಂದಕೂಡಲೇ ಅದನ್ನು ಕಣ್ಣಿಗೆ ಒತ್ತಿಕೊಂಡು, 'ಓ ದೇವರೇ, ಈ ಪೇಪರ್ನಲ್ಲಿ ಎಲ್ಲ ನಾನು ಓದಿದ ಪ್ರಶ್ನೆಗಳೇ ಬಂದಿರ್ಲಪ್ಪ', 'ಓ ದೇವರೇ, ನಿನಗೆ ಒಂದು ವಜ್ರ ಕಿರೀಟ ಮಾಡಿಸಿಕೊಡ್ತೀನಿ, ನನ್ನ ಕಳ್ಳ ದಂಧೆ ಯಾವುದೂ ಸರಕಾರಕ್ಕೆ ಪತ್ತೆ ಆಗದ ಹಾಗೆ ನೋಡಿಕೊಳ್ಳಪ್ಪ' ಎಂದೆಲ್ಲಾ ನಾನಾ ರೀತಿಯ ಕೆಲಸಗಳನ್ನು ಮಾಡಿಕೊಡಲು ದೇವರಂಥ ದೇವರಿಗೆ ಕೇಳಿಕೊಳ್ಳುತ್ತೇವೆ (ನೀವು 'ದೇವರೇ...' ಎಂದು ಏನೇನನ್ನು ಹೇಳುತ್ತೀರಿ ಎಂಬುದನ್ನು ಒಮ್ಮೆ ನೆನಪಿಸಿಕೊಳ್ಳಿ, ನಿಮಗೇ ಅರ್ಥವಾಗುತ್ತೆ, ಇದು ಎಷ್ಟು ತಮಾಷೆಯಾಗಿದೆ ಎಂದು). ಆ ದೇವರು ಯಾವಾಗಲೂ ನಮ್ಮ ಮನೆಯ ಆಳು, ಮದುವೆ




ದಲ್ಲಾಳಿ, ಲಾಟರಿ ಏಜೆಂಟ್, ಬಾಡಿಗಾರ್ಡ್ ಇತ್ಯಾದಿ; ಒಂದಷ್ಟು ಲಂಚ ಕೊಟ್ಟರೆ ನಮಗೆ ಬೇಕಾದ್ದನ್ನು ಮಾಡಿಕೊಡುತ್ತಾನೆ ಅಂದುಕೊಳ್ಳುತ್ತೇವೆ.

ನಾನು ನೋಡುತ್ತಿದ್ದ ಟಿವಿ ರಿಯಾಲಿಟಿ ಶೋ ಒಂದರಲ್ಲಿ ಯುವತಿಯರ ನಡುವೆ ಒಂದು ಸ್ಪರ್ಧೆ ಇತ್ತು. ಒಂದಷ್ಟು ಚಪ್ಪಲು, ಶೂಗಳನ್ನು ನೆಲದ ಮೇಲೆ ಇಡಲಾಗಿತ್ತು. ಐದಾರು ಅಡಿ ದೂರದಲ್ಲಿ ಒಂದು ಬಕೆಟ್ಟನ್ನು ಇಡಲಾಗಿತ್ತು. ಸ್ಪರ್ಧಿಗಳು ಒಂದು ಕಾಲ ಮೇಲೆ ನಿಂತು, ಇನ್ನೊಂದು ಕಾಲಿನಿಂದ ಒಂದೊಂದೇ ಚಪ್ಪಲನ್ನು ಎತ್ತಿ ತೂರಬೇಕು. ಹೆಚ್ಚು ಚಪ್ಪಲುಗಳನ್ನು ಆ ಬಕೆಟ್ಟಿನಲ್ಲಿ ಬೀಳುವ ಹಾಗೆ ಮಾಡಿದವರು ಗೆದ್ದ ಹಾಗೆ. ಈ ಟಾಸ್ಕನ್ನು ಶುರು ಮಾಡುವ ಮುಂಚೆ ಒಬ್ಬ ಯುವತಿ ಕಣ್ಣು ಮುಚ್ಚಿಕೊಂಡು ತನ್ನ ಕೈಯನ್ನು ಕಣ್ಣಿಗೆ, ಎದೆಗೆ ಮುಟ್ಟಿಕೊಂಡು ದೇವರನ್ನು ಬೇಡುತ್ತಿದ್ದಳು, ಏನಂತ ?

**ದೇವರನ್ನು ಸೃಷ್ಟಿಸಿದ್ದು ಯಾರು ?**

ದೇವರ ಅಸ್ತಿತ್ವ ಮತ್ತು ಜಗತ್ತಿನ ಸೃಷ್ಟಿಯ ಕುರಿತು ಜಗತ್ತಿನ ಎಲ್ಲಾ ಸಂಪ್ರದಾಯಗಳು ಮತ್ತು ನಾಗರಿಕತೆಗಳಲ್ಲಿಯೂ ಅನಾದಿ ಕಾಲದಿಂದಲೂ ಜಿಜ್ಞಾಸೆ ನಡೆಯುತ್ತಲೇ ಇವೆ. ಇವುಗಳ ಪ್ರಕಾರ ವಿಶ್ವದ ಸೃಷ್ಟಿಕರ್ತ ದೇವರು. ಸಂದೇಹವಾದಿಗಳು, 'ದೇವರು ವಿಶ್ವವನ್ನು ಸೃಷ್ಟಿಸಿದ್ದರೆ, ದೇವರನ್ನು ಸೃಷ್ಟಿಸಿದ್ದು ಯಾರು ?' ಎಂದು ಪ್ರಶ್ನಿಸುತ್ತಾರೆ. ಆದರೆ ಅದಕ್ಕೆ 'ದೇವರು ಎಂದರೆ ಸೃಷ್ಟಿಸಲ್ಪಟ್ಟಿಲ್ಲದ ಸೃಷ್ಟಿಕರ್ತ' ಎಂಬ ಉತ್ತರವೂ ಸಿದ್ಧವಿರುತ್ತದೆ. ಹೆಚ್ಚು ಸುಧಾರಿತ ಪ್ರಶ್ನೆಯೆಂದರೆ, 'ವಿಶ್ವಕ್ಕೆ ಕಾರಣದ ಅಗತ್ಯವಿದ್ದರೆ, ದೇವರಿಗೆ ಕಾರಣದ ಅಗತ್ಯವಿಲ್ಲವೇಕೆ ? ಅಥವಾ ದೇವರಿಗೆ ಕಾರಣ ಅಗತ್ಯವಿಲ್ಲವಾದರೆ, ವಿಶ್ವಕ್ಕೆ ಕಾರಣ ಏಕಿರಬೇಕು ?' ಹೀಗೆ ಗಂಭೀರ ಮಟ್ಟದ ಚರ್ಚೆ ವಿಜ್ಞಾನಿಗಳು, ತತ್ವಶಾಸ್ತ್ರಜ್ಞರು, ವೇದಾಂತಿಗಳು, ದೈವಶಾಸ್ತ್ರಿಗಳ ನಡುವೆ ನಡೆದೇ ಇದೆ. ಯಾವುದೇ ಇದೇ ತೀರ್ಮಾನ ಎಂದು ಹೇಳಲು ಆಗಿಲ್ಲ. ಆದರೂ, ನಾವು ಲೇಖನದ ಆರಂಭದಲ್ಲಿ ಹೇಳಿರುವಂತೆ, ಸದ್ಯಕ್ಕೆ 'ವಿಶ್ವದ ಸೃಷ್ಟಿಕರ್ತ ದೇವರು ಎಂಬ ಶಕ್ತಿ' ಎಂಬುದನ್ನು ಒಪ್ಪಿಕೊಂಡು ಮುಂದುವರಿಯೋಣ. ಅದರ ಆಧಾರದ ಮೇಲೆ ನಮ್ಮ ನಂಬಿಕೆ, ಮೂಢನಂಬಿಕೆ, ಆಚರಣೆ ಇತ್ಯಾದಿಗಳನ್ನು ಅರ್ಥ ಮಾಡಿಕೊಳ್ಳಲು ಪ್ರಯತ್ನಿಸೋಣ.

ಭೂಮಿ ಮತ್ತು ಮನುಷ್ಯರಿಗಷ್ಟೇ ಯಾವುದೇ ಕಾರಣಕ್ಕೂ ಸೀಮಿತವಲ್ಲದ ವಿಶಾಲ ವಿಶ್ವದ ಕುರಿತು ಸ್ಥೂಲವಾಗಿಯಾದರೂ ತಿಳಿದುಕೊಂಡ ನಂತರ, ಇಂಥ ಅಗಾಧ ವಿಶ್ವವನ್ನು ಸೃಷ್ಟಿಸಿರಬಹುದಾದ ಸರ್ವಶಕ್ತ ಶಕ್ತಿಯನ್ನು ಪರಿಕಲ್ಪಿಸಿಕೊಂಡ ನಂತರ ಒಂದು ಸತ್ಯವಂತೂ ಮನದಟ್ಟಾಗುತ್ತದೆ. ಈ ಮಹಾನ್ ಶಕ್ತಿ ಮನುಷ್ಯನಿಗೆ ಮಾತ್ರ ಸೀಮಿತವಾದುದಲ್ಲ, ಇದು ಮನುಷ್ಯನಿಗೆ ಹೋಲುವ ರೂಪದಲ್ಲಿ ಇರಲು ಸಾಧ್ಯವಿಲ್ಲ. ದೇವಾಲಯ, ಚರ್ಚು, ಗುರುದ್ವಾರ, ಮಸೀದಿ, ದರ್ಗಾ ಇಂಥ ಯಾವುದೇ ತಾಣಗಳಲ್ಲಿ ದೇವರು ಇರಲು ಸಾಧ್ಯವಿಲ್ಲ. ಮಹಾನ್ ಶಕ್ತಿಯ ದೇವರು ನಮ್ಮ ಶರಣಾಗತಿಯನ್ನೋ, ಆರಾಧನೆಯನ್ನೋ ನಿರೀಕ್ಷಿಸುವುದಿಲ್ಲ. ನಾವು ದೇವರನ್ನು ರಕ್ಷಣೆ ಮಾಡುವ ಪ್ರಶ್ನೆಯೇ ಉದ್ಭವಿಸುವುದಿಲ್ಲ. ಅಂತೆಯೇ, ಹರಕೆ, ದೇಣಿಗೆ, ಮುಡಿ ಇತ್ಯಾದಿಗಳ ರೂಪದಲ್ಲಿ ಧನ, ದ್ರವ್ಯಗಳನ್ನು ನೀಡಿ ದೇವರ ಮೂಲಕ ಕೆಲಸಗಳನ್ನು ಮಾಡಿಸಿಕೊಳ್ಳಲು ಸಾಧ್ಯವಿಲ್ಲ. ಅದು ಸಾಧ್ಯವೆಂದು ಹೇಳುವುದಾಗಲೀ, ನಾವು ಅದನ್ನು ಮಾಡಿಸಿ ಕೊಡುತ್ತೇವೆ ಎಂದು ದೇವರ ಏಜೆನ್ಸಿ ನಡೆಸುವುದಾಗಲೀ ಮಾಡಿದರೆ ಅದು ಶುದ್ಧ ಮೋಸ.

ನಾವು ಈ ರೀತಿಯ ನಿಲುವನ್ನು ನಮ್ಮ ವೈಜ್ಞಾನಿಕ ಮನೋವೃತ್ತಿ ಸಂಚಾಲಕರ ಶಿಬಿರಗಳಲ್ಲಿ ಸಕ್ರಿಯವಾಗಿ ಚರ್ಚಿಸಿದ ನಂತರ ತಕ್ಷಣ ಅದರ ಪರಿಣಾಮ ಗೋಚರವಾಗುವುದನ್ನು ಕಂಡಿದ್ದೇವೆ. ಅದಾದ ಮುಂದಿನ ಅವಧಿಯಲ್ಲಿ 'ದೇವರ ದಯೆಯಿಂದ...', 'ದೇವರ ಇಚ್ಛೆ' ಇತ್ಯಾದಿ ಅಭ್ಯಾಸ ಬಲದಿಂದ ಬಾಯಿಂದ ಬರುವ ಮಾತುಗಳನ್ನು ಆಡುವಾಗ ಸಂಕೋಚ, ಅಡೆತಡೆ ಕಂಡುಬರುತ್ತದೆ. ಅಥವಾ 'ದೇವರ ದಯೆಯಿಂದ ನಾನು ನಾಸ್ತಿಕ' ಎನ್ನುವ ರೀತಿಯ ವಿಡಂಬನಾತ್ಮಕ ಹೇಳಿಕೆಗಳು ಬರತೊಡಗುತ್ತವೆ. ಉಳಿದವರಿಗಿಂತ ಭಿನ್ನವಾಗಿ ದೇವಸ್ಥಾನಗಳಿಗೆ ಹೋಗದೇ ಇರುವವರಿಗೆ, ನಮಾಜು ಮಾಡದೇ ಇರುವವರಿಗೆ, ತೀರ್ಥಯಾತ್ರೆಗಳಿಗೆ ಹೋಗದೇ ಇರುವವರಿಗೆ ತಮ್ಮ ಧೋರಣೆ ಮತ್ತು ವರ್ತನೆಗೆ ಒಂದು ನಿರ್ದಿಷ್ಟ ಸೈದ್ಧಾಂತಿಕ ನೆಲೆಗಟ್ಟು ಸಿಕ್ಕಂತಾಗುತ್ತದೆ.

ನೀವು ದೇವಸ್ಥಾನಕ್ಕೋ, ಮಸೀದಿಗೋ, ಗುರುದ್ವಾರಕ್ಕೋ ಚರ್ಚಿಗೋ ಹೋಗುವವರಾದರೆ ಈಗಲೂ ಹೋಗಿ. ಧ್ಯಾನ, ನಮಾಜು, ಆರಾಧನೆ ಮಾಡುವುದರಿಂದ ಮನಸ್ಸಿಗೆ ಸಮಾಧಾನ ವಾಗುವುದಾದರೆ ಈಗಲೂ ಮಾಡಿ. ಆದರೆ ನಿಮಗೂ ಇದ್ಯಾವುದನ್ನೂ ಮಾಡದೇ ಇರುವವರಿಗೂ ಏನೂ ವ್ಯತ್ಯಾಸವಿರುವುದಿಲ್ಲ. ನೀವೂ ಇದನ್ನು ಮಾಡದೇ ಇದ್ದರೆ ಏನೂ ವ್ಯತ್ಯಾಸವಾಗುವುದಿಲ್ಲ ಎಂಬುದನ್ನು ಅರ್ಥ ಮಾಡಿಕೊಂಡರೆ ಸಾಕು.

**ಎಂ. ಅಬ್ದುಲ್ ರೆಹಮಾನ್ ಪಾಷ**
'ನಮ್ಮನೆ', ನಂ. ೮೧/೩೭-೩, ೪ನೇ ಅಡ್ಡರಸ್ತೆ
೧೨ನೇ 'ಡಿ' ಮುಖ್ಯರಸ್ತೆ, ಶಿವನಗರ
ಬೆಂಗಳೂರು – ೫೬೦ ೦೧೦

# ಮಹಿಳಾ ಅಧ್ಯಯನ ಪರಿಭಾಷೆ

ನಾನು ಓದಿದ ಪುಸ್ತಕ




ಲೇಖಕರು :
**ಡಾ॥ ಟಿ. ಆರ್. ಚಂದ್ರಶೇಖರ್**
ಪುಟಗಳು : ೧೪೪ ಬೆಲೆ : ರೂ. ೭೫/-

ಪ್ರಕಾಶನ :
**ಕುವೆಂಪು ಭಾಷಾ ಭಾರತಿ ಪ್ರಾಧಿಕಾರ**
ಕಲಾಗ್ರಾಮ, ಜ್ಞಾನಭಾರತಿ, ಬೆಂಗಳೂರು
ವಿಶ್ವವಿದ್ಯಾಲಯ ಆವರಣದ ಹಿಂಭಾಗ,
ಮಲ್ಲತ್ತಹಳ್ಳಿ, ಬೆಂಗಳೂರು – ೫೬೦ ೦೫೬

**ಪ್ರೊ॥** ಟಿ. ಆರ್. ಚಂದ್ರಶೇಖರ್ ಅವರು ಬರೆದು ಕುವೆಂಪು ಭಾಷಾ ಭಾರತಿ ಪ್ರಾಧಿಕಾರದವರು ಪ್ರಕಟಿಸಿರುವ 'ಮಹಿಳಾ ಅಧ್ಯಯನ ಪರಿಭಾಷೆ' ಪುಸ್ತಕವು ಮಹಿಳಾ ಅಧ್ಯಯನ ಸಾಹಿತ್ಯಕ್ಕೆ ಸೇರ್ಪಡೆಯಾಗಿರುವ ಮಹತ್ವದ ಆಕರ ಗ್ರಂಥವಾಗಿದೆ. ಕಳೆದ ೨೫ ವರ್ಷಗಳಿಂದ ಡಾ॥ ಚಂದ್ರಶೇಖರ್ ಅವರು ಮಹಿಳಾ ದುಡಿಮೆ, ಮಹಿಳಾ ಅಭಿವೃದ್ಧಿ, ಮಹಿಳಾ ಮಾನವ ಅಭಿವೃದ್ಧಿ, ಮಹಿಳಾ ಸಶಕ್ತೀಕರಣ ಕುರಿತು ಚಿಂತನೆ, ಚರ್ಚೆ ಹಾಗೂ ಬರವಣಿಗೆಯಲ್ಲಿ ತೊಡಗಿದ್ದಾರೆ. ಮಹಿಳಾ ಅಧ್ಯಯನಕ್ಕೆ ಕನ್ನಡದಲ್ಲಿ ಪಠ್ಯಪುಸ್ತಕಗಳನ್ನು ಒದಗಿಸುತ್ತಿರುವ ಕೆಲವೇ ಮಂದಿಯಲ್ಲಿ ಮುಂಚೂಣಿಯಲ್ಲಿದ್ದಾರೆ. ಪ್ರಸ್ತುತ ಪುಸ್ತಕ 'ಮಹಿಳಾ ಅಧ್ಯಯನ ಪರಿಭಾಷೆ'ಯೂ ಕೂಡ ವಿದ್ಯಾರ್ಥಿ ಸಮೂಹ, ಮಹಿಳಾ ವಿಷಯಗಳಲ್ಲಿ ಆಸಕ್ತಿ ಇರುವವರಿಗೆ, ಸಂಶೋಧಕರಿಗೆ ಮತ್ತು ಅಧ್ಯಾಪಕರಿಗೆ ಪಠ್ಯಪುಸ್ತಕ ಮತ್ತು ಆಕರ ಗ್ರಂಥವಾಗಲಿದೆ.

ಯಾವುದೇ ಶಿಸ್ತು ಆಳವಾಗಿ ವಿಶಾಲವಾಗಿ ಬೆಳೆಯಬೇಕೆಂದರೆ ಅದರಲ್ಲಿ ಹೊಸ ತತ್ವ ಸಿದ್ಧಾಂತ ಪರಿಕಲ್ಪನೆಗಳನ್ನು ಕಟ್ಟುವುದು ಮುಖ್ಯವಾಗುತ್ತದೆ. ಸ್ತ್ರೀವಾದ ಹಾಗೂ ಮಹಿಳಾ ಚಳುವಳಿಯ ಹಿನ್ನೆಲೆಯಲ್ಲಿ ಹುಟ್ಟಿಕೊಂಡ ಮಹಿಳಾ ಅಧ್ಯಯನದಲ್ಲಿ ಅದರ ನೆಲೆಯಲ್ಲಿ ಹುಟ್ಟಿಕೊಂಡ ಪರಿಕಲ್ಪನೆಗಳ ಜೊತೆಗೆ ಇತರ ಜ್ಞಾನಶಿಸ್ತುಗಳ ಪರಿಕಲ್ಪನೆಗಳು ಮೇಳೈಸಿಕೊಂಡವು. ಈ ಪರಿಕಲ್ಪನೆಗಳನ್ನು ಸಾಮಾನ್ಯ ಆಡುಭಾಷೆಯಲ್ಲಿ ಮತ್ತು ಇತರ ಶಿಸ್ತುಗಳಲ್ಲೂ ಬಳಸಲಾಗುತ್ತದೆ. ಆದರೆ ಮಹಿಳಾ ಅಧ್ಯಯನದಲ್ಲಿ ಬಳಸುವಾಗ ಸ್ತ್ರೀವಾದಿ ನೆಲೆ ಹಾಗೂ ವಿವಿಧ ಆಯಾಮಗಳಲ್ಲಿ ಅರ್ಥೈಸಬೇಕಾಗುತ್ತದೆ. ಆಗ ಅವುಗಳಿಗೆ ನಿರ್ದಿಷ್ಟ ಅರ್ಥವ್ಯಾಪ್ತಿ ದೊರಕುತ್ತದೆ. ಇದರಿಂದ ಅವುಗಳ ಸೀಮಿತ ಬಳಕೆ ಮತ್ತು ಅರ್ಥವನ್ನು ವಿಕೃತಗೊಳಿಸುವುದನ್ನು ತಡೆಯಬಹುದು.

ಪರಿಭಾಷೆಯನ್ನು ಗಾಢ ಅರ್ಥ ನೀಡುವ ತಾಂತ್ರಿಕ ಪದ ಅಥವಾ ಒಂದೆರಡು ವಾಕ್ಯಗಳಲ್ಲಿ ವ್ಯಾಖ್ಯಾನಿಸುವ ಪದ್ಧತಿ ಇದೆ. ಆದರೆ ಅದನ್ನು ಬೇರೆ ಬೇರೆ ಆಯಾಮ, ಸಂದರ್ಭ, ಪರಿಸ್ಥಿತಿಗೆ ತಕ್ಕಂತೆ ಅರ್ಥೈಸಿಕೊಳ್ಳುವುದು, ವಿವರಿಸಿಕೊಳ್ಳುವುದು ಮುಖ್ಯ. ಅದರಲ್ಲೂ ಬಹು ಟೀಕೆಗೆ ಒಳಗಾಗುತ್ತಿರುವ 'ಸ್ತ್ರೀವಾದ' ಅದರ ನೆಲೆಯಲ್ಲಿ ಹುಟ್ಟಿಕೊಂಡಿರುವ ಮಹಿಳಾ ಅಧ್ಯಯನ ಪರಿಭಾಷೆಗಳು ಮತ್ತಷ್ಟು ಟೀಕೆಗಷ್ಟೆ ಅಲ್ಲ ತಪ್ಪು ಬಳಕೆಗೆ ಒಳಗಾಗುವ ಸಾಧ್ಯತೆ ಹೆಚ್ಚು. ಇದನ್ನು ತಪ್ಪಿಸಲು ಡಾ॥ ಟಿ. ಆರ್. ಚಂದ್ರಶೇಖರ್ ಬರೆದಿರುವ ಈ ಪುಸ್ತಕ ಹೆಚ್ಚು ಪ್ರಸ್ತುತವಾಗಿದೆ. ಲೇಖಕರೆ ಹೇಳುವಂತೆ ಇದು ಆಯ್ದ ಪ್ರತಿ ಪರಿಭಾಷೆ ಪದಕ್ಕೆ ವಿವರಣೆ ನೀಡುವ 'ವಿವರಣಕೋಶವಾಗಿದೆ'.

ಇದರಲ್ಲಿ ಸಾಮಾಜಿಕ, ಆರ್ಥಿಕ, ಕಾನೂನು, ಜನಸಂಖ್ಯೆ, ಅಭಿವೃದ್ಧಿ, ಆರೋಗ್ಯ, ಸ್ತ್ರೀವಾದ ಮತ್ತು ಸ್ತ್ರೀವಾದಿ ಸಿದ್ಧಾಂತಗಳಿಗೆ ಸಂಬಂಧಿಸಿದಂತೆ ವಿವಿಧ ಪರಿಭಾಷೆಗಳನ್ನು ಸಂಕ್ಷಿಪ್ತವಾಗಿ ವಿವರಿಸಿದ್ದಾರೆ. ಪ್ರತಿ ಪರಿಭಾಷೆಯನ್ನು ಮಹಿಳಾ ಹಿನ್ನೆಲೆಯಲ್ಲಿ ಅರ್ಥೈಸಿರುವುದರಿಂದ, ಇತರ ಶಿಸ್ತುಗಳಲ್ಲಿ ಅಥವಾ ಆಡುಭಾಷೆಯಲ್ಲಿ ಅದನ್ನು ಬಳಸುವುದಕ್ಕೂ ಮಹಿಳಾ ಅಧ್ಯಯನದಲ್ಲಿ ಬಳಸುವುದಕ್ಕೂ ಇರುವ ವ್ಯತ್ಯಾಸವನ್ನು ಗುರುತಿಸಬಹುದು. ಉದಾಹರಣೆಗೆ ಸಂಸ್ಕೃತಿ ಪರಿಭಾಷೆಯನ್ನು ಮಹಿಳಾ ಕೇಂದ್ರಬಿಂದುವಾಗಿಟ್ಟು ಕೊಂಡು ನೋಡಿದರೆ, ಒಂದು ಸಂಸ್ಕೃತಿಯಲ್ಲೆ ಸ್ತ್ರೀ ಪುರುಷರ ಅಸಮಾನತೆ ಅಂತರ್ಗತಗೊಂಡಿದ್ದರೆ ಅದರ ಸಾಮಾಜಿಕ, ಆರ್ಥಿಕ, ರಾಜಕೀಯ ಆಯಾಮಗಳಲ್ಲೂ ಅದು ಹಾಸುಹೊಕ್ಕಾಗಿರುತ್ತದೆ. ಸಂಸ್ಕೃತಿಯ ಹಿಡಿತ ಎಷ್ಟು ಬಲವಾಗಿರುತ್ತದೆ ಎಂದರೆ ಯಾವುದೇ ಕಾನೂನು ಕಟ್ಟಳೆಗಳು ಅದನ್ನು ತೊಡೆದುಹಾಕಲಾಗುವುದಿಲ್ಲ, ವಿಶೇಷವಾಗಿ ಮಹಿಳೆಯರ ವಿಷಯದಲ್ಲಿ ಇದು ಪ್ರಬಲವಾಗಿದೆ ಎಂದು ಹೇಳುತ್ತಾರೆ. ಅದೇ ರೀತಿ ಮಹಿಳಾ ದುಡಿಮೆ, ಸಬಲೀಕರಣ, ಲಿಂಗ ಸಂಬಂಧ, ಅಭಿವೃದ್ಧಿ, ಮನುಷ್ಯ ಗುಣ, ಹಕ್ಕುಗಳು, ಲಿಂಗಾನುಪಾತ ಮುಂತಾದ ಪರಿಭಾಷೆಗಳನ್ನು ಮಹಿಳೆಯರನ್ನು ಕೇಂದ್ರವಾಗಿಟ್ಟು ಕೊಂಡು ವ್ಯಾಖ್ಯಾನಿಸಿದ್ದಾರೆ.

ಸ್ತ್ರೀವಾದ ಪರಿಭಾಷೆಯನ್ನು ಅತ್ಯಂತ ಸರಳವಾಗಿ ಚಿಕ್ಕ ಚಿಕ್ಕ ಹೇಳಿಕೆಗಳಲ್ಲಿ ಸುಲಭವಾಗಿ ಅರ್ಥವಾಗುವಂತೆ ವಿವರಿಸಿದ್ದಾರೆ. ಮಹಿಳೆಯರು ಮಹಿಳೆಯರೆನ್ನುವ ಕಾರಣಕ್ಕೆ ಎದುರಿಸುವ ಅಸಮಾನತೆ, ತಾರತಮ್ಯ, ಶೋಷಣೆಗಳನ್ನು ಅರ್ಥಮಾಡಿಕೊಳ್ಳುವ ಮತ್ತು ಅವುಗಳನ್ನು ವಿರೋಧಿಸುವ ಸಿದ್ಧಾಂತವೆ ಸ್ತ್ರೀವಾದ ಎಂದು ವ್ಯಾಖ್ಯಾನಿಸಿದ್ದಾರೆ.

ಮಹಿಳಾ ದುಡಿಮೆ ಮತ್ತು ಮಹಿಳಾ ಅಭಿವೃದ್ಧಿಯಲ್ಲಿ ವಿಶೇಷವಾಗಿ ಪರಿಶ್ರಮ ಮಾಡಿರುವ ಡಾ॥ ಚಂದ್ರಶೇಖರ್ ಅವರು ಇಲ್ಲಿಯೂ ಅವುಗಳನ್ನು ಚರ್ಚಿಸಿದ್ದಾರೆ. ಮಹಿಳಾ ದುಡಿಮೆಯನ್ನು ಅಂಕಿ-ಅಂಶಗಳ ಸಹಿತ ವಿವರಿಸಿದ್ದಾರೆ. 'ಸಾಮಾಜಿಕ

**ಹೇಮಲತ ಎಚ್. ಎಮ್.**

ಮಹಿಳೆಯರನ್ನು ಮಾನವರಂತೆ ಪರಿಗಣಿಸದೆ ಕಾನೂನಾತ್ಮಕವಾಗಿ ಮತ್ತು ಸೈದ್ಧಾಂತಿಕವಾಗಿ ಹಕ್ಕುಗಳನ್ನು ನೀಡಿದ್ದರೂ ವಾಸ್ತವದಲ್ಲಿ ಅವುಗಳ ನಿರಾಕರಣೆಯಾಗುತ್ತಿದ್ದು ಅದನ್ನು ಹೋಗಲಾಡಿಸುವ ಪ್ರಯತ್ನದಲ್ಲಿ 'ಮಹಿಳಾ ಮಾನವ ಹಕ್ಕುಗಳು' ಎಂಬ ಪರಿಭಾಷೆ ಜನ್ಮತಾಳಿರುವುದನ್ನು ಉಲ್ಲೇಖಿಸಿದ್ದಾರೆ. ಮಹಿಳಾ ಹಕ್ಕುಗಳ ಪಟ್ಟಿಯನ್ನು ನೀಡುತ್ತಾ ಖಾಸಗಿತನದಿಂದ ಹೊರಬಂದು ಸಾಮಾಜಿಕ ಕ್ಷೇತ್ರದಲ್ಲಿ ಭಾಗವಹಿಸುತ್ತಿದ್ದರೂ ಮಹಿಳೆಯರ ಮಾನವ ಹಕ್ಕುಗಳು ಉಲ್ಲಂಘಿಸುತ್ತಿರುವುದನ್ನು ತಿಳಿಸುತ್ತಾರೆ.

ತಂತ್ರಜ್ಞಾನ' ಎಂಬ ಹೊಸ ಪರಿಭಾಷೆಯ ಮೂಲಕ ಉತ್ಪಾದನಾ ಕ್ರಿಯೆಗೆ ಒಂದು ಹೊಸ ದೃಷ್ಟಿಕೋನ ನೀಡಿದ್ದರೆ, ಮಹಿಳಾಭಿವೃದ್ಧಿಗೆ ಸಂಬಂಧಪಟ್ಟಂತೆ 'ಮಹಿಳೆಯರ ಹಿತಾಸಕ್ತಿಗಳು' ಎಂಬ ನವ ಪರಿಕಲ್ಪನೆಗಳನ್ನು ಕನ್ನಡಕ್ಕೆ ತಂದಿದ್ದಾರೆ. ಸ್ತ್ರೀವಾದಿ ಅಭಿವೃದ್ಧಿ ಚಿಂತಕರಾದ ಮ್ಯಾಕ್ಸೈನ್ ಮೊಲಿನಿಕ್ಸ್ ಮತ್ತು ಕಾರೋನೈಲ್ ಮೋಸರ್ ಅವರು ರೂಪಿಸಿದ 'ಮಹಿಳೆಯರ ದೈನಂದಿನ ಹಿತಾಸಕ್ತಿಗಳು' ಮತ್ತು 'ಮಹಿಳೆಯರ ಸಂಘರ್ಷಣಾತ್ಮಕ ಹಿತಾಸಕ್ತಿಗಳು' ಎಂಬ ಪರಿಭಾಷೆಗಳನ್ನು ಪರಿಚಯಿಸುತ್ತಾರೆ. ಸ್ತ್ರೀತನವನ್ನು ವೈಭವೀಕರಿಸುವ ಭಾರತೀಯ ಸಮಾಜದ ನೆಲೆಯಲ್ಲಿ ಮಹಿಳಾ ಹಿತಾಸಕ್ತಿಗಳನ್ನು ಅರ್ಥೈಸಿದ್ದಾರೆ. ಮೋಸರ್ ಅವರು ರೂಪಿಸಿರುವ ಸಂಘರ್ಷಣಾತ್ಮಕ ಹಿತಾಸಕ್ತಿಗಳು ಪ್ರಸ್ತುತ ಸಮಾಜದಲ್ಲಿ ಲಿಂಗ ಸಂಬಂಧಿ ಸಮಾನತೆಯನ್ನು ತರಲು ತುಂಬ ಅವಶ್ಯಕ ಅನ್ನುವುದನ್ನು ಬಿಂಬಿಸುತ್ತವೆ.

ಮಹಿಳೆಯರನ್ನು ಮಾನವರಂತೆ ಪರಿಗಣಿಸದೆ ಕಾನೂನಾತ್ಮಕವಾಗಿ ಮತ್ತು ಸೈದ್ಧಾಂತಿಕವಾಗಿ ಹಕ್ಕುಗಳನ್ನು ನೀಡಿದ್ದರೂ ವಾಸ್ತವದಲ್ಲಿ ಅವುಗಳ ನಿರಾಕರಣೆಯಾಗುತ್ತಿದ್ದು ಅದನ್ನು ಹೋಗಲಾಡಿಸುವ ಪ್ರಯತ್ನದಲ್ಲಿ 'ಮಹಿಳಾ ಮಾನವ ಹಕ್ಕುಗಳು' ಎಂಬ ಪರಿಭಾಷೆ ಜನ್ಮತಾಳಿರುವುದನ್ನು ಉಲ್ಲೇಖಿಸಿದ್ದಾರೆ. ಮಹಿಳಾ ಹಕ್ಕುಗಳ ಪಟ್ಟಿಯನ್ನು ನೀಡುತ್ತಾ ಖಾಸಗಿತನದಿಂದ ಹೊರಬಂದು ಸಾಮಾಜಿಕ ಕ್ಷೇತ್ರದಲ್ಲಿ ಭಾಗವಹಿಸುತ್ತಿದ್ದರೂ ಮಹಿಳೆಯರ ಮಾನವ ಹಕ್ಕುಗಳು ಉಲ್ಲಂಘಿಸುತ್ತಿರುವುದನ್ನು ತಿಳಿಸುತ್ತಾರೆ.

'ಸ್ತ್ರೀವಾದಿ ಜ್ಞಾನ ಉತ್ಪಾದನೆ'ಯು ಮತ್ತೊಂದು ಹೊಸ ಪರಿಭಾಷೆಯಾಗಿದೆ. ಮಹಿಳೆಯರು ಜ್ಞಾನವನ್ನು ಉತ್ಪಾದಿಸಬಲ್ಲರು ಎಂದು ಪ್ರತಿಪಾದಿಸುತ್ತ, ಸಾಂಪ್ರದಾಯಿಕ ಜ್ಞಾನ ಶಿಸ್ತುಗಳಲ್ಲಿ, ಮಹಿಳೆಯರು ಮಾಡುವ ಚಿಂತನೆ, ಕೆಲಸ, ಪ್ರತಿಪಾದಿಸುವ ತತ್ವಗಳು ಅಪಾರ ಕೊಡುಗೆ ಸಲ್ಲಿಸುತ್ತಿರುವುದನ್ನು ನಿರ್ಲಕ್ಷಿಸಲಾಗುತ್ತಿದೆ, ಅದನ್ನು ಜ್ಞಾನವೆಂದೇ ಪರಿಗಣಿಸುತ್ತಿಲ್ಲ ಎಂದು ಟೀಕೆ ಮಾಡುತ್ತಾರೆ. ಸಾಂಪ್ರದಾಯಿಕ ಮತ್ತು ಸ್ತ್ರೀವಾದಿ ಜ್ಞಾನ ಉತ್ಪಾದನಾ ಸಿದ್ಧಾಂತಗಳ ನಡುವಿನ ಭಿನ್ನತೆಗಳನ್ನು ಗುರುತಿಸುತ್ತಾರೆ.

ದಮನಕ್ಕೊಳಗಾಗುತ್ತಿರುವ ಎಲ್ಲಾ ಮಹಿಳೆಯರ ನಡುವೆ ಲಿಂಗ, ಜಾತಿ ಮತ್ತು ವರ್ಗಗಳ ಮೂರು ನೆಲೆಗಳಲ್ಲಿ ಮತ್ತಷ್ಟು ದಮನಕ್ಕೊಳಗಾಗುವ 'ದಲಿತ ಮಹಿಳೆ'ಯರ ಕುರಿತು ಅಂಕಿ ಅಂಶಗಳನ್ನು ಕೊಟ್ಟು ತೀವ್ರ ತಾರತಮ್ಯಕ್ಕೊಳಗಾಗುತ್ತಿರುವುದನ್ನು ಸಾದರಪಡಿಸುತ್ತಾರೆ. ಮಹಿಳೆಯರ ಸಂಭಾವನಾರಹಿತ ದುಡಿಮೆಯ ಕಾರಣ ಮತ್ತು ಪರಿಣಾಮಗಳನ್ನು ಹೆಸರಿಸುತ್ತಾ ರಾಷ್ಟ್ರೀಯ ಅಭಿವೃದ್ಧಿಗೆ ಅದರ ಕೊಡುಗೆಯನ್ನು ಪರಿಗಣಿಸುವುದಾದರೆ ನಮ್ಮ ದೇಶವನ್ನು 'ಮಹಿಳಾ ಆರ್ಥಿಕತೆ' ಎಂದು ಕರೆಯಬಹುದೆನ್ನುತ್ತಾರೆ. ಅಂದರೆ ದೇಶದ ಅಭಿವೃದ್ಧಿಗೆ ಮಹಿಳೆಯರ ದುಡಿಮೆ ಎಷ್ಟು ಮಹತ್ತರವಾದುದು ಅನ್ನುವುದನ್ನು ಈ ಪರಿಭಾಷೆ ತಿಳಿಸುತ್ತದೆ. ಮಹಿಳೆಯರು ಮಾಡುವ ವಿವಿಧ ಸಂಭಾವನೆಯಿಲ್ಲದ ಕೆಲಸಗಳನ್ನು ಪಟ್ಟಿ ಮಾಡುತ್ತಾರೆ. ಮಹಿಳಾ ದುಡಿಮೆಯ ಅಗೋಚರತೆಯನ್ನು ಅನಾವರಣಗೊಳಿಸುವಲ್ಲಿ ಈ ಪರಿಭಾಷೆಯು ಯಶಸ್ವಿಯಾಗಿದೆ.

ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಮಹಿಳೆಯರ ಲೈಂಗಿಕತೆಯ ಮೇಲಿನ ನಿರ್ಬಂಧ, ಸಂತಾನೋತ್ಪತ್ತಿ, ಆರೋಗ್ಯದ ನಿರ್ಲಕ್ಷ್ಯ ಹಾಗೂ ಹಕ್ಕುಗಳ ಉಲ್ಲಂಘನೆಯನ್ನು ಅಂಕಿ ಅಂಶಗಳೊಂದಿಗೆ ವಿವರಿಸಿದ್ದಾರೆ. ಒಂದು ಕಾಲದಲ್ಲಿ ಅತ್ಯಂತ ಸಾಮಾನ್ಯ ಅಥವಾ ಪರಿಗಣಿಸುವ ಅಂಶವಲ್ಲ ಅಥವಾ ಸಹಜವಾದುದೆಂದು ಭಾವಿಸಲಾಗಿದ್ದಂತಹ ವಿಷಯವೊಂದು ಇವತ್ತು ಪರಿಭಾಷೆಯಾಗಿ ರೂಪುಗೊಂಡಿರುವುದಕ್ಕೆ 'ಮಹಿಳೆಯರ ದೈಹಿಕ ಭದ್ರತೆ' ಪರಿಕಲ್ಪನೆ ಉದಾಹರಣೆಯಾಗಿದೆ. ದೈಹಿಕ ಭದ್ರತೆ ಒಳಗೊಂಡಿರುವ ಸಂಗತಿಗಳನ್ನು ತಿಳಿಸುತ್ತಾ ಮಹಿಳೆಯರನ್ನು ಜೈವಿಕತೆ, ದೈಹಿಕತೆ ಮತ್ತು ಪ್ರಕೃತಿಗೆ ಸಂವಾದಿಯನ್ನಾಗಿಸುತ್ತಾ ತಾಯಿತನವನ್ನು ವೈಭವೀಕರಿಸುವುದು ಭೌತಿಕತೆಯನ್ನು ಶ್ರೇಷ್ಠಗೊಳಿಸಿ ಮಹಿಳೆಯರನ್ನು ಕೀಳಾಗಿಸುವ ಹುನ್ನಾರವನ್ನು ಬಯಲಿಗೆಳೆಯುತ್ತಾರೆ. ಸಂಪ್ರದಾಯ ಮತ್ತು ಕುಟುಂಬ ವ್ಯವಸ್ಥೆಯನ್ನು ಭದ್ರಗೊಳಿಸುವ ನೆಪದಲ್ಲಿ ವೈವಾಹಿಕ ಸಂಬಂಧದಲ್ಲಿ ನಡೆಯುವ ದೈಹಿಕ ಭದ್ರತೆಯ ಉಲ್ಲಂಘನೆಯನ್ನು ಹೆಸರಿಸುತ್ತಾ ಸಂವಿಧಾನವು ಜೀವಿಸುವ ಮತ್ತು ಸಮಾನತೆಯ ಹಕ್ಕುಗಳನ್ನು ನೀಡಿದ್ದರೂ ಅವು ನಿಷ್ಪ್ರಯೋಜಕವಾಗಿರುವುದನ್ನು ಉಲ್ಲೇಖಿಸುತ್ತಾರೆ.

**ಬಾಯಾರಿಕೆ**

ನೋವುಗಳನ್ನು  
ನುಂಗುತ್ತ ಹೋದೆ  
ಬಾಯಾರಿಕೆ ಸತ್ತಿತ್ತು !

**ಶೋಭಾ ಪ್ರಮೋದ್**  
ಮಹಾರಾಷ್ಟ್ರ

'ಸ್ಮಾರ್ಟ್ ಅರ್ಥಶಾಸ್ತ್ರ'ವು ಲಿಂಗಸಮಾನತೆಯನ್ನು ಅಭಿವೃದ್ಧಿಯ ಅವಿಭಾಜ್ಯ ಅಂಗ ಎಂದು ಪ್ರತಿಪಾದಿಸುತ್ತದೆ. ಮಹಿಳೆಯರು ಮತ್ತು ಹೆಣ್ಣುಮಕ್ಕಳ ಮೇಲೆ ಹೆಚ್ಚು ಬಂಡವಾಳ ಹೂಡಿದಷ್ಟು ನಿಜವಾದ ಅಭಿವೃದ್ಧಿ ಸಾಧಿಸಲು ಸಾಧ್ಯವೆನ್ನುತ್ತದೆ. ಆದರೆ ಸ್ಮಾರ್ಟ್ ಅರ್ಥಶಾಸ್ತ್ರವು ಒಂದು ವಾಣಿಜ್ಯ–ವ್ಯಾಪಾರ ಪರಿಭಾಷೆಯಾಗಿ ಲಿಂಗ ಸಮಾನತೆಯನ್ನು ಅಂಚಿಗೆ ತಳ್ಳಿರುವುದನ್ನು ಕಾಣಬಹುದು. ಇದರಿಂದ ಸ್ಮಾರ್ಟ್ ಅರ್ಥಶಾಸ್ತ್ರವು ಒಳಗೊಂಡಿರುವ ಇತಿಮಿತಿಗಳನ್ನು ಪಟ್ಟಿಮಾಡುತ್ತಾರೆ.

ಸ್ತ್ರೀವಾದದ ಮೂಲ ಪ್ರಕಾರಗಳಾದ ಉದಾರವಾದ, ಮಾರ್ಕ್ಸ್‌ವಾದ, ಉಗ್ರಗಾಮಿ ಹಾಗೂ ಸಮಾಜವಾದಿ ಸ್ತ್ರೀವಾದಗಳ ಮೂಲ ತತ್ವಗಳನ್ನು ವಿವರಿಸುತ್ತಾ ನವ ಉದಾರವಾದ ಸ್ತ್ರೀವಾದದ ಚರ್ಚಿತ ವಿಷಯಗಳು ಮತ್ತು ಅದರ ಸ್ತ್ರೀವಾದಿ ವಿಮರ್ಶೆಯನ್ನು ಕಟ್ಟಿಕೊಡುತ್ತಾರೆ. ಫೇಸ್ ಬುಕ್ ಸಂಸ್ಥೆಯ ಮುಖ್ಯ ಅಧಿಕಾರಿಯಾದ ಶೆರ್ಲಿ ಸ್ಯಾಂಡ್ ಬರ್ಗ್ ಅವರ ಪ್ರತಿಪಾದನೆಗಳನ್ನು ಉಲ್ಲೇಖಿಸುತ್ತಾ ಮಹಿಳೆಯರ ವೈಯಕ್ತಿಕ ಸಾಮರ್ಥ್ಯಕ್ಕೆ ಹೆಚ್ಚು ಒತ್ತುಕೊಡುತ್ತಾ ಅವರ ಸಂಘಟನಾತ್ಮಕ ಪ್ರಯತ್ನಗಳನ್ನು ಒಡೆದು, ಬಾಗುವ, ಹೊಂದಾಣಿಕೆ ಮಾಡಿಕೊಂಡು ಕುಟುಂಬ ಮತ್ತು ವೃತ್ತಿಗಳೆರಡನ್ನು ಸಮರ್ಥವಾಗಿ ನಿಭಾಯಿಸಿಕೊಂಡು ಹೋಗಬೇಕೆಂದು ಹೇಳುತ್ತಾ ಪುನಃ ಅವರನ್ನು ಸಾಂಪ್ರದಾಯಿಕ ಪಾತ್ರಗಳಿಗೆ ಸೀಮಿತಗೊಳಿಸುವ ತಂತ್ರವಾಗಿದೆ ಎನ್ನುತ್ತಾರೆ.

ಕೊನೆಯ ಪರಿಭಾಷೆಯಾಗಿ ಲಿಂಗ ಸಂಬಂಧದ 'ಸಹಕಾರಿವಾದಿ' ಹಾಗೂ 'ಸಂಘರ್ಷವಾದಿ' ಸಂಬಂಧಗಳನ್ನು ಅರ್ಥೈಸಿದ್ದಾರೆ. ಅರ್ಥಶಾಸ್ತ್ರದ ವ್ಯಾಪ್ತಿಯಿಂದ ಹೊರಗಿದ್ದ 'ಕುಟುಂಬ' ಘಟಕವು ೧೯೬೦ರ ದಶಕದ ನಂತರ 'ನವೀನ ಕುಟುಂಬ ಅರ್ಥಶಾಸ್ತ್ರವಾಗಿ' ಹೊರಹೊಮ್ಮಿತು. ಕುಟುಂಬದೊಳಗಿನ ಲಿಂಗ ಸಂಬಂಧಗಳನ್ನು ಅಮರ್ತ್ಯ ಸೇನ್ ಅವರ 'ಗ್ರಹಿಕೆ ವಿಶ್ಲೇಷಣೆ' ಮೂಲಕ ಉಲ್ಲೇಖಿಸುತ್ತಾರೆ. ಈ ಭ್ರಮಾತ್ಮಕ ಮಾನಸಿಕ ಗ್ರಹಿಕೆಯಿಂದ ಆಚೆ ಬರಲು ಬೇಕಾದ ದಾರಿಗಳನ್ನು ಹೆಸರಿಸುತ್ತಾ ಕುಟುಂಬವು ಅಖಂಡವಾದ ಘಟಕವಲ್ಲ, ಅದರೊಳಗಿನ ಲಿಂಗ ಸಂಬಂಧಗಳು ತುಂಬ ಸಂಕೀರ್ಣವಾಗಿರುತ್ತವೆ, ಸಹಕಾರವಾದಿ ತತ್ವವು ಪ್ರಧಾನವಾಗಿರುವುದರಿಂದ ಬದಲಾಯಿಸಲು ಹೋದರೆ ಸಂಘರ್ಷದ ಪರಿಣಾಮಗಳನ್ನು ಎದುರಿಸಬೇಕಾಗುತ್ತದೆ. ಇದರಿಂದ ಮಹಿಳೆಯರು ಹೆಚ್ಚು ತೊಂದರೆಗೆ ಈಡಾಗುತ್ತಾರೆ. ಸಂಘರ್ಷದ ಪರಿಣಾಮವನ್ನು ಪರಿಣಾಮಕಾರಿಯಾಗಿ ಎದುರಿಸುವಂತೆ ಮಹಿಳೆಯರನ್ನು ಬಲಗೊಳಿಸಬೇಕಾಗಿದೆ ಎನ್ನುತ್ತಾರೆ.

ಪರಿಭಾಷೆಗಳನ್ನು ಕ್ರಮವಾಗಿ ಮಂಡಿಸಿದ್ದಿದ್ದರೆ ವಿಷಯಗಳಿಗೆ ನಿರಂತರತೆಯಿರುತ್ತಿತ್ತು. ಉದಾಹರಣೆಗೆ ಮಹಿಳಾ ದುಡಿಮೆ, ಸ್ತ್ರೀವಾದ ಅದರ ಪ್ರಕಾರಗಳು, ಲಿಂಗ ಸಂಬಂಧಗಳು ಒಂದೇ ಕಡೆ ಬಂದಿದ್ದರೆ ಅರ್ಥಮಾಡಿಕೊಳ್ಳಲು ಅನುಕೂಲವಾಗುತಿತ್ತು.

ಒಟ್ಟಿನಲ್ಲಿ ನಾವು ದಿನನಿತ್ಯ ಜೀವನದಲ್ಲಿ ಕಾಣುವ ಅನುಭವಿಸುವ, ನಮ್ಮ ಸುತ್ತ ಅವಲೋಕಿಸುವ ಅನೇಕ ವಿಷಯಗಳನ್ನು ಡಾ॥ ಚಂದ್ರಶೇಖರ್ ಅವರು ಅಕಾಡೆಮಿಕ್ ಚೌಕಟ್ಟಿನಲ್ಲಿ ಸರಳವಾಗಿ ಎಲ್ಲರಿಗೂ ಅರ್ಥವಾಗುವ ಭಾಷೆಯಲ್ಲಿ ಪ್ರಸ್ತುತಪಡಿಸುತ್ತಾರೆ. ಇದು ಅವರ ವೈಶಿಷ್ಟ್ಯ. ಖಂಡಿತ ಈ ಪುಸ್ತಕವು ಮಹಿಳಾ ವಿಷಯಗಳನ್ನು ಹೊಸದಾಗಿ ಗ್ರಹಿಸುವವರಿಗೆ ಮತ್ತು ಶೈಕ್ಷಣಿಕ ವಲಯದಲ್ಲಿರುವವರಿಗೆ ಅವುಗಳನ್ನು ವಿವಿಧ ಆಯಾಮಗಳಲ್ಲಿ ಅರ್ಥೈಸಿಕೊಳ್ಳುವುದಕ್ಕೆ ಅರ್ಥಕೋಶದ ಕೈಪಿಡಿಯಾಗಿದೆ. ಸಮಾಜ ವಿಜ್ಞಾನದ ಜ್ಞಾನಾರ್ಥಿಗಳಿಗೆ ವಿಶೇಷವಾಗಿ ಮಹಿಳಾ ಅಧ್ಯಯನದವರಿಗೆ ಆಕರ ಗ್ರಂಥವಾಗಲಿದೆ. ಇಂತಹ ಒಂದು ಪುಸ್ತಕವನ್ನು ಬರೆದಿರುವ ಡಾ॥ ಚಂದ್ರಶೇಖರ್ ಅವರಿಗೆ ಅಭಿನಂದನೆಗಳು.

**ಹೇಮಲತ. ಎಚ್. ಎಮ್.**  
ಮಹಿಳಾ ಅಧ್ಯಯನ ವಿಭಾಗ  
ಕರ್ನಾಟಕ ರಾಜ್ಯ ಮಹಿಳಾ ವಿಶ್ವವಿದ್ಯಾಲಯ, ಮಂಡ್ಯ  
ಹೊರಾವರಣ ಕೇಂದ್ರ  
ಬಿ. ಹೊಸೂರು ಕಾಲೋನಿ, ಮಂಡ್ಯ

ಶಂಕರನಾರಾಯಣ ಆರ್. ಕಾಶಿವಾಸಿ

**ವಾ**ರದ ಹಿಂದಷ್ಟೇ ಕೊಂಡಿದ್ದ 'ನೋ ಗ್ಯಾರಂಟಿ' ಎಮರ್ಜೆನ್ಸಿ ಲ್ಯಾಂಪ್ ಕೈಕೊಟ್ಟಿತ್ತು. ರಿಪೇರಿ ಮಾಡಿಸಲಿಕ್ಕೆ ಬ್ಯಾಗಿನೊಳಗೆ ಹಾಕಿಕೊಂಡು ಸಿಟಿಗೆ ಹೋದೆ. ಅಂಗಡಿಯವನು "ಲ್ಯಾಂಪ್ ಮಾರಾಟ ಮಾಡೋದಷ್ಟೇ ನಮ್ ಕೆಲ್ಸ. ರಿಪೇರಿಗೆ ಪಕ್ಕದ ಬೀದಿ 'ಶಿವಾ ಎಲೆಕ್ಟ್ರಿಕಲ್ಸ್'ಗೆ ಹೋಗಿ ಅಂದ. 'ಶಿವಾ ಎಲೆಕ್ಟ್ರಿಕಲ್ಸ್'ನಲ್ಲಿ ರಿಪೇರಿ ಮಾಡುವವ ಇರಲಿಲ್ಲ. ಬರುವುದು ಅರ್ಧ ಗಂಟೆಯಾಗುತ್ತೆ ಅಂತ ಬೇರೊಬ್ಬ ಹೇಳಿದ. ಅರ್ಧ ಗಂಟೆ ವೇಸ್ಟ್ ಮಾಡುವುದು ಯಾಕೆ ಅಂತ ತರಕಾರಿ ಪೇಟೆಗೆ ಹೋದೆ. ಬೀನ್ಸ್, ಕ್ಯಾರೆಟ್, ದೊಣ್ಣೆಮೆಣಸು, ಬೀಟ್‌ರೂಟ್, ಈರುಳ್ಳಿ, ನಿಂಬೆಹಣ್ಣು, ಶುಂಠಿ ಎಲ್ಲಾ ಒಂದೊಂದಾಗಿ ಬ್ಯಾಗಿಗೆ ತುಂಬಿಸಿಕೊಂಡು ಪೇಟೆಯಿಂದ ಹೊರಬಿದ್ದೆ.

ಎಲೆಕ್ಟ್ರಿಕಲ್ ಅಂಗಡಿಯೊಳಗೆ ರಿಪೇರಿ ಮಾಡುವವ ಆಗಲೇ ಧೂಳು ಹಿಡಿದ ಟಿವಿಯೊಂದರ ಆಪರೇಷನ್ನಿನಲ್ಲಿ ತೊಡಗಿದ್ದ. ಅಂಗಡಿ ಮೆಟ್ಟಿಲಲ್ಲಿ ನಿಂತ ಮೂರ್ನಾಲ್ಕು ಜನ ಆಪರೇಷನ್ನನ್ನು ಕುತೂಹಲದಿಂದ ನೋಡುತ್ತಿದ್ದರು.

ನಾನು "ಎಮರ್ಜೆನ್ಸಿ ಲ್ಯಾಂಪ್ ರಿಪೇರಿ ಮಾಡ್ತೀರಾ ?" ಕೇಳಿದೆ.

ರಿಪೇರಿ ಮಾಡುವವನನ್ನು ಮೊದಲುಗೊಂಡು ಎಲ್ಲರೂ ಒಮ್ಮೆಲೇ ನನ್ನ ಕಡೆ ತಿರುಗಿದರು.

ಅವನು "ತಂದಿದೀರಾ ?" ಕೇಳಿದ.

ಲ್ಯಾಂಪ್ ಹೊರತೆಗೆಯಲು ಹೋದಾಗಲೇ ನೆನಪಾದದ್ದು ಅದು ತರಕಾರಿಗಳ ಅಡಿಯಲ್ಲಿ ಇದೆ ಎಂದು. ಬ್ಯಾಗು ತುಂಬಿ ತುಳುಕುತ್ತಿತ್ತು. ಒಂದು ತರಕಾರಿಯೂ ಕೆಳಗೆ ಬೀಳದಂತೆ ಜೋಪಾನ ಮಾಡಿ ಪ್ರಯಾಸದಿಂದ ಲ್ಯಾಂಪ್ ಹೊರತೆಗೆದು ರಿಪೇರಿಯವನ ಮುಂದಿಟ್ಟೆ. ಬ್ಯಾಗಿನ ಜಿಪ್ ಹಾಕುವಾಗ ಅದು ಹೇಗೋ ಬೀನ್ಸೊಂದು ತಪ್ಪಿ ಕೆಳಗೆ ಬಿತ್ತು. ಕಡೆಗಣ್ಣಿನಿಂದ ಸುತ್ತ ಗಮನಿಸಿದೆ. ಇನ್ನೂ ಎಲ್ಲರೂ ನನ್ನನ್ನೇ ನೋಡುತ್ತಿದ್ದರು. ಕೆಳಗೆ ಬಿದ್ದ ಆ ಒಂದೇ ಒಂದು ಬೀನ್ಸನ್ನು ತೆಗೆದುಕೊಳ್ಳಬೇಕೋ ಬೇಡವೋ ಎಂಬ ದ್ವಂದ್ವ ನನ್ನನ್ನು ಒಂದೆರಡು ಕ್ಷಣ ಹಿಗ್ಗಾಮುಗ್ಗ ಹಿಡಿದು ಅಲ್ಲಾಡಿಸಿಬಿಟ್ಟಿತು. ಒಂದು ದನಿ "ಪುಕ್ಸಟ್ಟೆ ಸಿಕ್ಕಿದ್ದಲ್ಲ. ಬೆವರು ಸುರಿಸಿ ಸಂಪಾದಿಸಿದ್ ದುಡ್ಡಲ್ಲಿ ಕೊಂಡಿದ್ದು. ಎತ್ಕೋ ಬಿಡ್‌ಬೇಡ" ಅಂದರೆ, ಮತ್ತೊಂದು "ಒಂದೇ ಒಂದ್ ಬೀನ್ಸ್ ತಾನೇ. ಹೋಗ್ಲಿ ಬಿಡು. ಆ ಥರದ್ದು ಎಷ್ಟೋ ವೇಸ್ಟಾಗ್ತಿರುತ್ತೆ. ಅದ್ರಲ್ಲಿ ಇದೂ ಒಂದು. ಎಲ್ರೂ ನೋಡ್ತಿದಾರೆ. ಸುಮ್ನೆ ಯಾಕೆ ಅವ್ರ ಮುಂದೆ ಸಣ್ಣವನಾಗ್ತೀಯಾ ?" ಅನ್ನುತ್ತಿತ್ತು.

ಮೊದಲ ದನಿಯನ್ನು ತಿರಸ್ಕರಿಸಿ ರಿಪೇರಿ ಮಾಡುವವನ ಕಡೆ ಲ್ಯಾಂಪ್ ದೂಡಿದೆ. ಅದನ್ನು ಎತ್ತಿಕೊಂಡು ಆಚೀಚೆ ತಿರುಗಿಸಿ ನೋಡಿ ಸ್ಕ್ರೂ ಡ್ರೈವರ್ ಹಿಡಿದು ಒಂದೊಂದಾಗಿ ಸ್ಕ್ರೂ ಬಿಚ್ಚಿದ. ಲ್ಯಾಂಪಿನ ಬುಡದ ಮುಚ್ಚಳ ತೆಗೆದು ಕಿತ್ತಳೆ ತೊಳೆಗಳನ್ನು ಬಿಡಿಸುವ ಹಾಗೆ ಒಳಗಿರುವ ಪಾರ್ಟ್‌ಗಳನ್ನು ಹೊರತೆಗೆದ. ಮೀಟರ್‌ನಿಂದ ಪರೀಕ್ಷಿಸಿ "ಮಾಡ್ಕೊಡಣ ಬನ್ನಿ ಸಾರ್" ಅಂದ.

"ಏನಾಗಿದೆ ?" ಕೇಳಿದೆ.

"ನಿಮ್ಗ್ಯಾಕೆ ಸರ್ ಅದೆಲ್ಲಾ ? ಲ್ಯಾಂಪ್ ವರ್ಕಾಗ್ಬೇಕು ಅಷ್ಟೇತಾನೆ ? ಬನ್ನಿ ಮಾಡ್ಕೊಡಣ" ಎಂದು ಸಿಡುಕಿದ.

"ಎಷ್ಟಾಗುತ್ತೆ ?"

"ನೂರರವತ್ರೂಪಾಯಿ. ಒನ್‌ಸಿಕ್ಸ್‌ಟಿ."

"ಲ್ಯಾಂಪನ್ನೇ ಇನ್ನೂರೈವತ್ ರೂಪಾಯಿ ಕೊಟ್ಟು ತಗೊಂಡಿದೀನಿ. ಬರೀ ರಿಪೇರಿಗೆ ನೂರರವತ್ತು ಹೇಳ್ತೀರಲ್ಲ."

"ನಾವು ಸುಳ್ಳುಗಿಳ್ಳು ಏಳಲ್ಲ ಸರ್. ರಿಪೇರಿ ಮಾಡ್ಕೊಟ್ರೆ ಒಂದ್ ವರ್ಸದ್ ತನ್ಕ ಮಾತಾಡಂಗಿಲ್ಲ. ಯಾವ್ ಪ್ರಾಬ್ಲಮ್ಮೂ ಬರಾಕಿಲ್ಲ. ಮಸ್ತಾಗ್ ಓಡ್ತದೆ."

"ಅದೇನೇ ಇರ್ಲಿ. ಬರೀ ರಿಪೇರಿಗೆ ಅಷ್ಟು ಜಾಸ್ತಿ."

"ಸಾರ್... ಒಂದ್ ಮಾತ್ ಏಳ್ತೀನಿ. ಈ ಚೈನಾ ಮಾಲ್‌ನೆಲ್ಲಾ ಯಾರೂ ರಿಪೇರಿ ಮಾಡಾಕಿಲ್ಲ. ಏನೋ ನೀವ್ ಕೇಳ್ಕ ಬಂದ್ರಲ್ಲ ಅಂತ ನಾನೂ ಒಪ್ಕಂಡೆ ಅಷ್ಟೆ. ಇರೋ ವಿಚಾರ ಏಳ್ತೀನಿ. ಬ್ಯಾಟ್ರಿ ರೀಪ್ಲೇಸ್ ಮಾಡ್ಬೇಕಾಯ್ತದೆ. ಬ್ಯಾಟ್ರಿಗೆ ನೂರತ್ರೂಪಾಯಿ. ನಮ್ ಸರ್ವಿಸ್‌ಗೆ ಐವತ್ತು. ಅದೂ ಕೊಡಕಾಗಕಿಲ್ಲಾಂದ್ರೆ ಮಾಡಕ್ಕಾಗಕಿಲ್ಲ. ಎತ್ಕಂಡ್ ಓಗ್ ಶೋಕೇಸಲ್ಲಿ ಮಡಿಕಳಿ..."



ಪರವಾಗಿಲ್ವೆ. ಎಷ್ಟ್ ನೇರ ಮಾತಾಡ್ತಾನೆ. ಮೋಸಗೀಸ ಇರ್ಲಿಕ್ಕಿಲ್ಲ ಅನಿಸಿ "ಸರಿ. ಯಾವಾಗ ಸಿಗುತ್ತೆ ?" ಕೇಳಿದೆ.

"ಇನ್ನೊಂದ್ ಗಂಟೆ ಬಿಟ್ಕ ಬತ್ತೀರಾ ಇಲ್ಲಾ ನಾಳೆ ಬಂದ್ ತಕಳಿ. ಅಡ್ವಾನ್ಸ್ ಕೊಟ್ಟೋಗಿ."

"ನಾಳೆ ಮತ್ತೆ ಅಷ್ಟ್ ದೂರದಿಂದ ಬರಕ್ಕಾಗಲ್ಲ. ಒಂದ್ ಗಂಟೆ ಬಿಟ್ಕೊಂಡ್ ಬರ್ತೀನಿ. ರಿಪೇರಿ ಮಾಡಿಟ್ಟಿರಿ" ಎಂದು ಐವತ್ತು ರೂಪಾಯಿ ಅಡ್ವಾನ್ಸ್ ಕೊಟ್ಟು ಮೆಟ್ಟಿಲು ಇಳಿದೆ.

ಮತ್ತೆ ಬೀನ್ಸ್‌ನ ಕಡೆ ಗಮನ ಹೋಯಿತು. ಹೊಟ್ಟೆ ಚುರುಕ್ಕಂತು. ತಲೆಯೊಳಗೆ ಒಂದು ದನಿ "ನನ್ ಮಾತು ಕೇಳ್ದೆ ನೀನ್ ತಪ್ ಮಾಡ್ದೆ. ಥೆ... ತಪ್ ಮಾಡ್ದೆ, ನೀನು ಒಳ್ಳೆಯವನಲ್ಲ. ನೀನು ಸರಿಯಿಲ್ಲ." ಅಂತ ಪದೇ ಪದೇ ಚುಚ್ಚುತ್ತಿತ್ತು.

ರಸ್ತೆ ದಾಟಿ ಗಾಡಿ ಲಾಕ್ ಓಪನ್ ಮಾಡುವಾಗಲೂ ಆ ಬೀನ್ಸ್ ಕಡೆಗೇ ಗಮನ ಎಳೆಯುತ್ತಿತ್ತು. ಎಲೆಕ್ಟ್ರಿಕ್-ಎಲೆಕ್ಟ್ರಾನಿಕ್ ನಿರ್ಜೀವ ವಸ್ತುಗಳ ಈ ಪೇಟೆ ಮಧ್ಯದಲ್ಲಿ ಅನಾಥವಾಗಿ ಬಿದ್ದಿರುವ ಆ ಬೀನ್ಸ್‌ನ ದುರವಸ್ಥೆ ಯಾಕೋ ಮನಸ್ಸಿಗೆ ಬಹಳ ಕಿರಿಕಿರಿ ಮಾಡುತ್ತಿತ್ತು. ಅವುಗಳೆದುರು ಬೀನ್ಸಿಗೆ ಅವಮಾನ ಮಾಡುತ್ತಿದ್ದೇನೆ ಅನಿಸಿತು. ಮಾವನ ಮಗ ಕೇಶವ ಹಿತ್ತಲಲ್ಲಿ ಬೀನ್ಸಿನ ಗಿಡಗಳಿಗೆ ಆರೈಕೆ ಮಾಡುತ್ತಿದ್ದುದು ಕಣ್ಣಮುಂದೆ ಬಂತು.

ಮರುಕ್ಷಣ ಆ ಬೀನ್ಸ್ ಎದ್ದು ಬಂದು "ಲೋ ನೀಚ. ಎಲ್ಲೋ ಇರ್ಬೇಕಾಗಿದ್ ನನ್ನುನ್ನ ತಂದು ಈ ಹಾಳು ಜಾಗದಲ್ಲಿ ಬಿಸಾಕಿ ಅವಮಾನ ಮಾಡ್ತಿದೀಯಾ ? ಸ್ವಲ್ಪನಾದ್ರೂ ಮನುಷ್ಯತ್ವ ಇದ್ಯಾ ನಿಂಗೆ ? ನನ್ನುನ್ನ ಈ ಸ್ಥಿತಿಗೆ ತರೋಕೆ ನಿಂಗೇನೋ ಅಧಿಕಾರ ಇದೆ ? ಕೆಜಿಗೆ ಹದಿನೈದ್ ರೂಪಾಯಿ. ಚೀಪಾಗಿ ಸಿಕ್ತು ಅಂತ ಕೊಂಡ್ಕೊಂಡ್ಯಲ್ಲ. ನನ್ ನಿಜ್ವಾದ ಮೌಲ್ಯ ಎಷ್ಟು ಅಂತ ನಿಂಗೇನಾದ್ರೂ ಗೊತ್ತಾ ? ಹಗಲು ರಾತ್ರಿ ಕಷ್ಟಪಟ್ಟು ದುಡ್ದು ಬೆವರು ಸುರ್ಸಿ ಮಗುವಿನ ಹಾಗೆ ಆರೈಕೆ ಮಾಡಿ ನಮ್ಮುನ್ನ ಬೆಳೆಸಿದ್ನಲ್ಲ ಆ ಸೂರಳ್ಳಿ ದುಗ್ಗ, ಅವನೊಬ್ಬನಿಗೇ ಗೊತ್ತಿರೋದು ನನ್ನ ನಿಜವಾದ ಮೌಲ್ಯ. ನನ್ನ ಮೇಲೆ ಅಧಿಕಾರ ಇರೋದೂ ಅವನೊಬ್ಬನಿಗೇ. ಅವನ ಶ್ರಮದ ಫಲ ನಾವು. ಆ ಶ್ರಮಕ್ಕೆ ಬೆಲೆ ಕಟ್ತೀರಲ್ಲಾ ಒಂದ್ ದಿವಸಾನಾದ್ರೂ ಅವನ ಕಷ್ಟ ಏನೂ ಅಂತ ತಿಳ್ಕೊಳಕ್ಕೆ ಪ್ರಯತ್ನ ಮಾಡಿದೀರಾ ? ಕಡೇ ಪಕ್ಷ ಊಟ ಮಾಡೋವಾಗ್ಲಾದ್ರೂ ಅವ್ನನ್ನ ಒಂದ್ಸಲ ನೆನಪು ಮಾಡ್ಕೋತೀರಾ ? ನೆರೆ, ಬರ, ಕೀಟಬಾಧೆ, ಸಾಲ, ಮಧ್ಯವರ್ತಿ ಕಾಟ, ಒಂದಾ ಎರಡಾ ? ಇಷ್ಟೆಲ್ಲ ಕಷ್ಟಗಳ ಮಧ್ಯ ನಮ್ಮುನ್ನ ಜೋಪಾನವಾಗಿ ಬೆಳೆಸಿ ತಂದು ಪೇಟೆಗೆ ಹಾಕುದ್ರೆ. ನೀನು ನಿನ್ ಪ್ರೆಸ್ಟೀಜ್‌ಗೆ ಹೆದುರ್ಕೊಂಡು ನನ್ನುನ್ನ ಈ ಗಟಾರದಲ್ಲಿ ಬಿಸಾಕಿ ಹೋಗ್ತಿದೀಯಲ್ಲ ಕಷ್ಟ ಅಂದ್ರೆ ಏನೂಂತಾದ್ರೂ ಗೊತ್ತಿದ್ಯಾ ನಿಂಗೆ ?..." ಎಂದು ಛೀಮಾರಿ ಹಾಕಿದ ಹಾಗಾಯಿತು.

ಹಿಂದಿನಿಂದ ಕಾರೊಂದು "ಭ್ಯಾಂ ಭ್ಯಾಂ" ಅಂತ ಭಯಂಕರವಾಗಿ ಹಾರ್ನ್ ಮಾಡಿದಾಗಲೇ ವಾಸ್ತವಕ್ಕೆ




ಬಾಯಾರಿದ ಜನ ನೀರು ಕೇಳ್ತಿದ್ರೆ ನಾವಿಲ್ಲಿ ಟಿಕೆಟ್ ಕೇಳ್ತಿದ್ದೇವೆ! ಹಸಿವು ಒಬ್ಬೊಬ್ಬರದೂ ಒಂದೊಂದು ತರಹ!!

ಬಂದದ್ದು. ಕಾರಿನವನು ತಲೆ ಆಚೆ ಹಾಕಿ ನನ್ನ ಕಡೆ ಕೈಯನ್ನು ತಿವಿಯುತ್ತ ಹೀನಾಮಾನವಾಗಿ ಬಯ್ಯುತ್ತಿದ್ದ. ಮತ್ತೆ ತಲೆಯೊಳಗೆ ದನಿಯೊಂದು "ಬೇಗ ಬೇಗ ಬೇಗ. ಗಾಡಿ ತೆಗೀ. ನಿಂದ್ ಎಡವಟ್ಟು ಯಾವಾಗ್ಲೂ ಇದ್ದಿದ್ದೇ. ಎಲ್ರೂ ನಿನ್ನೇ ನೋಡ್ತಿದಾರೆ. ನಿನ್ ಇಮೇಜ್ ಉಳುಸ್ಕೋ... ಬೇಗ ಬೇಗ" ಅಂತ ಬೊಬ್ಬೆ ಹಾಕತೊಡಗಿತು. ಗಡಿಬಿಡಿಯಲ್ಲಿ ಬೈಕ್ ಸ್ಟಾರ್ಟ್ ಮಾಡಿ ಸಿಕ್ಕ ಸಿಕ್ಕ ಗಲ್ಲಿಯಲ್ಲಿ ನುಗ್ಗಿದೆ.

ಕೆಲವು ನಿಮಿಷದ ನಂತರ ಪೆಟ್ರೋಲ್ ಸುಮ್ಮನೆ ವೇಸ್ಟ್ ಆಗ್ತಿದೆ ಅಂತ ಅರಿವಾಯ್ತು. ಯಾವುದೋ ರಸ್ತೆ ಬದಿಯಲ್ಲಿ ಕೆಲವು ಬೈಕ್‌ಗಳು ನಿಂತಿದ್ದವು. ಆ ಸಾಲಿನ ಮಧ್ಯ ನನ್ನ ಬೈಕ್ ತೂರಿಸಿದೆ. ಮಣಭಾರದ ಬ್ಯಾಗ್ ಹೊತ್ತು ಪೇಟೆ ಬೀದಿಯಲ್ಲಿ ನಡೆಯುತ್ತ ಹೋದೆ. "ಸ್ವಲ್ಪ ಜಾಗ್ರತೆ ತಪ್ಪಿದ್ರಿಂದ ಎಷ್ಟೆಲ್ಲ ಗಡಿಬಿಡಿ-ಅವಾಂತರ. ಇನ್ನು ಮುಂದೆ ಅರಿವು ಹೆಚ್ಚಿಸಿಕೊಳ್ಳೋದ್ರ ಕಡೆ ಗಮನ ಕೊಡ್ಬೇಕು. ಐ ಮಸ್ಟ್ ಇಂಕ್ರೀಸ್ ಮೈ ಅವೇರ್‌ನೆಸ್" ಅಂದುಕೊಳ್ಳುತ್ತಿರುವಾಗಲೇ ಏನೋ ಮರೆತೆ ಅನ್ನಿಸತೊಡಗಿತು. ಏನು ಅಂತ ತಿಳಿಯಲಿಲ್ಲ. ಬೇರೆ ಕೆಲಸವಿಲ್ಲದೆ ಕೈಯಿ ಆಟೋಮ್ಯಾಟಿಕ್ಕಾಗಿ ಪ್ಯಾಂಟಿನ ಜೇಬಿಗೆ ಹೋಯಿತು. ಮೊಬೈಲ್ ತೆಗೆದು ನೋಡಿದೆ. ನಾಲ್ಕು ಮಿಸ್‌ಕಾಲ್, ಒಂದು ಮೆಸೇಜ್ ಬಂದಿತ್ತು. ಎಲ್ಲಾ ನನ್ನ ಹೆಂಡತಿ ಸೃಷ್ಟಿಯದ್ದು. "ಮರೀದೆ ಅರ್ಧ ಕೆಜಿ ಬೀನ್ಸ್ ತಗೊಂಡ್ ಬಾ" ಅಂತ ಮೆಸೇಜ್ ಇತ್ತು. ಬೀನ್ಸ್ ಹುಳು ಮತ್ತೆ ತಲೆಯೊಳಗೆ ಹೊಕ್ಕಿತು. ಮೊಬೈಲ್ ಜೇಬಿನೊಳಗೆ ಇಳಿಸುವಾಗ "ಗಾಡಿಗೆ ಲಾಕ್ ಮಾಡಿದ್ದೆನೋ ಇಲ್ವೋ" ಅನ್ನುವ ಅನುಮಾನ ಹುಟ್ಟಿತು. ಆಗಲೇ ಎರಡು ಮೂರು ರಸ್ತೆ ದಾಟಿ ಬಂದಾಗಿತ್ತು. ಗಾಬರಿಯಿಂದ ತಿರುಗಿ ಓಡಬೇಕೆನ್ನುವಷ್ಟರಲ್ಲಿ "ತಥ್ ಹೇಸಿಗೆ. ಇಷ್ಟ್ ದೊಡ್ಡವ್ನಾಗಿದ್ದಿ. ಒಳ್ಳೆ ಸಣ್‌ಮಕ್ಳ ಥರ ರಸ್ತೇಲಿ ಓಡ್ಕೊಂಡ್ ಹೋದ್ರೆ ಏನ್ ಚೆನ್ನಾಗಿರುತ್ತೆ. ನೋಡ್ದವ್ರು ಏನಂದ್ಕೋತಾರೆ. ಸ್ವಲ್ಪನಾದ್ರೂ ಮ್ಯಾನರ್ಸ್ ಬೇಡ್ವಾ ?" ಅಂತ ದನಿಯೊಂದು ತಡೆಯಿತು. ಆ ದನಿಗೆ ವಿಧೇಯನಾಗಿ ಸ್ವಲ್ಪದೂರ ವೇಗವಾಗಿ ನಡೆದೆ. ಗಾಡಿ ಎಷ್ಟು ಮುಖ್ಯ ಅನ್ನುವುದು ಮತ್ತೆ ಅರಿವಿಗೆ ಬಂದು "ಮ್ಯಾನರ್ಸ್ ಮನೆ ಹಾಳಾಯ್ತು. ಗಾಡಿ ಉಳಿದರೆ ಸಾಕು" ಅಂತ ಅಡ್ಡಾದಿಡ್ಡಿ ಓಡಿದೆ. ಗಾಡಿ ಅಲ್ಲೇ ಇತ್ತು. ಜೀವ ಬಂದ ಹಾಗಾಯ್ತು. ಹ್ಯಾಂಡಲ್ ತಿರುಗಿಸಿ ಲಾಕ್ ಪರೀಕ್ಷಿಸಿದೆ. ಗಾಡಿ ಲಾಕ್ ಆಗಿತ್ತು.

"ಸ್ವಲ್ಪ ಜಾಗರೂಕತೆಯಿಂದ ಇರ್ಬಾರ್ದಾ ? ನೋಡು. ಅಷ್ಟು ದೂರ ನಡ್ಕೊಂಡ್ ಹೋಗಿದ್ದು ವೇಸ್ಟಾಯ್ತು. ನೀನೊಂಥರಾ ವಿಚಿತ್ರ. ಸ್ವಲ್ಪನೂ ಸರಿಯಿಲ್ಲ" ಅಂತ ಒಂದು ದನಿ ಮೂದಲಿಸಿತು. ಇನ್ನೂ ಎರಡು ಸಲ ಹ್ಯಾಂಡಲ್ ತಿರುಗಿಸಿ ಲಾಕ್ ಟೆಸ್ಟ್ ಮಾಡಿ ಹೊರಟೆ. ರಿಪೇರಿ ಅಂಗಡಿ ಹತ್ತಿರ ಬಂದಾಗ ಒಂದು ವಿಚಾರ ಹೊಳೆಯಿತು. ಅದೇನೆಂದರೆ ಒಂದು ವೇಳೆ ಅಂಗಡಿ ಹತ್ತಿರ ಯಾರೂ ಇಲ್ಲದೇ ಇದ್ರೆ ಆ ಬೀನ್ಸ್ ಎತ್ತಿಕೊಂಡುಬಿಡುವುದು ಅಂತ. ಅಂಗಡಿ ಮುಂದೆ ಗಿರಾಕಿಯೊಬ್ಬ ನಿಂತಿದ್ದ. ಅವನು ಹೋಗುವ ತನಕ ಕಾದು ಅಂಗಡಿ ಹತ್ತಿರ ಹೋಗಿ ನೋಡಿದೆ. ಬೀನ್ಸ್ ಅರ್ಧಕ್ಕೆ ಮುರಿದು ಒಂದು ಭಾಗ ಪೂರ್ತಿ ಅಪ್ಪಚ್ಚಿಯಾಗಿತ್ತು. ಮತ್ತೊಂದು ದನಿ "ನೋಡು ಏನಾಯ್ತೂಂತ. ಎಲ್ಲಾ ನಿನ್ನಿಂದ್ಲೇ ಆಗಿದ್ದು" ಅಂತ ಹೀಯಾಳಿಸಿತು. ಬಹಳ ಖೇದವಾಯ್ತು. ನಿಟ್ಟುಸಿರುಬಿಟ್ಟು ಒಂದೆರಡು ಕ್ಷಣ ಅಲ್ಲೇ ನಿಂತು ಮುಂದೆ ನಡೆದೆ. ಅಪ್ಪಚ್ಚಿಯಾದ ಬೀನ್ಸಿನ ಚಿತ್ರ ಮತ್ತೆ ಮತ್ತೆ ಕಣ್ಣಮುಂದೆ ಬಂತು. ಮರುಕ್ಷಣವೇ ಮನಸ್ಸು ಉತ್ತರಕನ್ನಡ ಜಿಲ್ಲೆಯ ತದಡಿ ಸಮುದ್ರತೀರಕ್ಕೆ ಹಾರಿತು.

ಈ ಸಲ ಕ್ರಿಸ್‌ಮಸ್ ಹೊತ್ತಿಗೆ ಎರಡು ದಿವಸ ರಜೆ ಹಾಕಿ ಗೋಕರ್ಣ, ತದಡಿ, ಬೇಲೆಕಾನ್ ತೋರಿಸಲು ಸೃಷ್ಟಿಯನ್ನು ಕರೆದುಕೊಂಡು ಹೋಗಿದ್ದೆ. ತದಡಿಯ ಮೀನಿನ ಫ್ಯಾಕ್ಟರಿ ಹತ್ತಿರ ಅಘನಾಶಿನಿಗೆ ಹೋಗಲು ತಾರಿಗೆ ಕಾಯುತ್ತ ನಿಂತಿದ್ದೆವು. ಸುತ್ತಮುತ್ತ ಚೆಲ್ಲಾಪಿಲ್ಲಿಯಾಗಿ, ಈ ಬೀನ್ಸಿನಂತೆಯೇ ಚಪ್ಪಂಚೂರಾಗಿ, ಅಪ್ಪಚ್ಚಿಯಾಗಿ, ಹೇಗೆಗೆಲ್ಲಾ ಸತ್ತು ಒಣಗಿ ಬಿದ್ದಿದ್ದ ಸಾವಿರಾರು ಮೀನುಗಳು. ಹತ್ತಾರು ಹದ್ದುಗಳು ಲೀಲಾಜಾಲವಾಗಿ ಹಾರಾಡುತ್ತ ಕಣ್ಣುಮುಚ್ಚಿ ಬಿಡುವುದರೊಳಗೆ ಸಮುದ್ರದಿಂದ ಮೀನುಗಳನ್ನು ಹೆಕ್ಕಿ ಆಕಾಶದಲ್ಲೇ ಅವುಗಳನ್ನು ಕಿತ್ತು ಕಿತ್ತು ತಿನ್ನುತ್ತಿದ್ದವು. ತಡಿಯ ತುಂಬ ಹೇಳ ಹೆಸರಿಲ್ಲದೆ ಸತ್ತು ಬಿದ್ದಿದ್ದ ಮೀನುಗಳನ್ನು ನೋಡುತ್ತ ಸೃಷ್ಟಿಗೆ ಹೇಳಿದ್ದೆ, "ಈ ಪ್ರಪಂಚದಲ್ಲಿ ಪ್ರತಿದಿನ ಎಷ್ಟೋ ಜೀವಿಗಳು ಹುಟ್ತಾವೆ. ಎಷ್ಟೋ ಜೀವಿಗಳು ಸಾಯ್ತಾವೆ. ಆದ್ರೆ ಈ ಜೀವನದಲ್ಲಿ ಪ್ರತಿಯೊಂದು ಜೀವಿಯ ಪಾತ್ರ ಏನು ಅನ್ನೋದು ಮಾತ್ರ ನಮ್ಗೆ ತಿಳಿಯೋದೇ ಇಲ್ಲ. ತಿಳ್ಕೊಳ್ಳೋದಕ್ಕೆ ಸಾಧ್ಯನೂ ಇಲ್ಲ. ನಾವು ಮನುಷ್ಯರು ಮಾತ್ರ ನಮ್ಮ ಹೆಸರು, ಸಾಧನೆ, ಅಧಿಕಾರ ಎಲ್ಲಾದ್ರೂ ಒಂದ್ಕಡೆ ರಿಜಿಸ್ಟರ್ ಆಗ್ಲೇಬೇಕೂಂತ ಎಷ್ಟೆಲ್ಲಾ ಒದ್ದಾಡ್ತೀವಿ. ಆದ್ರೆ ಪ್ರತಿದಿನ ಈ ಮೀನುಗಳ ಹಾಗೆ

ಹೇಳಹೆಸರಿಲ್ದೇ ಬಂದು ಹೋಗೋ ಅಸಂಖ್ಯ ಜೀವಿಗಳ ಬಯೋಡೇಟಾ ಎಲ್ಲೂ ರಿಜಿಸ್ಟರ್ ಆಗೋದೇ ಇಲ್ವಲ್ಲಾ ಸೃಷ್ಟೀ... ಹೋಗ್ಲಿ... ಡಿಗ್ನಿಟಿಯಿಂದ ಸಾಯೋ ಅವಕಾಶಾನೂ ಅವುಗಳಿಗೆ ಇಲ್ವಲ್ಲ... ಮನುಷ್ಯ ಸತ್ರೆ ಹೂವಿನ ಅಲಂಕಾರ, ಮೆರವಣಿಗೆ, ಮಡಿ–ಮಂತ್ರ ಅಂತ ಇನ್ನಿಲ್ಲದ ಗೌರವಗಳ ಜೊತೆ ಅಂತ್ಯ ಸಂಸ್ಕಾರ ಮಾಡ್ತೀವಿ. ಸಮಾಧಿ ಕಟ್ತೀವಿ. ಅದೂ ಸಾಲದೂಂತ ಪ್ರತಿವರ್ಷ ತಿಥಿನೂ ಆಚರಿಸ್ತೀವಿ. ಅಷ್ಟೇ ಯಾಕೆ ? ಎಲ್ಲೋ 'ಅಪರಿಚಿತ ಶವ ಪತ್ತೆ' ಅಂತ ಸುದ್ದಿ ಬಂದ್ರೆ ಕುತೂಹಲದಿಂದ ಓದ್ತೀವಿ. ಆದ್ರೆ ಇಲ್ಲಿ ಈ ಮೀನುಗಳ ಕತೆ ನೋಡು. ಬದುಕಿದೀಯಾ ? ಸತ್ಯಾ ? ಅಂತ ವಿಚಾರಿಸೋರಿಲ್ಲ. ಇದನ್ನೆಲ್ಲಾ ನೋಡ್ತಿದ್ರೆ ಡಿಗ್ನಿಟಿ, ಫೇಮ್, ಪ್ರೆಸ್ಟೀಜ್, ಈಗೋ, ಇಂಟಲೆಕ್ಟ್ ಇವೆಲ್ಲಾ ಬರೀ ಭ್ರಮೆ ಅಂತ ಅನಿಸಿಬಿಡುತ್ತೆ" ಅಂತ ಹೇಳಿದ್ದೆ.

ಸೃಷ್ಟಿ ಕೆಲವು ಕ್ಷಣ ನನ್ನ ಕಣ್ಣುಗಳನ್ನೇ ನೋಡಿ "ನಾನು ನೀನು ಒಬ್ಬರನ್ನೊಬ್ರು ಇಷ್ಟಪಟ್ಟಿದ್ದು, ಮದುವೆಯಾಗಿದ್ದು, ಬೇಲೆಕಾನ್ ಬೀಚಲ್ಲಿ ಸಾಲು ಸಾಲು ಅಲೆಗಳನ್ನ ನೋಡ್ತಾ ಕಾಲ ಕಳೆದಿದ್ದು, ಈ ಅಘನಾಶಿನಿ ಅಳಿವೆಯನ್ನ ದಾಟೋದಕ್ಕೆ ತದಡಿ ತಡಿಯಲ್ಲಿ ನಿಂತು ತಾರಿಗೆ ಕಾದಿದ್ದು, ಹಾಗೇ ನೀನು ಬರೆದ ಕಾಗದಗಳು, ಕತೆ–ಕವನ–ಲೇಖನಗಳು, ತೆಗೆದ ಫೋಟೋಗಳು, ನಿನ್ನ ಪಿಹೆಚ್‌ಡಿ ಥೀಸಿಸ್ಸು, ಡಾಕ್ಟರೇಟು... ರಿಜಿಸ್ಟರ್ ಆಗಿದ್ದೂ ಕೂಡಾ ಯಾವತ್ತೋ ಒಂದು ದಿನ ಹೇಳಹೆಸರಿಲ್ಲದ ಹಾಗೆ ಇಲ್ಲವಾಗಿ ಹೋಗುತ್ತೆ. ಅಲ್ವಾ ಜಾನೂ ?... ಹಾಗಾದ್ರೆ ಇವೂ ಎಲ್ಲಾ ಭ್ರಮೇನೇನಾ ?" ಅಂತ ಮುಗ್ಧವಾಗಿ ಕೇಳಿದ್ದಳು.

ಅವಳು ಕತೆ–ಕವನ ಅಂತ ಹೇಳಿದ್ದೇ ತಡ, ನಾನು ಕಾಲೇಜಿನ ಲೈಬ್ರರಿಯಲ್ಲಿ ಒಂದು ದಿನ ಪುಸ್ತಕಗಳನ್ನ ನೋಡ್ತಾ "ಈ ಪುಟ್ಟ ಲೈಬ್ರರೀಲೇ ಸಾವಿರಾರು ಲೇಖಕರು ಬರೆದಿರೋ ಸಾವಿರಾರು ಪುಸ್ತಕಗಳಿವೆ. ಇನ್ನು ಈ ಜಗತ್ತಿನಲ್ಲಿ ಇಲ್ಲೀವರೆಗೆ ಅದೆಷ್ಟು ಲೇಖಕರು ಅದಿನ್ನೆಷ್ಟು ಪುಸ್ತಕಗಳನ್ನ ಬರೆದಿರಬಹುದು. ನಾಳೆ ನಾನೂ ಒಂದು ಕಥಾಸಂಕಲನ ಪ್ರಕಟಿಸಿದರೆ ಅದು ಮಹಾನ್ ಸಾಗರದಲ್ಲಿ ಹುಟ್ಟಿದ ಒಂದು ಪುಟ್ಟ ಮೀನಿನ ಹಾಗಾಗಬಹುದು. ಈ ಲೈಬ್ರರೀಲಿ ಇಲ್ಲೀವರೆಗೆ ಯಾರೊಬ್ಬರೂ ಒಂದು ಸಲವೂ ತೆರೆದು ಪುಟ ತಿರುಗಿಸಿರದ ಎಷ್ಟೋ ಪುಸ್ತಕಗಳಿವೆ. ಅಂಥ ಪುಸ್ತಕಗಳಲ್ಲಿ ನನ್ನ ಪುಸ್ತಕವೂ ಒಂದಾಗಿಬಿಡಬಹುದು" ಅಂತ ಯೋಚಿಸಿದ್ದು ನೆನಪಾಗಿತ್ತು.

ತದಡಿಯಿಂದ ಮನಸ್ಸು ವಾಪಸ್ಸಾಗುವ ವೇಳೆಗೆ ನಾನು ಅದು ಯಾವ ಮಾಯದಲ್ಲೋ ಬಂದು ಜೆಬಿ ರೋಡಿನ ಝೀಬ್ರಾ ಕ್ರಾಸಿಂಗ್‌ನಲ್ಲಿ ಹಸಿರು ಸಿಗ್ನಲ್‌ಗಾಗಿ ಕಾಯುತ್ತ ಜನರ ಮಧ್ಯದಲ್ಲಿ ನಿಂತಿದ್ದೆ ! ನಾನು ಅಲ್ಲಿಗೆ ಯಾಕೆ ಬಂದದ್ದು ಅನ್ನುವುದು ಎಷ್ಟು ಯೋಚಿಸಿದರೂ ಬಗೆಹರಿಯದೆ ವಾಪಸ್ ಹೊರಟೆ. ಬಹಳ ಆಯಾಸವಾಗಿತ್ತು. ಒಂದು ಲೋಟ ಟೀ ಕುಡಿಯುವ ಮನಸ್ಸಾಯಿತು. ಹತ್ತಿರದ ಒಂದು 'ಸಸ್ಯಾಹಾರಿ ಉಪಾಹಾರ' ಮಂದಿರಕ್ಕೆ ಹೋಗಿ ಟೀ ಆರ್ಡರ್ ಮಾಡಿದೆ. ಟೀ ಖಾಲಿಯಾಗುವ ಹೊತ್ತಿಗೆ ಸರ್ವರ್ ಹತ್ತು ರೂಪಾಯಿ ಬಿಲ್ ತಂದಿಟ್ಟ. ಟಿಪ್ಸ್‌ಗಾಗಿ ಜೇಬು ತಡಕಿದೆ. ಮೂರು ರೂಪಾಯಿಯಿತ್ತು. ಕೌಂಟರ್ ಬಳಿ ನಿಂತು ಸರ್ವರ್ ನನ್ನನ್ನೇ ಸೂಕ್ಷ್ಮವಾಗಿ ಗಮನಿಸುತ್ತಿದ್ದ. ತಲೆಯೊಳಗೆ ಮತ್ತೆ ಎರಡು ದನಿಗಳು ಉದ್ಭವಿಸಿದವು.

"ಒಂದ್ರೂಪಾಯಿ ಯಾವ್ ಮೂಲೆಗೆ. ಎರಡ್ರೂಪಾಯಾದ್ರೂ ಇಡು."

"ಹ್ಞೂಂ... ಹತ್ರೂಪಾಯಿ ಟೀಗೆ ಎರಡ್ರೂಪಾಯಿ ಟಿಪ್ಸ್ ಬೇರೆ ಇಡ್ತಾರೆ."

"ಸರ್ವರ್ ಗಮನಿಸ್ತಿದಾನೆ. ಒಂದೇ ಒಂದ್ರೂಪಾಯಿ ಇಟ್ಟು ಯಾಕೆ ಜುಗ್ಗ ಆಗ್ತೀಯ ?"

"ಅವ್ನೇನು ಪುಗ್ಸಟ್ಟೆನಾ ಕೆಲ್ಸ ಮಾಡ್ತಾನೆ ? ಸಂಬ್ಳ ಸಿಗಲ್ವಾ ? ಟಿಪ್ಸ್ ಕೊಡ್ತಿರೋದೇ ಹೆಚ್ಚು. ಸಾಕು ಒಂದ್ರೂಪಾಯಿ."

"ಇನ್ನೊಂದ್ರೂಪಾಯಿ ಎಕ್ಸ್‌ಟ್ರಾ ಕೊಟ್ರೆ ನಿಂದೇನ್ ಮುಳುಗ್ಹೋಗುತ್ತೆ ? ಆ ಒಂದ್ರುಪಾಯಲ್ಲಿ ಅವ್ನೇನು ಅರಮನೆ ಕಟ್‌ಬಿಡಲ್ಲ. ಕೊಡು ಪರವಾಗಿಲ್ಲ. ಪಾಪ."

ಎರಡು ರೂಪಾಯಿ ಇಟ್ಟು ರಿಪೇರಿ ಅಂಗಡಿಗೆ ಹೊರಟೆ.

ಶಿವಾ ಎಲೆಕ್ಟ್ರಿಕಲ್ಸ್ ಮೆಟ್ಟಿಲ ಕೆಳಗೆ ಬೀನ್ಸ್ ಪೂರಾ ಅಪ್ಪಚ್ಚಿಯಾಗಿ ಗುರುತಿಸಲಾಗದ ರೀತಿಯಲ್ಲಿ ಮಣ್ಣಿನ ಜೊತೆ ಸೇರಿಹೋಗಿತ್ತು. ಮತ್ತೆ ಒಂದು ದನಿ "ನಿನ್ನಿಂದ್ಲೇ ಆಗಿದ್ದು. ನಿನ್ನಿಂದ್ಲೇ ಆಗಿದ್ದು" ಅಂತ ಕುಟುಕ ತೊಡಗಿತು. ರಿಪೇರಿಯವ ನನ್ನನ್ನು ನೋಡುತ್ತಿದ್ದಂತೆ ಲ್ಯಾಂಪ್ ಎತ್ತಿ ಮುಂದೆ ಇಟ್ಟ.

ಲ್ಯಾಂಪ್ ಆನ್ ಮಾಡಿದೆ. ಇನ್ನೂ ಮಂದವಾಗಿಯೇ ಉರಿಯುತ್ತಿತ್ತು.

"ಹಾಗೇ ಇದೆ. ಬ್ರೈಟಾಗೇ ಉರೀತಿಲ್ಲ" ಅಂತ ರಾಗ ತೆಗೆದೆ.

"ಸಾರ್. ಬ್ಯಾಟ್ರಿ ವೊಸಾದು ಆಕಿದೀನಿ... ಮಿನಿಮಮ್ ಮೂವತ್ತಾರ್ ಗಂಟೆ ಚಾರ್ಜ್ ಮಾಡ್ಬೇಕು. ಚಾರ್ಜ್ ಮಾಡಿ ಆಮೇಲೆ ಬಂದ್ ಏಳಿ ಎಂಗ್ ಉರೀತದೆ ಅಂತ."

"ಅಕಸ್ಮಾತ್ ಮುಂಚಿನ ಹಾಗೇ ಇದ್ರೆ.?

"ಅಂಗೆಲ್ಲ ಆಗಾಕಿಲ್ಲ ಅಣ್ಣಾ... ಇಪ್ಪತ್ ವರ್ಸದಿಂದ ನಾವು ಇದೇ ಕೆಲ್ಸ ಮಾಡ್ಕಂಡಿರದು. ಮೊದ್ಲು ಚಾರ್ಜ್ ಮಾಡು. ಆಮೇಕೆ ನೋಡು. ನೀನೇ ಬಂದ್ ಏಳ್ಬೇಕು ಅಂಗಿರ್ತದೆ."

ಮಾತಿನ ಧಾಟಿ ಬದಲಾಗಿದ್ದು ಗಮನಿಸಿ ತೆಪ್ಪಗೆ ಬಾಕಿ ಕೊಟ್ಟು "ಥ್ಯಾಂಕ್ಸ್" ಹೇಳಿ ಹೊರಟೆ.

ಗಾಡಿ ನಿಲ್ಲಿಸಿದ ಜಾಗಕ್ಕೆ ಬಂದಾಗ ಉಳಿದ ಗಾಡಿಗಳ ಜೊತೆ ನನ್ನದೂ ಮಾಯವಾಗಿತ್ತು ! ಎದೆ ಹಾರಿ ಬಾಯಿಗೆ ಬಂತು. ಗಾಬರಿಯಲ್ಲಿ ಆಚೆಈಚೆ ಹುಡುಕುತ್ತಿದ್ದಾಗ "ರೀ ಸಾಮೇಯ್, ಬನ್ನಿ ಇಲ್ಲಿ" ಅಂತ ಎದುರಿನ ಅಂಗಡಿಯವ ಕೂಗಿದ. ಹೋದೆ.

"ಏನೂ ? ಗಾಡಿ ಉಡುಕ್ತಿದೀರಾ ? ವೋಗಿ ಜಯನಗರ ಪೊಲೀಸ್ ಸ್ಟೇಷನ್‌ಗೆ. ನೀವು ಗಾಡಿ ನಿಲ್ಸುವಾಗ್ಲೇ ನಾನ್ ಕೂಗ್ದೆ. ನಾನು ಕೂಗ್ಕತಾನೇ ಇದ್ದೆ. ನೀವು ಗಾಡಿ ನಿಲ್ಸುಸ್‌ಬುಟ್ ಓಯ್ತಾನೇಯಿದ್ರಿ. ಮೇಯಿನ್ ರೋಡಲ್ಲಿ ಗಾಡಿ ನಿಲ್ಸುವಾಗ ಆಕಡೆ ಈಕಡೆ ಒಸಿ ನಿಗಾ ಮಡುಗ್ಬೇಕು. ಯಾಮಾರುದ್ರೆ ಇಂಗೇ ಆಗದು. ಮಾವನ್ ತಾವ್ ವೋಗಿ ಕಟ್ಟಿ ಇನ್ನೂರೋ ಮುನ್ನೋರೋ ಫೈನು" ಅಂದ.

"ಸದ್ಯ ಗಾಡಿ ಎಲ್ಲೋ ಸೇಫಾಗಿದೆ" ಅಂತ ಸ್ವಲ್ಪ ಸಮಾಧಾನವಾಗಿ ತಕ್ಷಣ ಆಟೋ ಹಿಡಿದು ಜಯನಗರ ಪೊಲೀಸ್ ಸ್ಟೇಷನ್ನಿಗೆ ಹೊರಟೆ. ಡ್ರೈವರ್ ಎಸ್. ಬಿ. ರಸ್ತೆಗೆ ಆಟೋ ತಿರುಗಿಸಿದ. ತಕ್ಷಣ ಮತ್ತೆ ಎರಡು ದನಿಗಳು ಎದ್ದವು.

"ಕೆಟಿ ರಸ್ತೆ ಬಿಟ್ಟು ಈ ಕಡೆಯಿಂದ ಯಾಕೆ ಹೋಗ್ತಿದೀ ಅಂತ ಕೇಳು. ಸುಮ್ನೆ ಮೀಟರ್ ಓಡ್ಸಿ ದುಡ್ ನುಂಗ್ತಾನೆ. ಕೇಳು. ಬೇಗ ಬೇಗ."

"ಬೇಡ ಸುಮ್ನಿರು. ಮೀಟರ್ ಹಾಕಕ್ಕೆ ಹೇಳ್ದಾಗ್ಲೇ ನಾಯಿ ಥರ ರೇಗ್ದ. ಮತ್ತೆ ಕೇಳಿ ಯಾಕೆ ಬೈಸ್ಕೊಂತೀಯ. ಮೊದ್ಲೇ ರೌಡಿ ಇದ್ದ ಹಾಗಿದಾನೆ."

"ತಥ್... ಅದೇನ್ ಹಾಗ್ ಹೆದುರ್ಕೊಂಡ್ ಸಾಯ್ತಿ... ದುಡ್ ಯಾರಪ್ಪಾ ಕೊಡ್ತಾನೆ ? ನೀನ್ ತಾನೇ ? ನೀನ್ ಹೇಳಿದ್ ಕಡೆ ಕರ್ಕೊಂಡ್ ಹೋಗೋದು ಅವ್ನ ಕೆಲ್ಸ. ಬೈತಾನೆ ಅಂತ ಹೆದುರ್ಕೊಂಡ್ ಕೂತ್ರೆ ಇಪ್ಪತ್ರೂಪಾಯಿ ಎಕ್ಸ್‌ಟ್ರಾ ಕಟ್‌ಬೇಕಾಗುತ್ತೆ ಅಷ್ಟೆ."

"ಇಷ್ಟ್ ದೂರ ಬಂದಾಯ್ತಲ್ಲ. ಇನ್ನೇನ್ ಕೇಳದು ? ಹೋದ್ರೆ ಹೋಯ್ತು ಇಪ್ಪತ್ರೂಪಾಯಿ."

"ನಿಂಗ್ಯಾರ್ ಹೇಳ್ತಾರೆ. ಈ ಜನ್ಮದಲ್ಲಿ ನೀನ್ ಉದ್ಧಾರ ಆಗಲ್ಲ ಬಿಡು."

ಆಟೋ ಸಿಗ್ನಲ್ ಬಳಿ ನಿಂತಾಗ "ಕೆಟಿ ರೋಡಲ್ಲಿ ಬಂದಿದ್ರೆ ಹತ್ರ ಆಗ್ತಿತ್ತಲ್ವಾ ?" ಧೈರ್ಯ ಮಾಡಿ ಕೇಳೇಬಿಟ್ಟೆ.

"ಕೆಟಿ ರೋಡ್ ಪೂರ್ತಿ ಅಗುದ್‌ಬುಟವ್ರೆ ಸರ್. ದಾಟಕ್ಕಾಗಲ್ಲ. ಅದುಕ್ಕೆ ಈ ಕಡೆ ಬಂದೆ" ಡ್ರೈವರ್ ಸಮಾಧಾನದಿಂದ ಉತ್ತರಿಸಿದ.

ಏನೋ ಒಂದು ರೀತಿ ನಿರಾಳವೆನಿಸಿತು.

## ಮುಹೂರ್ತ

ಗೈಯೆ ಸುಕಾರ್ಯವ
ತಾನೇ ಮುಹೂರ್ತ
ಶುಭವಾಗುವುದು

ಎಸಗೆ ದುಷ್ಕಾರ್ಯವ
ವ್ಯರ್ಥ ಶುಭಮುಹೂರ್ತ
ಕಾಯುವುದು

ಮುಹೂರ್ತವಲ್ಲ
ಕಾರ್ಯವೇ ಶುಭಾಶುಭಗಳ
ನಿರ್ಧರಿಸುವುದು

**ಎಸ್. ಅಶೋಕ**
ಯಲಹಂಕ, ಬೆಂಗಳೂರು – ೫೬೦ ೦೬೪

ಪೊಲೀಸ್ ಸ್ಟೇಷನ್ನಿನಲ್ಲಿ ಸುಮಾರು ಜನ ಅವರವರ ಗಾಡಿ ಮುಂದೆ ನಿಂತು ಚೌಕಾಸಿ ಮಾಡುತ್ತಿದ್ದರು. ನನ್ನ ಸರದಿ ಹತ್ತಿರ ಬರುತ್ತಿದ್ದಂತೆ ಮತ್ತೆ ಎರಡು ದನಿ.

"ಎಷ್ಟ್ ಕೊಡ್ಬೇಕು ಅಂತ ಹೇಗ್ ಕೇಳದು ? ಅವ್ನೇನಾದ್ರೂ ಜಾಸ್ತಿ ಕೇಳ್ಬುಟ್ರೆ ?"

"ಅದೆಲ್ಲ ಬೇಡ. ಎಷ್ಟ್ ಕೇಳ್ತಾನೋ ಅಷ್ಟ್ ಕೊಡು. ಕೊಟ್ಟಿದ್ದುಕ್ಕೆ ಬಿಲ್ ಈಸ್ಕೋ. ದುಡ್ ಹೋಗೋದಾದ್ರೆ ಸರ್ಕಾರಕ್ಕೇ ಹೋಗ್ಲಿ. ಅವ್ನಿಗೆ ಯಾಕ್ ಸುಮ್ನೆ ಲಾಭ ಮಾಡ್ಕೊಡ್ಬೇಕು ? ಲಂಚ ಕೊಟ್ರೆ ಅವನು ಮಾಡೋ ಅನ್ಯಾಯದಲ್ಲಿ ನೀನೂ ಪಾಲುದಾರ ಆಗ್ತೀಯ."

ಪೊಲೀಸ್ ಮುನ್ನೂರು ರೂಪಾಯಿ ಕೇಳಿದ. ನಾನು ಕೊಟ್ಟು ಬಿಲ್ ಪಡೆದೆ. ಗಾಡಿ ಹತ್ತಿ ಮನೆಗೆ ಹೊರಟೆ. ದಾರಿಯುದ್ದಕ್ಕೂ ಇನ್ನೊಂದು ದನಿ "ಥೆ ಅನ್ಯಾಯ, ಹೋಯ್ತು ಮುನ್ನೂರ್ರೂಪಾಯಿ. ಅದೇ ದುಡ್ಡಿದ್ದಿದ್ರೆ ಅಮ್ಮನ್ ಮಾತ್ರೆಗೋ ಇನ್ನೇನುಕ್ಕೋ ಆಗ್ತಿತ್ತು. ಥೆ ಥೆ" ಅಂತ ಹಲುಬುತ್ತಲೇ ಇತ್ತು.

ಮನೆಗೆ ಹೋದಾಗ ಎಲ್ಲರೂ ಒಂದು ಹೊಸಾ ಎಮರ್ಜೆನ್ಸಿ ಲ್ಯಾಂಪ್ ಸುತ್ತ ಜಮಾಯಿಸಿದ್ರು. ಅಪ್ಪ ಒಂದೂವರೆ ಸಾವಿರ ರೂಪಾಯಿ ಕೊಟ್ಟು 'ಟೂ ಯಿಯರ್ಸ್ ಗ್ಯಾರಂಟಿ' ಎಮರ್ಜೆನ್ಸಿ ಲ್ಯಾಂಪ್ ತಂದಿದ್ದರು. ಅದರ ಜೊತೆಗೆ ಒಂದು ರೀಚಾರ್ಜೆಬಲ್ ಟಾರ್ಚ್ ಫ್ರೀ ಬಂದಿತ್ತು. ಹೆಚ್ಚು ಮಾತಾಡದೆ ರೂಮಿಗೆ ಹೋಗಿ ನನ್ನ ಲ್ಯಾಂಪ್ ಚಾರ್ಜಿಗೆ ಹಾಕಿದೆ. ರಾತ್ರಿ ಮಲಗುವಾಗ ಬೀನ್ಸ್ ವಿಚಾರ ಸೃಷ್ಟಿಗೆ ಹೇಳಿದೆ. ಸೃಷ್ಟಿ "ಅಷ್ಟು ಸಣ್ ವಿಷ್ಯಕ್ಕೆಲ್ಲ ಯಾಕೆ ತಲೆ ಕೆಡುಸ್ಕೊಳ್ತೀಯಾ? ಹೋಗ್ಲಿಬಿಡು. ಪ್ರತಿದಿನ ಮದುವೆ ಮನೆಗಳಲ್ಲಿ ಆ ರೀತಿ ಎಷ್ಟೆಲ್ಲ ವೇಸ್ಟಾಗ್ತಿರುತ್ತೆ. ನಮ್ ಮದ್ವೇಲೇ ಎಷ್ಟೊಂದು ವೇಸ್ಟಾಯ್ತು. ಅದುಕ್ಕೆಲ್ಲ ಏನೂ ಮಾಡಕ್ಕಾಗಲ್ಲ" ಅಂತ ಸಮಾಧಾನ ಹೇಳಿದಳು. "ಒಂದೇ ಗ್ರಾಂ ಇದ್ರೂ ಚಿನ್ನ ಮುಖ್ಯ. ಪೆಟ್ರೋಲ್ ಒಂದೊಂದು ಹನಿಯೂ ಮುಖ್ಯ. ವೇಸ್ಟಾಗಬಾರ್ದು. ಸೆಕೆಂಡಿಗೆ ಒಂದು ಪೈಸೆ. ಒಂದೊಂದು ಪೈಸೆಯೂ ಮುಖ್ಯ. ಹೀಗಿರೋವಾಗ ಒಂದೇ ಒಂದು ಬೀನ್ಸ್ ಯಾಕೆ ಮುಖ್ಯ ಆಗಬಾರ್ದು ? ವೇಸ್ಟಾದ್ರೂ ಪರವಾಗಿಲ್ಲ – ಯಾಕೆ ? ದುಡ್ಡು ಮುಖ್ಯಾನೋ ಆಹಾರ ಮುಖ್ಯಾನೋ ? ಒಂದು ವೇಳೆ ಬೀನ್ಸ್ ಜಾಗದಲ್ಲಿ ನಾನೇ ಇದ್ದಿದ್ರೆ ಆಗ ಸೃಷ್ಟಿ ಏನು ಹೇಳ್ತಿದ್ಲು ?" ಅಂತ ಯೋಚಿಸುತ್ತಾ ನಿದ್ದೆಗೆ ಜಾರಿದೆ.

ಎರಡು ದಿವಸ ಸತತ ಚಾರ್ಜ್ ಮಾಡಿದ ಮೇಲೂ ಲ್ಯಾಂಪ್ ಮಿಣಿಮಿಣಿ ಅಂತಲೇ ಉರಿಯುತ್ತಿತ್ತು. ಅಕ್ಕನ ಮಗ ಗಿರಿಧರ ಲ್ಯಾಂಪ್ ಬಿಚ್ಚಿ "ಗಜಾನನ ಮಾವಾ..., ರಿಪೇರಿ ಗಿಪೇರಿ ಏನೂ ಮಾಡೇ ಇಲ್ಲ. ನೀಟಾಗಿ ಟೋಪಿ ಹಾಕಿದಾನೆ. ಹಳೇ ಬ್ಯಾಟ್ರೀನೇ ಹಾಕಿ ವಾಪಸ್ ಕೊಟ್ಟಿದಾನೆ. ಬ್ಯಾಟ್ರಿ ಲೀಕಾಗಿದ್ದು, ಅದರ ಮೇಲೆ ಸ್ಕ್ರಾಚ್ ಆಗಿದ್ದು ಎಲ್ಲಾ ಹಾಗೇ ಇದೆ" ಅಂತ ಬ್ಯಾಟರಿ ತೋರಿಸಿದ.

"ಸಂಜೆ ಹೋಗಿ ಅವನ ಜನ್ಮ ಜಾಲಾಡ್ತೀನಿ" ಅಂತ ಶಪಥ ಮಾಡಿದೆ.

ಸಂಜೆ ಶಿವಾ ಎಲೆಕ್ಟ್ರಿಕಲ್ಸ್‌ಗೆ ಹೋದಾಗ ಲ್ಯಾಂಪ್ ರಿಪೇರಿ ಮಾಡಿದವನು ಇರಲಿಲ್ಲ. ಬೇರೊಬ್ಬ ಇದ್ದ. ನಡೆದಿದ್ದೆಲ್ಲಾ ಅವನಿಗೆ ವಿವರಿಸಿ, "ಸರಿ ಮಾಡಿಕೊಡು ಇಲ್ಲ ದುಡ್ಡು ವಾಪಸ್ ಕೊಡು" ಅಂದೆ.

"ಸರ್ ಅದುಕ್ಕೆಲ್ಲ ಅವ್ರೇ ಬರ್ಬೇಕು. ಅವ್ರು ಸಬ್ರಿಮಲೆಗೆ ವೋಗವ್ರೆ. ಮುಂದುನ್ ಸನ್‌ವಾರ ಬನ್ನಿ ಸಿಗ್ತಾರೆ" ಅಂದ.

"ಹತ್‌ತೇರಿಕಿ... ಹೊಸ ಬ್ಯಾಟ್ರಿ ಹಾಕಿದೀನಿ ಅಂದಾಗ಼್ೇ ಅವ್ನ ಹತ್ರ ಅದರ ಬಿಲ್ ಈಸ್ಕೊಳಕ್ಕೆ ಏನಾಗಿತ್ತು ನಿಂಗೆ ? ಇನ್ನಷ್ಟೆ. ದುಡ್ಡೂ ಹೋಯ್ತು. ಲ್ಯಾಂಪೂ ರಿಪೇರಿಯಾಗಲಿಲ್ಲ" ಅಂತ ಒಂದು ದನಿ ಮೂಗುಮುರಿಯಿತು.

"ಮುಂದಿನ್ ಶನಿವಾರ ಬರ್ತಾನೆ ಅಂತ ಹೇಳುದ್ನಲ್ಲ. ನೋಡಣ ಏನಾಗುತ್ತೆ ಅಂತ" ಇನ್ನೊಂದು ಸಣ್ಣಗೆ ಆಶಾವಾದ ಹೇಳಿತು.

ಮುಂದಿನ ಶನಿವಾರ ಮತ್ತೆ ಹೋದೆ. ಆಗ ಬೇರೆ ಇನ್ಯಾರೋ ಇದ್ದ.

ರಿಪೇರಿಯವನ ಬಗ್ಗೆ ವಿಚಾರಿಸಿದಾಗ "ಅಯ್ಯೋ ಸಾರ್ ಅವ್ರಾ. ಅವ್ರಿಗೆ ಚಿಕನ್‌ಗುನ್ಯಾ ಆಗ್ಬುಟ್ಟೈತೆ. ಇನ್ನೂ ಬೆಂಗ್ಳೂರಲ್ಲೇ ಅವ್ರೆ, ವಾಸಿ ಆದ್ಮೇಲೆ ಬತ್ತಾರೆ" ಅಂದ.

"ಯಾವಾಗ್ ವಾಸಿಯಾಗುತ್ತೆ ?"

"ಏ... ಯಾವಾಗ್ ವಾಸಿ ಆಯ್ತದೆ ಅಂತ ಯೇಳಕ್ಕಾಯ್ತದಾ ? ಬನ್ನಿ ಇನ್ನೊಂದ್ ಅದ್ನೈದ್ ಇಪ್ಪತ್ ದ್ವ್ಯಾಸ ಬಿಟ್ಕಂದು."

ಒಂದೆರಡು ಕ್ಷಣ ನರನರಗಳಲ್ಲಿ ಆವೇಶ ಉಕ್ಕಿ ಹರಿದು ಮೈ ಗಡಗಡ ಕಂಪಿಸಿತು. ರಕ್ತ ಕೊತಕೊತ ಕುದಿಯಿತು. ಚಪ್ಪಡಿ ಕಲ್ಲಿನ ಮೇಲೆ ಬಟ್ಟೆ ಬೀಸಿ ಬೀಸಿ ಬಡಿಯುವ ರೀತಿ ರಿಪೇರಿಯವನನ್ನು ರಸ್ತೆಯ ಮಧ್ಯದಲ್ಲಿ ಬಡಿಯುತ್ತಿರುವ ಚಿತ್ರ ಕಣ್ಣ ಮುಂದೆ ಬಂತು. ಅಷ್ಟರಲ್ಲೇ "ಬೇಡ ಬೇಡ, ನಿನ್ ಕೈಲಿ ಅದೆಲ್ಲ ಆಗಲ್ಲ ಬಿಡು" ಅಂತ ಅಶರೀರವಾಣಿಯೊಂದು ಮೊಳಗಿತು.

ಈ ಎಮರ್ಜೆನ್ಸಿ ಲ್ಯಾಂಪ್ ಸಹವಾಸ ಸಾಕೋ ಸಾಕೆನಿಸಿಬಿಟ್ಟಿತು. ಲ್ಯಾಂಪ್ ಬ್ಯಾಗಿಗೆ ಹಾಕಿಕೊಂಡು ಒಂದೂ ಮಾತಾಡದೆ ತರಕಾರಿ ಪೇಟೆಗೆ ಹೋದೆ. ಮಾಮೂಲಿ ಅಂಗಡಿಗೆ ಹೋಗಿ "ಬೀನ್ಸ್ ಹೇಗಪ್ಪಾ ಕೆಜಿ ?" ಕೇಳಿದೆ.

"ಕೆಜಿ ಇಪ್ಪತ್ನಾಲಕ್ಕು ಸಾರ್" ಅಂದ.

ಯಾಕೋ ಚೌಕಾಸಿ ಮಾಡಬೇಕು ಅನ್ನಿಸಲಿಲ್ಲ. ನೆನಪು ಮಾಡಿಕೊಂಡು ಬ್ಯಾಗಿನಿಂದ ಲ್ಯಾಂಪ್ ಆಚೆ ತೆಗೆದು "ಒಂದು ಕೆಜಿ ಹಾಕು" ಅಂದೆ. ಇಪ್ಪತ್ತೈದು ರೂಪಾಯಿ ಕೊಟ್ಟೆ. ಅವನು ಐದು ರೂಪಾಯಿ ಹಿಂದಕ್ಕೆ ಕೊಟ್ಟು "ಇರ್ಲಿ ಪರವಾಗಿಲ್ಲ ಸಾರ್" ಅಂದ.

ಇನ್ನೇನು ಹೊರಡಬೇಕೆನ್ನುವಾಗ "ಲ್ಯಾಂಪ್ ಒಳ್ಳೆ ಬೆಳಕ್ ಬತ್ತದಾ ಸಾರ್ ?" ಕೇಳಿದ.

ಮನಸ್ಸಿಗೆ ಬಹಳ ಬೇಸರವಾಗಿತ್ತು.

"ಏನೇನಾಯ್ತು ಎಲ್ಲಾ ಅವನಿಗೆ ಹೇಳು. ನಿನ್ ಕತೆ ಕೇಳಿ ಅವ್ನಾದ್ರೂ ಅಯ್ಯೋ ಪಾಪ ಅಂತಾನೆ" ಅಂತ ಅಂತರ್ದನಿಯೊಂದು ಪಿಸುಗುಟ್ಟಿತು. ನಡೆದದ್ದೆಲ್ಲ ಹೇಳಿದೆ. ಅವನೂ ತಾಳ್ಮೆಯಿಂದ ಕೇಳಿಸಿಕೊಂಡ. "ಒಳ್ಳೇ ಅಳೇ ಕಾಲದ್ ಲಾಟೀನ್ ಇದ್ದಾಂಗೈತೆ. ತಕಂಡೋಗಿ ಸೋಕೇಸಲ್ಲಿ ಮಡಿಕಳಿ. ಇನ್ನೇನ್ಮಾಡ್ತೀರೀ ?" ಅಂತ ಜೋರಾಗಿ ನಕ್ಕ.

ಸಪ್ಪೆ ನಗು ನಕ್ಕು ಹೊರಟೆ. ನಾಲ್ಕು ಹೆಜ್ಜೆ ಹಾಕಿ ವಾಪಸ್ ಬಂದು "ನಿಂಗೆ ಬೇಕಾದ್ರೆ ತಗೋ" ಅಂತ ಲ್ಯಾಂಪ್ ಮುಂದೆ ಹಿಡಿದೆ.

"ಬೇಡಾ ಸಾರ್. ನಾನೇನ್ ಮಾಡವಿ ಕೆಟ್ಟೋಗಿರೋ ಲ್ಯಾಂಪ್ ಮಡಿಕಂದು ?" ಅಂದ.

"ನೀನೇನ್ ದುಡ್ ಕೊಡದ್ ಬೇಡಪ್ಪಾ. ನೋಡಕ್ಕೆ ಚೆನ್ನಾಗಿದೆ ಅಂದ್ಯಲ್ಲ. ಇಷ್ಟ ಆಗಿದ್ರೆ ನೀನೇ ಇಟ್ಕೋ" ಅಂದೆ.

"ಯಾಕೆ ನಿಮ್ಗೆ ಬ್ಯಾಡ್ವಾ ?" ಅಂದ. ನಗುತ್ತ ಈಸ್ಕೊಂಡು ಪಕ್ಕದಲ್ಲಿ ಇಟ್ಟುಕೊಂಡ.

ಎಷ್ಟೋ ಕಾಲದಿಂದ ಹೊತ್ತಿದ್ದ ದೊಡ್ಡ ಹೊರೆ ಇಳಿದಂತೆನಿಸಿತು. ಕಿರಾಣಿ ಅಂಗಡಿಗಳ ಊದುಬತ್ತಿ ಘಮಘಮ ಪರಿಮಳ ಆಸ್ವಾದಿಸುತ್ತ ನಿಧಾನವಾಗಿ ಪೇಟೆಯಿಂದ ಹೊರನಡೆದೆ.

**ಶಂಕರನಾರಾಯಣ ಆರ್. ಕಾಶಿವಾಸಿ**
ಎಂ.ಐ.ಜಿ. – ೧, ಓ.ವೈ.ಎಚ್.ಎಸ್., ೧೧ನೇ ಅಡ್ಡರಸ್ತೆ
ಗಂಗೋತ್ರಿ ಬಡಾವಣೆ, ಮೈಸೂರು – ೫೭೦ ೦೦೯

# ಗಝಲ್

ಜೀವಂತ ಮನುಷ್ಯರನು ಹೂಳುತ್ತಿರುವುದನು ಇಲ್ಲಿ ನೋಡಲಾಗದು
ಕನಸುಗಳ ಮೂಟೆಗೆ ಕೊಳ್ಳಿ ಇಡುವುದನು ಇಲ್ಲಿ ನೋಡಲಾಗದು

ಮಲ್ಲಿಗೆಯ ತೋಟದಲೂ ಮದ್ದು ಬೆಳೆಯುವರಿಲ್ಲಿ
ನಗುತ್ತಲೇ ಬೆನ್ನಿಗೆ ಚೂರಿ ಹಾಕುವುದನು ಇಲ್ಲಿ ನೋಡಲಾಗದು

ಎಳೆಯ ಮನಸುಗಳಲಿ ಅಸೂಯೆ ಬಿತ್ತುವವರಿಲ್ಲಿ
ಮಮತೆಯ ಕಂಗಳಿಗೆ ಖಾರ ಸುರಿಯುವುದನು ಇಲ್ಲಿ ನೋಡಲಾಗದು

ತಿನ್ನುವ ಹಣ್ಣುಗಳಿಗೆ ವಿಷ ಲೇಪಿಸುವವರಿಲ್ಲಿ
ಪ್ರೇಮದ ಕನಸಿಗೆ ಗೋರಿ ತೋರಿಸುವುದನು ಇಲ್ಲಿ ನೋಡಲಾಗದು

**ಡಾ॥ ದಸ್ತಗೀರ್‌ಸಾಬ್ ದಿನ್ನಿ**
ಪ್ಲಾಟ್ ನಂ. ೮, ಪದ್ಮಾವತಿ ಕಾಲೋನಿ, ಆಸಾಪುರ ರಸ್ತೆ
ರಾಯಚೂರು – ೫೮೪ ೧೦೧

# ಕಣ್ಮರೆಯಾದ ವಿಚಾರವಾದಿ ಪ್ರೊ॥ ಎಚ್ಚೆಲ್ಕೆ

**'ಲಂ**ಕೇಶ್' ಪತ್ರಿಕೆಯ ಓದುಗರೆಲ್ಲರಿಗೂ ಪ್ರೊ॥ ಎಚ್ಚೆಲ್ಕೆ ಪರಿಚಿತರು. ನಾನು 'ಲಂಕೇಶ್' ಓದಲು ಆರಂಭಿಸುವ ಮೊದಲೇ ಅವರ ಬಗ್ಗೆ ಕೇಳಿದ್ದೆ. ಪ್ರಗತಿರಂಗವನ್ನು ಸಂಘಟಿಸುವ ಅವರ ಪ್ರಯತ್ನದ ಕಾರಣದಿಂದಾಗಿ. ಆ ಸಂದರ್ಭದಲ್ಲಿ ಲಂಕೇಶ್ ಅವರಿಗೂ ಮೌಲಿಕವಾದ ಸಲಹೆಗಳನ್ನು ನೀಡುತ್ತಿದ್ದ ವ್ಯಕ್ತಿತ್ವವುಳ್ಳವರು ಇವರು ಎಂದು ಕೇಳಿ ಗೊತ್ತಿತ್ತು. ೨೦೧೨ರಲ್ಲಿ ಸಂಘಟನೆಯ ಕೆಲಸಗಳ ಕಾರಣಕ್ಕೆ ನಾನು ಮಂಡ್ಯಕ್ಕೆ ಹೋಗಿ ನೆಲೆಸುವ ಸಂದರ್ಭ ಬಂತು. ಅಲ್ಲಿ, ಅದುವರೆಗೆ ನಾನು ಕೇಳಿದ್ದ ಪ್ರೊ॥ ಎಚ್. ಎಲ್. ಕೇಶವಮೂರ್ತಿಯವರನ್ನು ನೇರವಾಗಿ ಪರಿಚಯಿಸಿಕೊಂಡು ಹತ್ತಿರದಲ್ಲಿ ಕೆಲಸ ಮಾಡುವ ಅವಕಾಶ ನನಗೆ ದೊರಕಿತು.

ಅದು ೨೦೧೩ನೇ ಇಸವಿ. ಆ ವರ್ಷ ಮಂಡ್ಯದ ಆತ್ಮಸಾಕ್ಷಿಯುಳ್ಳ ನಾಗರಿಕರನ್ನು ಅಲುಗಾಡಿಸಿದ 'ಆಬಲವಾಡಿ ಮರ್ಯಾದೆಗೇಡು ಹತ್ಯೆ' ನಡೆಯಿತು. ಅದರ ವಿರುದ್ಧ ದನಿಯೆತ್ತಲು ಮಂಡ್ಯದ ಎಲ್ಲಾ ಪ್ರಗತಿಪರರನ್ನು ಒಂದೆಡೆ ತರುವ ಕೇಂದ್ರಬಿಂದುವಿನಂತೆ ಎಚ್ಚೆಲ್ಕೆ ಕೆಲಸ ಮಾಡಿದರು. ಆ ಘಟನೆಯ ತಣ್ಣನೆಯ ಕ್ರೌರ್ಯ ನಿಜಕ್ಕೂ ಎಚ್ಚೆಲ್ಕೆಯವರ ಆತ್ಮವನ್ನು ಕಲಕಿತ್ತು. ಅಂತಹ ಅಥವಾ ಅದಕ್ಕಿಂತ ಘೋರವಾದ ದೌರ್ಜನ್ಯದ ಘಟನೆಗಳನ್ನು ಅವರು ಅದಕ್ಕಿಂತ ಹಿಂದೆಯೂ ಕಂಡಿರಬಹುದು. ಆದರೆ ಪ್ರಜಾತಂತ್ರವೆಂದು ಕರೆಸಿಕೊಳ್ಳುವ ಈ ವ್ಯವಸ್ಥೆ ಅಸ್ತಿತ್ವಕ್ಕೆ ಬಂದು ಇಷ್ಟು ದಶಕಗಳು ಕಳೆದ ಮೇಲೂ ಮಹಿಳೆಯರು, ದಲಿತರು ಮೊದಲಾದ ದಮನಿತ ಸಮುದಾಯಗಳನ್ನು ಈಗಲೂ ಅಂಚಿನಲ್ಲೇ ಇರಿಸಿ, ಅಭದ್ರತೆಯಲ್ಲಿ ಬದುಕುವಂತೆ ಮಾಡುವಲ್ಲಿ ಸ್ಥಾಪಿತ ಹಿತಾಸಕ್ತಿಗಳು ಯಶಸ್ವಿಯಾಗಿರುವುದು ಅವರನ್ನು ಆತಂಕಕ್ಕೀಡುಮಾಡಿತ್ತು.

ಜೊತೆಗೆ, ಮರ್ಯಾದೆಗೇಡು ಹತ್ಯೆಯಂತಹ ಪ್ರಕರಣಗಳ ಸಂಕೀರ್ಣತೆಯೂ, ಆ ಸನ್ನಿವೇಶವನ್ನು ಸೂಕ್ಷ್ಮವಾಗಿ ನಿರ್ವಹಿಸಬೇಕಾದ ಹೊಣೆಯನ್ನು ಹೊರಿಸಿತ್ತು. ಪ್ರೊ॥ ಎಚ್ಚೆಲ್ಕೆಯವರಿಗೆ ಇಂತಹ ಪ್ರಕರಣಗಳ ಹಿಂದೆ ಢಾಳಾಗಿರುವ ಜಾತಿ ಪ್ರತಿಷ್ಠೆಯನ್ನು ಪ್ರಶ್ನಿಸುವುದರ ಅಗತ್ಯದ ಅರಿವಿತ್ತು; ಅಷ್ಟೇ ಮುಖ್ಯವಾಗಿ, ಈ ನೆಪದಲ್ಲಿ ಸಮಾಜದಲ್ಲಿ ಇನ್ನಷ್ಟು ಜಾತಿ ಧ್ರುವೀಕರಣವನ್ನು ಉಂಟುಮಾಡಲು ಪ್ರಯತ್ನಿಸುವ ಜಾತಿವಾದಿ ಶಕ್ತಿಗಳಿಗೆ ಅವಕಾಶವಾಗದಂತೆ ನೋಡಿಕೊಳ್ಳಬೇಕಾದ ಜವಾಬ್ದಾರಿಯೂ ಇತ್ತು. ಈ ಎರಡನ್ನೂ ಆಳವಾಗಿ ಅರಿಯುವ ಸಂವೇದನಾಶೀಲತೆ ಹೊಂದಿದ್ದ ಕಾರಣಕ್ಕೆ ಎಚ್ಚೆಲ್ಕೆಯವರು ಈ ವಿಚಾರವನ್ನು ಮಹಿಳಾ ದೃಷ್ಟಿಕೋನದೊಂದಿಗೆ ಸಮಾಜದ ಮುಂದಿಡುವ ನಿರ್ಧಾರ ಮಾಡಿದರು. ಹಾಗೆ ಮಾಡದಿದ್ದರೆ ಉಂಟಾಗಬಹುದಾದ ದೂರಗಾಮಿ ಅಪಾಯಗಳನ್ನು ಮರ್ಯಾದೆಗೇಡು ಹತ್ಯೆ ವಿರೋಧಿ ಶಕ್ತಿಗಳು ಮತ್ತು ವ್ಯಕ್ತಿಗಳಿಗೆ ಮನವರಿಕೆ ಮಾಡಿಕೊಟ್ಟರು. ಮಂಡ್ಯದ ಹಿರಿಯ ರೈತ ನಾಯಕಿ ಹಾಗೂ ಮಹಿಳಾಪರ ಹೋರಾಟಗಾರ್ತಿ ಸುನಂದಾ ಜಯರಾಮ್‌ರವರ ನೇತೃತ್ವದಲ್ಲಿ ಈ ಹೋರಾಟ ನಡೆಯುವಂತೆ ಭೂಮಿಕೆ ಸೃಷ್ಟಿಸಿದರು. ನಾನು ಕೆಲಸ ಮಾಡುವ 'ಮಹಿಳಾ ಮುನ್ನಡೆ' ಸಂಘಟನೆಯೂ ಈ ಪ್ರಯತ್ನದಲ್ಲಿ ಅವರೊಂದಿಗೆ ಜೊತೆಗೂಡಿದ್ದರಿಂದ ಪ್ರೊ॥ ಎಚ್ಚೆಲ್ಕೆಯವರು ರೂಪಿಸಿದ್ದ ಹೋರಾಟದ ಕ್ರಮವನ್ನು ಹತ್ತಿರದಿಂದ ತಿಳಿದುಕೊಳ್ಳುವ ಅವಕಾಶ ದೊರಕಿತ್ತು.



ಎಲ್ಲರಿಗೂ ಎಚ್ಚೆಲ್ಕೆ ಎಂದು ಪರಿಚಿತರಾದ ಪ್ರೊ॥ ಎಚ್. ಎಲ್. ಕೇಶವಮೂರ್ತಿ ಮಂಡ್ಯದ ಹರಗನಹಳ್ಳಿಯವರು (ಹುಟ್ಟು: ೨೮.೧೨.೧೯೩೯). ಉನ್ನತ ಶ್ರೇಣಿಯ ಅಧಿಕಾರಿಗಳೂ, ಜಾನಪದ ವಿದ್ವಾಂಸರೂ ಆಗಿದ್ದ ಡಾ॥ ಎಚ್. ಎಲ್. ನಾಗೇಗೌಡರು ಮತ್ತು ಎಚ್ಚೆಲ್ಕೆಯವರು ಒಂದೇ ಕುಟುಂಬಕ್ಕೆ ಸೇರಿದವರೆಂಬುದು ಹೆಚ್ಚಿನವರಿಗೆ ಗೊತ್ತಿಲ್ಲ. ಎಚ್ಚೆಲ್ಕೆಯವರ ಹೆಗ್ಗಳಿಕೆ ಕುಟುಂಬ ಮೂಲದ್ದೋ, ವ್ಯಕ್ತಿಗತವಾಗಿ ಗಳಿಸಿದ ವಿದ್ವತ್ ಸಾಧನೆಯದ್ದೋ ಆಗಿರಲಿಲ್ಲ. ಬದಲಿಗೆ ಮಂಡ್ಯ ಜಿಲ್ಲೆಗೂ, ದೇಶದ ಸಾಮಾಜಿಕ, ಸಾಂಸ್ಕೃತಿಕ ಹಾಗೂ ರಾಜಕೀಯ ಬದುಕಿನ ವಿವಿಧ ಆಯಾಮಗಳಿಗೂ ನಡುವಿನ ವೈಚಾರಿಕ ಕೊಂಡಿಯಾಗಿ ಅವರು ಸುದೀರ್ಘ ಕಾಲ ಸಾರ್ವಜನಿಕ ಜೀವನವನ್ನು ನಡೆಸಿದ ಫಲವಾಗಿ ಸಂಪಾದಿಸಿದ್ದಾಗಿತ್ತು.

ಸರ್ಕಾರಿ ನೌಕರಿಯಲ್ಲಿದ್ದ ಅವರ ತಂದೆಯ ಜೊತೆ ಕುಟುಂಬವೂ ವರ್ಗಾವಣೆಗೊಳ್ಳುತ್ತಿತ್ತಾದರೂ, ಎಚ್ಚೆಲ್ಕೆಯವರ ಬಾಲ್ಯ ಬಹುಮಟ್ಟಿಗೆ ಮಂಡ್ಯ ಜಿಲ್ಲೆಯ ಸುತ್ತಮುತ್ತಲಲ್ಲೇ ಕಳೆದಿದೆ. ಅವರು ಶಾಲಾ ಶಿಕ್ಷಣವನ್ನು ಪಡೆದುಕೊಂಡದ್ದು ಮೇಲುಕೋಟೆಯಲ್ಲಿ. ಜಾತಿ ವ್ಯವಸ್ಥೆಯ ಕೆಡುಕನ್ನು ಅಲ್ಲಿದ್ದಾಗಲೇ ಅರಿತುಕೊಂಡದ್ದನ್ನು ಎಚ್ಚೆಲ್ಕೆ ಕೆಲವು ಕಡೆ ಉಲ್ಲೇಖಿಸಿದ್ದಾರೆ. ಬೆಂಗಳೂರಿನ ಸೆಂಟ್ರಲ್ ಕಾಲೇಜಿನಲ್ಲಿ ವಿಜ್ಞಾನ ಪದವಿ ಪಡೆದುಕೊಂಡ ನಂತರ ಅಲ್ಲೇ ಕಾನೂನು ಪದವಿ ಪಡೆಯಲು ಕಾಲೇಜಿಗೆ ಸೇರಿಕೊಂಡರು. ಆದರೆ ಹಾಸನದ ಮಲ್ನಾಡ್ ಇಂಜಿನಿಯರಿಂಗ್ ಕಾಲೇಜಿನಲ್ಲಿ ಸೀಟು ಸಿಕ್ಕಿದ್ದರಿಂದ ಲಾ ಕಾಲೇಜು ಬಿಟ್ಟರು. ವೈಚಾರಿಕತೆ, ಸಾಹಿತ್ಯ ಮತ್ತು ಸಿಗರೇಟು ಬೆಂಗಳೂರಿನಿಂದಲೇ ಅವರಿಗೆ ಅಂಟಿಕೊಂಡವು. ತಿರುಪತಿಯ ವೆಂಕಟೇಶ್ವರ ಕಾಲೇಜಿನಲ್ಲಿ ಸ್ನಾತಕೋತ್ತರ ಇಂಜಿನಿಯರಿಂಗ್ ಪದವಿ ಮುಗಿಸಿದ ಮೇಲೆ ಮಂಡ್ಯದಲ್ಲೇ ಪಿಇಎಸ್ ಇಂಜಿನಿಯರಿಂಗ್ ಕಾಲೇಜಿನಲ್ಲಿ ಅಧ್ಯಾಪಕರಾಗಿ ಕೆಲಸಕ್ಕೆ ಸೇರಿಕೊಂಡವರು, ನಿವೃತ್ತಿಯವರೆಗೂ ಅಲ್ಲೇ ವೃತ್ತಿಜೀವನ ನಡೆಸಿದರು.

ಪಿ. ಲಂಕೇಶರಂತಹ ದೈತ್ಯ ವ್ಯಕ್ತಿತ್ವದ ಜೊತೆ ಜೊತೆಗೇ ಬರವಣಿಗೆ ಮತ್ತು ರಾಜ್ಯಮಟ್ಟದ ರಾಜಕೀಯ ಚಟುವಟಿಕೆಗಳನ್ನು ನಡೆಸಿದರು. ಪ್ರೊ॥ ಎಚ್. ಎಲ್. ನಾಗೇಗೌಡರ ಕುಟುಂಬದ ವರಾಗಿದ್ದ ಇವರು, ಮಂಡ್ಯದ ಆ ಕಾಲದ ಪ್ರಭಾವೀ ರಾಜಕಾರಣಿ ಜಿ. ಎಸ್. ಬೊಮ್ಮೇಗೌಡರ ಮಗಳನ್ನು ಮದುವೆಯಾಗಿದ್ದರು. ಹಲವು ರೀತಿಯ ಖ್ಯಾತಿಗೆ ಪಾತ್ರರಾಗಿದ್ದ ಕೆ. ವಿ. ಶಂಕರೇಗೌಡರು ಅಧ್ಯಕ್ಷರಾಗಿದ್ದ ಸಂಸ್ಥೆಯಲ್ಲಿ ಇವರು ಕೆಲಸ ಮಾಡುತ್ತಿದ್ದರು. ಮಂಡ್ಯದಲ್ಲಿ ಸಚಿವರಾಗಿದ್ದ ಎಸ್. ಡಿ. ಜಯರಾಂ ಇವರನ್ನು ಗುರುಸ್ಥಾನದಲ್ಲಿಟ್ಟುಕೊಂಡಿದ್ದರು; ಆದರೆ, ಇವ್ಯಾವುವೂ ಎಚ್ಚೆಲ್ಕೆಯವರ ವಿಸಿಟಿಂಗ್ ಕಾರ್ಡ್ ಆಗಲಿಲ್ಲ. ಸ್ವತಂತ್ರ ವ್ಯಕ್ತಿತ್ವ, ಸ್ವತಂತ್ರ ಚಿಂತನೆ ಹಾಗೂ ಸ್ವತಂತ್ರ ಕ್ರಿಯಾಶೀಲತೆ ಕೊನೆಯವರೆಗೂ ಅವರ ಬದುಕಿನ ಹೆಗ್ಗುರುತುಗಳಾಗಿದ್ದವು.

ತಿಳಿಹಾಸ್ಯದ ವಿಡಂಬನೆ ಹಾಗೂ ವೈಚಾರಿಕ ಬರಹಗಳಿಗಾಗಿ ಎಚ್ಚೆಲ್ಕೆ ಪ್ರಸಿದ್ಧರು. ವಿವಿಧ ನಿಯತಕಾಲಿಕಗಳಿಗಾಗಿ ಅವರು ಬರೆದ ಅಂತಹ ಬರಹಗಳ ಸಂಕಲನಗಳು ಸಾಕಷ್ಟು ಪ್ರಕಟವಾಗಿವೆ. *ನೀನ್ಯಾಕೋ ನಿನ್ನ ಹಂಗ್ಯಾಕೋ ಮಾವ ?, ಎಂಗಾರ ಟಿಕೆಟ್ ಕೊಡಿ, ಹರಕುತುಟಿ ಮಹಾತ್ಮೆ, ಇಸ್ಪೀಟ್ ನ್ಯಾಯ, (ಅ) ನೀತಿಕಥೆಗಳು, ಹನುಮ ನಿನ್ನ ನಾಮ ಒಂದೇ, ಥೂ ! ಹಲ್ಕಾ !!, ಗೌರವಾನ್ವಿತ ದಗಾಕೋರರು, ಗಾಂಧಿ ಅವತ್ತು ಹುಟ್ಟಬಾರದಿತ್ತು !, ದೇವರುಗಳ ಟೈಮೇ ಸರಿಯಿಲ್ಲ, ಪಾತಕಿಯೇ ಪರಮಾತ್ಮ, ಪುಗಸಟ್ಟೆ ಪಾರಾಯಣ* ಇವರ ಕೃತಿಗಳು. ಇದಲ್ಲದೆ 'ವೈವಾ ವೋಸಿ' ಎಂಬ ನಾಟಕವನ್ನು ಬರೆದಿದ್ದರು. ಮಂಡ್ಯ ಜಿಲ್ಲೆಯ ಸಾಕ್ಷರತಾ ಆಂದೋಲನದಲ್ಲಿ ಅತ್ಯಂತ ಸಕ್ರಿಯವಾಗಿ ತೊಡಗಿಸಿಕೊಂಡು ಅದನ್ನು ಮುನ್ನಡೆಸಿದ್ದರು. ಆಗ

**ಮಲ್ಲಿಗೆ**

ನವಸಾಕ್ಷರರಿಗಾಗಿ *ಹಿತ್ತಲಗಿಡವೇ ಮದ್ದು, ಯಾರದು ತಪ್ಪು ?, ಕರಿನಾಯಿ ಸತ್ತಾಗ* ಮುಂತಾದ ೧೨ ಕೃತಿಗಳನ್ನು ಬರೆದಿದ್ದರು. ಇತರರು ಸಹ ಬರಹಗಾರರೊಂದಿಗೆ, ಕರ್ನಾಟಕ ಸಾಹಿತ್ಯ ಅಕಾಡೆಮಿಗಾಗಿ 'ಕನ್ನಡದಲ್ಲಿ ವಿನೋದ ಸಾಹಿತ್ಯ' ಮತ್ತು 'ಹಾಸ್ಯ ಕಸ್ತೂರಿ' ಎಂಬ ಕೃತಿಗಳನ್ನು ಸಂಪಾದಿಸಿದ್ದರು.

ಬರಹಗಾರರಾಗಿ ರಾಜ್ಯದಲ್ಲಿ ಪ್ರಸಿದ್ಧಿಗೆ ಬಂದಿದ್ದ ಎಚ್ಚೆಲ್ಕೆಯವರು ಮಂಡ್ಯ ಜಿಲ್ಲೆಯ ಮಟ್ಟಿಗೆ ನಿರಂತರವಾಗಿ ಸಮಕಾಲೀನ ಸಮಸ್ಯೆಗಳಿಗೆ ಸ್ಪಂದಿಸುವ ಹೋರಾಟಗಾರರಾಗಿ ಕ್ರಿಯಾಶೀಲರಾಗಿದ್ದರು. ದಲಿತ ಸಂಘರ್ಷ ಸಮಿತಿಯ ಮೊದಲೆರಡು ದಶಕಗಳ ಎಲ್ಲಾ ಚಟುವಟಿಕೆಗಳಲ್ಲೂ ಅವರು ಸಹಭಾಗಿ. ಈ ಭಾಗದ ಸಂಸದ ಸಂಗಾತಿಗಳು ಅವರನ್ನು ತಮ್ಮ ಚಳವಳಿಯ ಭಾಗವೆಂದೇ ಪರಿಗಣಿಸುತ್ತಾರೆ. ಅಬ್ರಹಾಂ ಕೋವೂರರನ್ನು ಮಂಡ್ಯಕ್ಕೆ ಕರೆಸಿ ಕಾರ್ಯಕ್ರಮ ಮಾಡಿದ್ದ ಎಚ್ಚೆಲ್ಕೆ, ನಿರಂತರವಾಗಿ ವೈಚಾರಿಕ ಚಟುವಟಿಕೆಗಳ ಜೊತೆಗಿದ್ದರು. ಕೋಮು ಸೌಹಾರ್ದ ವೇದಿಕೆಯ ಆರಂಭದಿಂದ ಜಿಲ್ಲಾಧ್ಯಕ್ಷರಾಗಿ ಜವಾಬ್ದಾರಿ ತೆಗೆದುಕೊಂಡ ಅವರು ತಾವು ಬದುಕಿರುವವರೆಗೂ ಅದರೊಡನೆ ಸಕ್ರಿಯರಾಗಿದ್ದರು. ಅತಿಥಿಯಾಗಿ ಕರೆಯದಿದ್ದರೂ, ಸಮಕಾಲೀನ ಬೆಳವಣಿಗೆಗಳ ಕುರಿತ ಆಸಕ್ತಿಯಿಂದ ಹಲವು ಸಭೆ ಹಾಗೂ ಸಮಾರಂಭಗಳಲ್ಲಿ ಪ್ರೇಕ್ಷಕರಾಗಿ ಬಂದು ಹೋಗುವಷ್ಟು ದೊಡ್ಡ ವ್ಯಕ್ತಿತ್ವ ಅವರದ್ದಾಗಿತ್ತು. ಕೋಮು ಸೌಹಾರ್ದ ವೇದಿಕೆಯ ಹತ್ತಾರು ವರ್ಷಗಳ ಕಾರ್ಯಕ್ರಮದಲ್ಲಿ ಅವರು ಸದಾ ಇದ್ದೇ ಇರುತ್ತಿದ್ದರು. ಕಡೆಯ ನಾಲ್ಕು ವರ್ಷಗಳಲ್ಲಿ ಕರ್ನಾಟಕ ಜನಶಕ್ತಿ ಸಂಘಟನೆಯ ಅಧ್ಯಕ್ಷ ಮಂಡಳಿಯ ಸದಸ್ಯರಲ್ಲಿ ಒಬ್ಬರಾಗಿ ಮಾರ್ಗದರ್ಶನ ಮಾಡಿದರು.

ಪಿ. ಲಂಕೇಶ್, ತೇಜಸ್ವಿ, ರಾಮದಾಸ್ ಅವರ ಜೊತೆಗೆ ಪ್ರೊ॥ ಎಚ್ಚೆಲ್ಕೆಯವರು ಕರ್ನಾಟಕ ಪ್ರಗತಿರಂಗದ ರಾಜ್ಯ ಸಂಚಾಲಕರಲ್ಲಿ ಒಬ್ಬರಾಗಿದ್ದರು. ನೇರವಾಗಿ ಲಂಕೇಶರನ್ನೂ ವಿಮರ್ಶೆಗೆ ಒಳಪಡಿಸುತ್ತಿದ್ದ ಸಾಹಸಿ ಇವರೊಬ್ಬರೇ ಮತ್ತು ಲಂಕೇಶರು ಕುಟುಕದೇ ಬಿಟ್ಟಿದ್ದು ಇವರೊಬ್ಬರನ್ನೇ ಎಂದು ಲಂಕೇಶ್ ಪತ್ರಿಕೆಯ ಬಳಗದವರೆಲ್ಲರೂ ನೆನಪಿಸಿಕೊಳ್ಳುತ್ತಾರೆ. ಹೇಳಬೇಕಾದ್ದನ್ನು ಹೇಳಿಯೇ ತೀರಬೇಕೆನ್ನುವ ನಿಷ್ಠುರತೆಯನ್ನು ಹೊಂದಿದ್ದ ಎಚ್ಚೆಲ್ಕೆಯವರು ಆಳದಲ್ಲಿ ಬಹಳ ಸಂಕೋಚ ಸ್ವಭಾವವನ್ನು ಹೊಂದಿದ್ದರು. ಹಣಕಾಸಿನ ವಿಚಾರದಲ್ಲಿ ಶಿಸ್ತು ಹಾಗೂ ಪಾರದರ್ಶಕತೆ, ಸಮಯಪಾಲನೆಯಲ್ಲಿ ಕಟ್ಟುನಿಟ್ಟುತನ ಇತ್ಯಾದಿಗಳನ್ನು ಸ್ವತಃ ಪಾಲಿಸುವ ಮೂಲಕ ಇತರರಿಗೆ ಮಾದರಿಯಾಗಿದ್ದರು. ಪ್ರಶಸ್ತಿ ಇತ್ಯಾದಿಗಳಿಗಾಗಿ ಪ್ರಯತ್ನ ಮಾಡುವುದು ಅವರ ವ್ಯಕ್ತಿತ್ವಕ್ಕೆ ಸಾಧ್ಯವೇ ಇರಲಿಲ್ಲ. ಕರ್ನಾಟಕ ಸಾಹಿತ್ಯ ಅಕಾಡೆಮಿ, ಕರ್ನಾಟಕ ಮಾಧ್ಯಮ ಅಕಾಡೆಮಿ, ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿಗಳು ಅವರನ್ನು ಹುಡುಕಿ ಬಂದಿದ್ದವು. ನಾಗಮಂಗಲ ತಾಲೂಕು ಪ್ರಥಮ ಸಾಹಿತ್ಯ ಸಮ್ಮೇಳನ ಮತ್ತು ಮಂಡ್ಯ ಜಿಲ್ಲಾ ಸಾಹಿತ್ಯ ಸಮ್ಮೇಳನಗಳ ಅಧ್ಯಕ್ಷರಾಗಿದ್ದರು.

ಇದಾದ ನಂತರದ ದಿನಗಳಲ್ಲಿ ಸಾಮಾಜಿಕ ಚಟುವಟಿಕೆಗಳಲ್ಲೂ, ವೈಚಾರಿಕ ಸಂವಾದಗಳಲ್ಲೂ ಪ್ರೊ॥ ಎಚ್ಚೆಲ್ಕೆಯವರ ಒಡನಾಟ ನನಗೆ ದೊರಕಿದ್ದರಿಂದ ಬದುಕಿನ ಬಗ್ಗೆ ಅವರು ಹೊಂದಿದ್ದ ನೇರ, ಸರಳ ಗ್ರಹಿಕೆಯನ್ನು ನಾನು ನೋಡಲು ಸಾಧ್ಯವಾಯಿತು. ಬದುಕಿನ ಕುರಿತ ಅವರ ತಾತ್ವಿಕತೆ ಬಹಳ ಸರಳ: 'ನುಡಿದಂತೆ ನಡೆಯಬೇಕು; ಹಾಗೆ ನಡೆದುಕೊಳ್ಳಲು ಸಾಧ್ಯವಾಗದ್ದನ್ನು ಬೇರೆಯವರಿಗೆ ಹೇಳಲು ಹೋಗಬಾರದು.' ಮಾತಿಗೆ ಸರಳವೂ, ಆಚರಣೆಗಿಳಿಸಲು ಹೊರಟಾಗ ಅತ್ಯಂತ ಕಠಿಣವೂ ಆದ ಈ ತಾತ್ವಿಕತೆಯನ್ನು, ಒಂದಿಷ್ಟೂ ಕುಂದಾಗದಂತೆ ಪ್ರೊ॥ ಎಚ್ಚೆಲ್ಕೆಯವರು ಬದುಕಿ ತೋರಿಸಿದರು. ಪ್ರಾಮಾಣಿಕತೆ, ಸರಳತೆ, ಜಾತ್ಯತೀತತೆ ಮೊದಲಾದವನ್ನು ಅವರೂ ಎಂದೂ ಬೋಧಿಸಲಿಲ್ಲ; ಬದುಕಿನಲ್ಲಿ ಪ್ರತೀ ಹೆಜ್ಜೆಯಲ್ಲೂ ಅಳವಡಿಸಿಕೊಂಡರು. ನೇರ-ನಿಷ್ಠುರತೆ ಕೊನೆಯವರೆಗೂ ಅವರ ಆಲೋಚನಾಕ್ರಮದ ಭಾಗವಾಗಿತ್ತು. ಎಂದಿಗೂ ಸ್ಥಾಪಿತ ಶಕ್ತಿಗಳ ಜೊತೆ ರಾಜಿಯಾಗದ, ಬೌದ್ಧಿಕ ದಾಸ್ಯಕ್ಕೆ ಒಳಗಾಗದ ಅವರ ದಿಟ್ಟ ನಿಲುವುಗಳು, ನಿಜಕ್ಕೂ ಅವರನ್ನು ಬಹಳ ಅಪರೂಪದ ವ್ಯಕ್ತಿಯನ್ನಾಗಿ ರೂಪಿಸಿದ್ದವು.

ವೈಯಕ್ತಿಕ ಬದುಕಿನ ಹೊಡೆತಗಳು, ನೋವುಗಳು ಎಂದೂ ನಮ್ಮನ್ನು ಸಮಾಜದ ಕೆಲಸಗಳಿಂದ ವಿಮುಖರನ್ನಾಗಿಸಬಾರದು; ಅಂತಹ ಸೌಕರ್ಯಗಳನ್ನು ಬುದ್ಧಿಜೀವಿಗಳು ಅಪೇಕ್ಷಿಸುವುದೇ ತಪ್ಪು ಎಂದು ಬಲವಾಗಿ ನಂಬಿದ್ದರು. ಅದರಂತೆಯೇ ಮೇಲಿಂದ ಮೇಲೆ ಖಾಸಗಿ ಬದುಕಿನಲ್ಲಿ ನೋವುಗಳನ್ನು ಅನುಭವಿಸಿದರೂ ಸಹ ಎಂದಿಗೂ ಅದು ತಮ್ಮ ಸಾರ್ವಜನಿಕ ಬದುಕನ್ನು ಮಸುಕಾಗಿಸದಂತೆ ನೋಡಿಕೊಂಡರು. ಅಂತಹ ಅಗಾಧವಾದ ಅಂತಃಸ್ಥೈರ್ಯ ಅವರೊಳಗಿತ್ತು. ಎಷ್ಟೋ ಬಾರಿ ಅವರ ಅಂತಹ ನೋವಿನ ಸನ್ನಿವೇಶಗಳಲ್ಲಿ ನಾವೇ ಕಳವಳಗೊಂಡಿದ್ದು ಇದೆ. ಮೇಲಿಂದ ಮೇಲೆ ನೋವುಣ್ಣಬೇಕಾಗಿ ಬಂದ ಈ ಹಿರಿಯರು ಮತ್ತೆ ಈ ಬಾರಿ ಈ ಆಘಾತವನ್ನು ಎದುರಿಸಿ ಚೇತರಿಸಿಕೊಳ್ಳಬಲ್ಲರೇ ಎಂದು ಅಂತಹ ಪ್ರತೀ ಸಂದರ್ಭದಲ್ಲಿ ಸ್ವಲ್ಪವೇ ಸಮಯದಲ್ಲಿ ತಮ್ಮ ಎಂದಿನ ಆತ್ಮವಿಶ್ವಾಸದ ನಗುವಿನೊಂದಿಗೆ ಅವರು ಸಮಾಜದ ನೋವುಗಳಲ್ಲಿ ಭಾಗಿಯಾಗಲು ಧುಮುಕಿದ್ದನ್ನು ಕಂಡಿದ್ದೇನೆ. ವ್ಯಕ್ತಿಗತ ಸಂಕಷ್ಟಗಳಿಗೆ ಸಮುದಾಯದ ಸಂಕಟಗಳ ಪರಿಹಾರದ ಪ್ರಯತ್ನಗಳನ್ನೇ ಮುಲಾಮಿನಂತೆ ಭಾವಿಸಿಕೊಂಡು ಬದುಕಿದ ಹಿರಿಯ ಚೇತನ ಪ್ರೊ॥ ಎಚ್ಚೆಲ್ಕೆ.

ಅವರು ಸಮಾಜದ ಅತ್ಯಂತ ಕಟ್ಟಕಡೆಯ ವ್ಯಕ್ತಿಯ ನೋವು, ಸಂಕಟಗಳನ್ನೂ ಕೊನೆಯಾಗಿಸುವ ನಿರಂತರ ಪ್ರಯತ್ನದಲ್ಲೇ ಅವರ ಇಡೀ ಬದುಕನ್ನು ಸಾರ್ಥಕವಾಗಿ ಕಳೆದರು. 'ಮಾರ್ಯಾದೆಗೇಡು ಹತ್ಯೆ'ಯಂತಹ ಸಮಸ್ಯೆಗಳು, ರೈತರ ಆತ್ಮಹತ್ಯೆಗಳಂತಹ ಬಿಕ್ಕಟ್ಟುಗಳ ಸಂದರ್ಭದಲ್ಲಿ ಸರ್ಕಾರದ ಮತ್ತು ಪಟ್ಟಭದ್ರ ಶಕ್ತಿಗಳ ನಿಲುವನ್ನು ಕಟುವಾಗಿ ಯಾವ ಅಳುಕೂ ಇಲ್ಲದೆ ಟೀಕಿಸಿದ್ದನ್ನು ನೋಡಿದ್ದೇನೆ. ಅದೇ ಸಮಯದಲ್ಲಿ ಸಮಾಜದೊಳಗಿನಿಂದಲೇ ಹುಟ್ಟಬೇಕಾದ ಪರ್ಯಾಯವಾದ ರಚನಾತ್ಮಕ ಚಿಂತನೆಗಳ ಮತ್ತು ಪ್ರಯತ್ನಗಳ ಬಗ್ಗೆಯೂ ಅಷ್ಟೇ ಒತ್ತಿನೊಂದಿಗೆ ಪ್ರಯೋಗಶೀಲರಾಗಿದ್ದರು. ಜನಸಾಮಾನ್ಯರ ಆಲೋಚನಾಕ್ರಮದಲ್ಲಿ ಬದಲಾವಣೆ ತರುವುದು ಸರ್ಕಾರದ ನೀತಿಗಳಲ್ಲಿ ಬದಲಾವಣೆ ತರುವುದರಷ್ಟೇ ಮುಖ್ಯ ಎಂದು ಗಟ್ಟಿಯಾಗಿ ನಂಬಿದ್ದರು ಮತ್ತು ಅದಕ್ಕಾಗಿ ಶ್ರಮಿಸಿದರು. ಅದೇ ಕಾರಣಕ್ಕೆ ೨೦೧೫ರಲ್ಲಿ ಮತ್ತೊಬ್ಬ ಎಳೆಯ ಬಾಲಕಿ ಮರ್ಯಾದೆಯ ಹೆಸರಿನಲ್ಲಿ ಜಾತಿ-ಲಿಂಗ-ಕ್ರೌರ್ಯಕ್ಕೆ ಬಲಿಯಾದಾಗ, ಅದಕ್ಕೆ ರಚನಾತ್ಮಕವಾಗಿ ಉತ್ತರ ಕೊಡಬೇಕೆಂದು ನಿರ್ಧರಿಸಿದರು. ಆ ಚಿಂತನೆಯಿಂದಲೇ ೨೦೧೫ರಲ್ಲಿ ಆರಂಭವಾದ ಪ್ರಯತ್ನ ಮಂಡ್ಯದಲ್ಲಿ ಬಹಳ ಯಶಸ್ವಿಯಾಗಿ, ವಿಶಿಷ್ಟವಾಗಿ 'ಜಾತಿಮುಕ್ತ ಮನಸ್ಸುಗಳ ಸಮ್ಮಿಲನ'ವಾಗಿ ರೂಪತಳೆಯಿತು.

ಅವರು ಸಾಮಾಜಿಕವಾಗಿ ತೊಡಗಿಕೊಂಡ ಕ್ಷೇತ್ರಗಳು ಹಲವಾರು. ಸಾಹಿತಿಯಾಗಿ, ಪತ್ರಕರ್ತರಾಗಿ, ಹೋರಾಟಗಾರರಾಗಿ ಅವರು ಸಕ್ರಿಯರಾಗಿದ್ದರು. ಮಂಡ್ಯದಲ್ಲಿ ದಲಿತ ಸಂಘರ್ಷ ಸಮಿತಿಯನ್ನು ಆರಂಭಿಸಿದ ಮೊದಲಿನ ದಿನಗಳಿಂದ ಹಿಡಿದು, ತಮ್ಮ ಕೊನೆಯ ದಿನಗಳವರೆಗೂ ನಿರಂತರವಾಗಿ ದಲಿತ ಚಳವಳಿಯೊಂದಿಗೆ ಸಂಪರ್ಕ ಹೊಂದಿದ್ದರು. ದಲಿತ, ರೈತ, ಮಹಿಳಾ ಚಳವಳಿಗಳಂತಹ ಜನಪರ ಹೋರಾಟಗಳಿಂದ ಹಿಡಿದು ಸಾಕ್ಷರತಾ ಆಂದೋಲನವನ್ನು ಪರಿಣಾಮಕಾರಿಯಾಗಿ ನಿರ್ವಹಿಸುವ ತನಕ ಪ್ರತಿಯೊಂದರಲ್ಲೂ ತಮ್ಮದೇ ಆದ ವಿಶಿಷ್ಟ ಚಿಂತನೆಗಳೊಂದಿಗೆ ತೊಡಗಿಕೊಳ್ಳುತ್ತಿದ್ದರು.

ಈ ಎಲ್ಲಾ ಪ್ರಯತ್ನಗಳ ಭಾಗವಾಗಿ ನಮ್ಮ 'ಕರ್ನಾಟಕ ಜನಶಕ್ತಿ' ಸಂಘಟನೆಯ ಜೊತೆಗೂ ಹತ್ತಿರದ ಒಡನಾಟ ಅವರಿಗೆ ಏರ್ಪಟ್ಟಿತ್ತು. ಸಾಮಾನ್ಯವಾಗಿ ಯಾವುದೇ ಚೌಕಟ್ಟುಗಳಿಗೆ ಸೀಮಿತರಾಗಲು ಒಪ್ಪದ ಅವರನ್ನು ಸಂಘಟನಾತ್ಮಕವಾದ ಜವಾಬ್ದಾರಿಯೊಂದನ್ನು ಹೊರಲು ಒಪ್ಪಿಸಲು ಅಳುಕುತ್ತಲೇ ಹೋಗಿದ್ದೆ. ಆದರೆ ಬಹಳ ವಿಶ್ವಾಸದಿಂದ ಮತ್ತು ಸಂತೋಷದಿಂದ ಕರ್ನಾಟಕ ಜನಶಕ್ತಿಯ ಅಧ್ಯಕ್ಷೀಯ ಮಂಡಳಿಯ ಭಾಗವಾಗಲು ಮತ್ತು ಮಂಡ್ಯ ಜಿಲ್ಲಾ ಗೌರವಾಧ್ಯಕ್ಷರಾಗಲು ಒಪ್ಪಿದರು. ಹೊಸ ತಲೆಮಾರಿನ ಪ್ರಾಮಾಣಿಕವಾದ ಹೊಸ ಪ್ರಯೋಗಗಳಿಗೆ ಇದೇ ರೀತಿ ಸದಾ ಬೆಂಬಲವಾಗಿ ನಿಂತವರು ಪ್ರೊ॥ ಎಚ್ಚೆಲ್ಕೆ .

ನಮ್ಮನ್ನು ನಮ್ಮ ಕರ್ತವ್ಯಗಳಿಂದ ಎಂತಹ ಕಡುಕಷ್ಟದ ಸಂದರ್ಭದಲ್ಲಿಯೂ ವಿಮುಖರಾಗದಂತೆ ಕಾಯುವ ಸಾಕ್ಷಿಪ್ರಜ್ಞೆ ಪ್ರೊ॥ ಎಚ್ಚೆಲ್ಕೆ. ಅವರ ಬದುಕಿದ ರೀತಿ ಮತ್ತು ಮೌಲ್ಯಗಳ ಕಾರಣಕ್ಕಾಗಿ ಸದಾ ನಮ್ಮನ್ನು ಎಚ್ಚರದಲ್ಲಿಡುತ್ತಾ ಹೊಸ ಸವಾಲುಗಳಿಗೆದುರಾಗಲು ಸನ್ನದ್ಧರಾಗಿಸುತ್ತಿದ್ದ ಶಕ್ತಿ ಪ್ರೊ॥ ಎಚ್ಚೆಲ್ಕೆ ಇನ್ನಿಲ್ಲ. ಇಂದು ಪ್ರೊ॥ ಎಚ್ಚೆಲ್ಕೆ ನನ್ನ ಪಾಲಿಗೆ ಕೇವಲ ನೆನಪಲ್ಲ. ಬದಲಿಗೆ ಕೆಲಸ ಮಾಡುವ ನಮ್ಮ ಕೈಕಾಲುಗಳಲ್ಲಿ ಬಲ ತುಂಬುವ ಪ್ರೇರಕಶಕ್ತಿ.

**ಮಲ್ಲಿಗೆ**
ಕರ್ನಾಟಕ ಜನಶಕ್ತಿ, ಮಂಡ್ಯ

# ಸಮಾಜವಾದ ಏಕೆ?

## -ಆಲ್ಬರ್ಟ್ ಐನ್‌ಸ್ಟೈನ್

(ಅನೇಕರು ಪರಿಭಾವಿಸಿರುವ ಪ್ರಕಾರ ಖ್ಯಾತ ಭೌತ ವಿಜ್ಞಾನಿ ಆಲ್ಬರ್ಟ್ ಐನ್‌ಸ್ಟೈನ್ ಈ ಜಗತ್ತು ಕಂಡ ಮಹಾನ್ ಮೇಧಾವಿಗಳಲ್ಲೊಬ್ಬರು. ಆದರೆ ಈತನ ಖ್ಯಾತಿ ಕೇವಲ ವಿಜ್ಞಾನ ಕ್ಷೇತ್ರಕ್ಕೆ ಸಂಬಂಧಪಟ್ಟದ್ದಲ್ಲ. ವಿಶ್ವ ಶಾಂತಿಗೆ ಇವರ ಕೊಡುಗೆ ಅಪಾರವಾದದ್ದು. ಕಲೆ, ಸಾಹಿತ್ಯ, ಸಂಗೀತ ಎಲ್ಲಕ್ಕೂ ತನ್ನನ್ನು ಗಾಢವಾಗಿ ತೆರೆದುಕೊಂಡಿದ್ದ ಈ ಮಹಾನ್ ಮಾನವತಾವಾದಿ ಅತ್ಯಂತ ಹೃದಯವಂತ ಸಹ. ಖಾಸಗಿ ಹಾಗೂ ಸಾರ್ವಜನಿಕ ಬದುಕಿನಲ್ಲಿ ಅತ್ಯುನ್ನತ ನೈತಿಕ ಮಟ್ಟವನ್ನೂ ಪ್ರದರ್ಶಿಸಿದವರು. ತನ್ನ ಕಾಲದ ಎಲ್ಲಾ ಸಮಸ್ಯೆಗಳಿಗೆ, ಸವಾಲುಗಳಿಗೆ ತೀವ್ರವಾಗಿ ಸ್ಪಂದಿಸಿದವರು. ಮಹಾಯುದ್ಧ ಹಾಗೂ ಜಾಗತಿಕ ಆರ್ಥಿಕ ಬಿಕ್ಕಟ್ಟನ್ನು ಕಂಡು ಅವುಗಳ ಕಾರಣಗಳನ್ನು ಶೋಧಿಸಲು ಯತ್ನಿಸಿದವರು.)

ಅನುವಾದ

**ಡಾ॥ ಬಿ. ಆರ್. ಮಂಜುನಾಥ್**

ಆರ್ಥಿಕ ಅಥವಾ ಸಾಮಾಜಿಕ ವಿಷಯಗಳಲ್ಲಿ ಪರಿಣತನಲ್ಲದಿರುವವನೊಬ್ಬ ಸಮಾಜವಾದ ಎಂಬ ವಿಷಯದ ಬಗ್ಗೆ ಅಭಿಪ್ರಾಯಗಳನ್ನು ಮಂಡಿಸುವುದು ಸರಿಯೇ ? ಅನೇಕ ಕಾರಣಗಳಿಂದಾಗಿ ನನಗೆ ಅಂಥ ಮಂಡನೆ ಸರಿ ಎಂದೇ ಅನಿಸುತ್ತದೆ.

ಮೊದಲಿಗೆ, ವೈಜ್ಞಾನಿಕ ತಿಳಿವಳಿಕೆಯ ದೃಷ್ಟಿಕೋನದಿಂದ ಈ ಪ್ರಶ್ನೆಯನ್ನು ಪರೀಕ್ಷೆಗೆ ಎತ್ತಿಕೊಳ್ಳೋಣ. ಖಗೋಳಶಾಸ್ತ್ರ ಹಾಗೂ ಅರ್ಥಶಾಸ್ತ್ರಗಳ ನಡುವೆ ಅಭ್ಯಾಸಕ್ರಮದಲ್ಲಿ ವ್ಯತ್ಯಾಸಗಳೇನೂ ಇಲ್ಲ ಎನ್ನಿಸಬಹುದು : ಎರಡೂ ಕ್ಷೇತ್ರಗಳಲ್ಲಿನ ವಿಜ್ಞಾನಿಗಳು ಒಂದು ಪರಿಧಿಯೊಳಗಿನ ಒಂದಿಷ್ಟು ವಿದ್ಯಮಾನಗಳ ಬಗ್ಗೆ ಸಾಮಾನ್ಯವಾಗಿ ಎಲ್ಲರೂ ಅಂಗೀಕರಿಸಬಹುದಾದ ನಿಯಮಗಳನ್ನು ಕಂಡುಹಿಡಿದು ತನ್ಮೂಲಕ ಈ ವಿದ್ಯಮಾನಗಳ ನಡುವೆ ಇರುವ ಸಂಬಂಧವನ್ನು ಸುಲಭವಾಗಿ ಅರ್ಥವಾಗುವಂತೆ ಪ್ರತಿಪಾದಿಸಲು ಯತ್ನಿಸುತ್ತಾರೆ. ಆದರೆ ನಿಜವಾಗಿ ಹೇಳಬೇಕೆಂದರೆ ಅಭ್ಯಾಸಕ್ರಮದಲ್ಲಿ ವ್ಯತ್ಯಾಸಗಳು ಇವೆ. ಅರ್ಥಶಾಸ್ತ್ರದ ಕ್ಷೇತ್ರದಲ್ಲಿ ಅಂಥ ನಿಯಮಗಳನ್ನು ಗುರುತಿಸುವುದು ಕಷ್ಟವಾಗುವುದೇಕೆಂದರೆ ನಾವು ಗಣನೆಗೆ ತೆಗೆದುಕೊಳ್ಳುವ ವಿವಿಧ ಆರ್ಥಿಕ ವಿದ್ಯಮಾನಗಳ ಮೇಲೆ ಪ್ರಭಾವ ಬೀರುವ ಅನೇಕ ಅಂಶಗಳನ್ನು ಪ್ರತ್ಯೇಕವಾಗಿ ನಿಷ್ಕರ್ಷೆ ಮಾಡುವುದು ಕಷ್ಟ. ಇದಲ್ಲದೆ, ಎಲ್ಲರಿಗೂ ಗೊತ್ತಿರುವ ಹಾಗೆ ನಾವು ನಾಗರಿಕ ಹಂತ ಎಂದು ಹೇಳುವ ಚಾರಿತ್ರಿಕ ಅವಧಿಯ ಕುರಿತು ಮೊದಲಿನಿಂದಲೂ ನಮಗೆ ದಕ್ಕಿರುವ ಅನುಭವದ ಮೇಲೆ ಪರಿಣಾಮ ಬೀರಿರುವ ಅಥವಾ ಅದಕ್ಕೆ ಮಿತಿ ಹೇರಿರುವ ಕಾರಣಗಳು ಸಂಪೂರ್ಣವಾಗಿ ಆರ್ಥಿಕ ರೀತಿಯವು ಎಂದು ಹೇಳಲೂ ಆಗುವುದಿಲ್ಲ. ಉದಾಹರಣೆಗೆ, ಇತಿಹಾಸದಲ್ಲಿ ಕಂಡುಬರುವ ಅನೇಕ



ಪ್ರಭುತ್ವಗಳು ಅಸ್ತಿತ್ವಕ್ಕೆ ಬಂದದ್ದೇ ಆಕ್ರಮಣಶೀಲ ಯುದ್ಧಗಳಿಂದ. ಗೆದ್ದ ಜನಾಂಗಗಳು ತಾವು ಗೆದ್ದ ಪ್ರದೇಶಗಳಲ್ಲಿ ತಮ್ಮನ್ನೇ ಆರ್ಥಿಕವಾಗಿ ಹಾಗೂ ಕಾನೂನಾತ್ಮಕವಾಗಿ ಸವಲತ್ತುಳ್ಳ ವರ್ಗಗಳಾಗಿ ಸ್ಥಾಪಿಸಿಕೊಂಡವು. ಇಂಥ ವರ್ಗಗಳು ಭೂಮಿಯ ಮೇಲೆ ತಮ್ಮ ಏಕಸ್ವಾಮ್ಯ ಆಧಿಪತ್ಯವನ್ನು ಸ್ಥಾಪಿಸಿಕೊಂಡವು ಹಾಗೂ ತಮ್ಮ ನಡುವಿನ ಜನರನ್ನೇ ಪುರೋಹಿತಶಾಹಿಯಾಗಿಯೂ ನೇಮಿಸಿಕೊಂಡವು. ಇಂಥ ಪುರೋಹಿತರು ಶಿಕ್ಷಣವನ್ನು ನಿಯಂತ್ರಿಸುತ್ತಾ, ಸಮಾಜದಲ್ಲಿನ ವರ್ಗವಿಭಜನೆಯನ್ನು ಶಾಶ್ವತವಾಗಿ ಸಂಸ್ಥೀಕರಿಸಿದರು ಹಾಗೂ ಒಂದು ಮೌಲ್ಯವ್ಯವಸ್ಥೆಗೆ ಜನ್ಮ ನೀಡಿ ತನ್ಮೂಲಕ ಆನಂತರದ ದಿನಗಳಲ್ಲಿ ಜನತೆಯ ಸಾಮಾಜಿಕ ವರ್ತನೆಯು ಬಹುತೇಕ ಅವರ ಅರಿವಿಗೆ ಬಾರದಂತೆ ತಮ್ಮ ಮಾರ್ಗಸೂಚಿಗೆ ಅನುಗುಣವಾಗಿ ನಡೆಯುವಂತೆ ನೋಡಿಕೊಂಡರು.

ಈ ಚಾರಿತ್ರಿಕ ಸಂಪ್ರದಾಯವು ಭೂತಕಾಲಕ್ಕೆ ಸಂಬಂಧಿಸಿದ್ದು ಎಂದುಕೊಂಡರೂ, ತೋರ್ಸ್ಟೆನ್ ವೆಬ್ಲೆನ್ ಹೇಳುವ ಹಾಗೆ ಮಾನವಜಾತಿಯ ಪ್ರಗತಿಯು ಎಲ್ಲಿಯೂ ಒಬ್ಬರನ್ನೊಬ್ಬರು ಬಡಿದು ತಿನ್ನುವ ಹಿಂಸೆ ಮೃಗಗಳ ಅವಸ್ಥೆಯಿಂದ ಮೇಲೆ ಬಂದೇ ಇಲ್ಲ. ನಾವು ಗಣನೆಗೆ ತೆಗೆದುಕೊಳ್ಳಬಹುದಾದ ಆರ್ಥಿಕ ದತ್ತಾಂಶಗಳು ಹಾಗೂ ಅವುಗಳ ಮೂಲಕ ರಚಿಸಿಕೊಳ್ಳಬಹುದಾದ ಆರ್ಥಿಕ ನಿಯಮಗಳು ಉಳಿದ ಹಂತಗಳಿಗೆ ಅನ್ವಯವಾಗುವುದೂ ಇಲ್ಲ. ಸಮಾಜವಾದದ ನಿಜವಾದ ಉದ್ದೇಶವು ಮಾನವ ಸಮಾಜವನ್ನು ಹೀಗೆ ಒಬ್ಬರು ಇನ್ನೊಬ್ಬರನ್ನು ಬಡಿದು ತಿನ್ನುವ ಹಂತದಿಂದ ಮೇಲಿನ ಹಂತಕ್ಕೆ ಅಭಿವೃದ್ಧಿ ಹೊಂದುವಂತೆ ಮಾಡುವುದೇ ಆಗಿರುವುದರಿಂದ, ಅರ್ಥಶಾಸ್ತ್ರವು ಈಗಿರುವ ರೀತಿಗಳಲ್ಲಿ ಭವಿಷ್ಯದ ಸಮಾಜವಾದಿ ವ್ಯವಸ್ಥೆಯ ಮೇಲೆ ಬೆಳಕು ಚೆಲ್ಲುವುದು ಕಷ್ಟ.

ಎರಡನೆಯದಾಗಿ, ಸಮಾಜವಾದವು ಒಂದು ಸಾಮಾಜಿಕ ನೈತಿಕ ಗುರಿಗಾಗಿ ಶ್ರಮಿಸುತ್ತಿದೆ. ಆದರೆ ವಿಜ್ಞಾನವು ಅಂಥ ಗುರಿಗಳನ್ನು ನಿರ್ಮಿಸಿಕೊಳ್ಳಲಾರದು ಹಾಗೂ ಅಂಥ ಗುರಿಗಳನ್ನು ಮನುಷ್ಯರಲ್ಲಿ ಮೂಡಿಸಲಾರದು. ವಿಜ್ಞಾನವು ಹೆಚ್ಚೆಂದರೆ ಅಂಥ ಗುರಿಗಳನ್ನು ತಲುಪಲು ಸಾಧನಗಳನ್ನು ನೀಡಬಲ್ಲದು, ಅಷ್ಟೆ. ಆದರೆ ಇಂಥ ಗುರಿಗಳನ್ನು ಉದಾತ್ತ ಮತ್ತು ನೈತಿಕ ಆದರ್ಶಗಳನ್ನು ಹೊಂದಿದ ವ್ಯಕ್ತಿಗಳು ರೂಪಿಸಬಲ್ಲರು ಮತ್ತು ಆ ಗುರಿಗಳು ನಿರ್ಜೀವ ಗೊಂಬೆಗಳಾಗದೆ ಚೈತನ್ಯಪೂರ್ಣವೂ, ಸತ್ವವುಳ್ಳವೂ ಆಗಿದ್ದರೆ, ಅವುಗಳನ್ನು ವಿಶಾಲ ಜನಸ್ತೋಮವು ತನ್ನದಾಗಿಸಿಕೊಂಡು ಮುಂದೊಯ್ಯಲು ಸಾಧ್ಯವಾದರೆ ಆಗ ಆ ಜನತೆಯೇ ಒಂದು ಮಟ್ಟಿಗೆ ಪ್ರಜ್ಞಾಪೂರ್ವಕವಾಗಿಯೂ ಒಂದು ಮಟ್ಟಿಗೆ ಸಹಜ ಪ್ರಕ್ರಿಯೆಯಾಗಿಯೂ ಕ್ರಮೇಣ ಸಮಾಜದ ವಿಕಾಸವನ್ನು ನಿರ್ಣಯಿಸುತ್ತದೆ.

ಆದ್ದರಿಂದಲೇ ಮನುಷ್ಯನ ಬದುಕಿಗೆ ಸಂಬಂಧಿಸಿದ ಪ್ರಶ್ನೆಗಳನ್ನು ಚರ್ಚಿಸುವಾಗ ನಾವು ವಿಜ್ಞಾನ ಹಾಗೂ ವೈಜ್ಞಾನಿಕ ವಿಧಾನಗಳ ಪಾತ್ರವನ್ನು ಉತ್ಪ್ರೇಕ್ಷಿಸಿ ನೋಡಲಾಗದು ಮತ್ತು ಅದೇ ಕಾರಣದಿಂದಾಗಿಯೇ ಸಮಾಜದ ರಚನೆಗೆ ಸಂಬಂಧಿಸಿದ ವಿಷಯಗಳಿಗೆ ಕುರಿತಾದಂತೆ ಅಭಿಪ್ರಾಯ ವ್ಯಕ್ತಪಡಿಸುವ ಹಕ್ಕು ಇರುವುದು ಕೇವಲ ವಿಷಯ ಪರಿಣತರಿಗೆ ಮಾತ್ರ ಎಂದು ಭಾವಿಸಲೂಬಾರದು.

ಮಾನವ ಸಮಾಜ ಬಿಕ್ಕಟ್ಟಿಗೆ ಸಿಲುಕಿಕೊಂಡಿದೆ ಹಾಗೂ ಅದರ ಸುಭದ್ರತೆಯೇ ತೀವ್ರವಾಗಿ ನುಚ್ಚುನೂರಾಗಿದೆ ಎಂದು ಅಸಂಖ್ಯಾತ ದನಿಗಳು ಈಚಿನ ದಿನಗಳಲ್ಲಿ ಘಂಟಾಘೋಷವಾಗಿ ಒತ್ತಿಹೇಳುತ್ತಿವೆ. ಇಂಥ ಸಂದರ್ಭಗಳಲ್ಲಿ ವ್ಯಕ್ತಿಗಳು ತಾವು ಸೇರಿರುವ ಸಣ್ಣದಾದ ಅಥವಾ ವಿಶಾಲವೇ ಆದ ಜನಸಮುದಾಯದ ಬಗ್ಗೆ ನಿರ್ಲಿಪ್ತರಾಗುವುದು ಅಥವಾ ದ್ವೇಷವನ್ನು ಸಾಧಿಸುವುದು ಸಹಜವೇ. ನನ್ನ ಈ ಮಾತನ್ನು ಸ್ಪಷ್ಟಗೊಳಿಸಲು ನಾನು ನನ್ನದೇ ಆದ ಒಂದು ಅನುಭವವನ್ನು ವರ್ಣಿಸಲು ಇಷ್ಟಪಡುತ್ತೇನೆ. ಇತ್ತೀಚೆಗೆ ನಾನು ಒಬ್ಬ ಬುದ್ಧಿವಂತರೂ ಸಾಮಾಜಿಕ ಸ್ಥಾನಮಾನ ಹೊಂದಿದವರೂ ಆದ ವ್ಯಕ್ತಿಯೊಬ್ಬರೊಡನೆ ಮನುಕುಲದ ಅಸ್ತಿತ್ವಕ್ಕೇ ಸಂಚಕಾರ ತರಬಹುದಾದ ಇನ್ನೊಂದು ವಿಶ್ವಯುದ್ಧದ ಅಪಾಯದ ಬಗ್ಗೆ ಚರ್ಚಿಸುತ್ತಾ ಅಂಥ ವಿನಾಶದಿಂದ ರಕ್ಷಿಸಿಕೊಳ್ಳಲು ರಾಷ್ಟ್ರಾತೀತವಾದ ವಿಶ್ವಸಂಘಟನೆಯೊಂದರ ಅವಶ್ಯಕತೆಯ ಬಗ್ಗೆ ಪ್ರಸ್ತಾಪಿಸಿದೆ. ಇದನ್ನು ಕೇಳಿಸಿಕೊಂಡ, ನನ್ನನ್ನು ಭೇಟಿ ಮಾಡಲು ಬಂದಿದ್ದ ಆತ ತಣ್ಣಗೆ ಹೀಗೆಂದರು: "ಮನುಕುಲ ನಿರ್ನಾಮವಾಗುವುದರ ಕುರಿತು ನೀನಾದರೂ ಏಕೆ ಅಷ್ಟು ತೀವ್ರವಾಗಿ ವಿರುದ್ಧವಾಗಿರಬೇಕು ?"

ಕೇವಲ ಒಂದು ಶತಮಾನದಷ್ಟು ಹಿಂದೆ ಸಹ ಇಂಥ ಒಂದು ಹೇಳಿಕೆಯನ್ನು ಅಷ್ಟು ಹಗುರವಾಗಿ ಮಾಡುತ್ತಿರಲಿಲ್ಲ ಎಂದು ನನಗೆ ಗೊತ್ತು. ತನ್ನೊಳಗೇ ಒಂದು ರೀತಿಯ ಮಾನಸಿಕ ಸಮತೋಲನವನ್ನು ಸಾಧಿಸಿಕೊಳ್ಳಲು ಯತ್ನಿಸಿ ವಿಫಲನಾಗಿ ಹೆಚ್ಚು ಕಮ್ಮಿ ಅದರಲ್ಲಿ ಗೆಲ್ಲಬಹುದು ಎಂಬ ನಂಬಿಕೆಯನ್ನು ಕಳೆದುಕೊಂಡಂಥ ವ್ಯಕ್ತಿಯ ಮಾತು ಅದು. ಇಂದಿನ ದಿನಗಳಲ್ಲಿ ಅತ್ಯಂತ ನೋವಿನ ನೀರವತೆಯನ್ನು, ಏಕಾಂತವನ್ನು ಯಾತನೆಯಿಂದ ಅನುಭವಿಸುತ್ತಿರುವವರ ಅಭಿವ್ಯಕ್ತಿ ಅದು. ಇದಕ್ಕೆ ಕಾರಣವಾದರೂ ಏನು ? ಇದರಿಂದ ಬಿಡುಗಡೆ ಹೊಂದುವ ದಾರಿಯಾದರೂ ಇದೆಯೇ ?

ಇಂಥ ಪ್ರಶ್ನೆಗಳನ್ನು ಎತ್ತುವುದು ಸುಲಭ. ಆದರೆ ಯಾವುದೇ ಮಟ್ಟದ ಖಚಿತತೆಯಿಂದ ಉತ್ತರಿಸುವುದು ಕಷ್ಟ. ನಮ್ಮ ಭಾವನೆಗಳು ಹಾಗೂ ಆಶಯಗಳು ಎಷ್ಟೋ ಬಾರಿ ದ್ವಂದ್ವಗಳಿಂದ ಕೂಡಿರುತ್ತವೆ ಹಾಗೂ ಅಸ್ಪಷ್ಟವಾಗಿರುತ್ತವೆ. ಅವುಗಳನ್ನು ಸರಳ ಮತ್ತು ಸುಲಭವಾದ ಸೂತ್ರಗಳ ಮೂಲಕ ಅಭಿವ್ಯಕ್ತಿಸಲು ಸಾಧ್ಯವಾಗುವುದಿಲ್ಲ ಎಂಬ ಅರಿವಿದ್ದರೂ ಸಹ ನಾನು ಈ ಪ್ರಶ್ನೆಗಳನ್ನು ಉತ್ತರಿಸಲು ಯತ್ನಿಸುತ್ತೇನೆ.

ಮನುಷ್ಯ ಏಕಕಾಲದಲ್ಲಿಯೇ ಒಂಟಿಜೀವಿಯೂ ಹೌದು, ಸಂಘ (ಸಮಾಜ)ಜೀವಿಯೂ ಹೌದು. ಆತ ಏಕಾಂಗಿಯಾಗಿದ್ದಾಗ ತನ್ನ ಹಾಗೂ ತನಗೆ ಹತ್ತಿರದವರ ಅಸ್ತಿತ್ವವನ್ನು ರಕ್ಷಿಸಿಕೊಳ್ಳಲು, ತನ್ನ ವ್ಯಕ್ತಿಗತ ಆಕಾಂಕ್ಷೆಗಳನ್ನು ಪೂರೈಸಿಕೊಳ್ಳಲು ಹಾಗೂ ತನ್ನ ಅಂತರ್ಗತ ಸಾಮರ್ಥ್ಯಗಳನ್ನು ಅಭಿವೃದ್ಧಿಪಡಿಸಿಕೊಳ್ಳಲು ಯತ್ನಿಸುತ್ತಿರುತ್ತಾನೆ. ಸಮಾಜ ಜೀವಿಯ ಮಟ್ಟದಲ್ಲಾದರೆ ಅವನು ತನ್ನ ಸಹಜೀವಿಗಳ ಮನ್ನಣೆ ಹಾಗೂ ಪ್ರೀತಿಯನ್ನು ಗಳಿಸಿಕೊಳ್ಳಲು, ಅವರ ದುಃಖ ದುಮ್ಮಾನಗಳಿಗೆ ಸಾಂತ್ವನ ನೀಡಲು, ಅವರೆಲ್ಲರ ಬದುಕಿನ ಸ್ಥಿತಿಗತಿಯನ್ನು ಉತ್ತಮಪಡಿಸಲು ಯತ್ನಿಸುತ್ತಿರುತ್ತಾನೆ. ಈ ವಿಭಿನ್ನ ಹಾಗೂ ಅನೇಕ ಬಾರಿ ಪರಸ್ಪರ ಘರ್ಷಣೆಗೆ ಬರುವ ಆಶಯಗಳೇ ಮನುಷ್ಯನ ವಿಶೇಷ ಗುಣಗಳಿಗೆ ಕಾರಣವಾಗಿವೆ ಮತ್ತು ಈ ವಿರುದ್ಧ ಆಶಯಗಳು ಯಾವ ವಿಶಿಷ್ಟ ರೀತಿಯಲ್ಲಿ ಒಂದರೊಂದಿಗೆ ಇನ್ನೊಂದು ಸಮ್ಮಿಳಿತವಾಗಿರುತ್ತವೆ ಎಂಬುದು ಒಬ್ಬ ವ್ಯಕ್ತಿಯ ಆಂತರಿಕ ಸಮತೋಲನದ ಪ್ರಮಾಣವನ್ನು ಹಾಗೂ ಆತ ಸಮಾಜದ ಒಳಿತಿಗೆ ಏನು ಕೊಡುಗೆ ನೀಡಬಹುದೆಂಬುದನ್ನು ನಿರ್ಣಯಿಸುತ್ತದೆ. ಈ ಎರಡು ಪ್ರಚೋದಕ ಆಶಯಗಳ ಸಾಪೇಕ್ಷ ಸಾಮರ್ಥ್ಯಗಳನ್ನು ಪ್ರಾಯಶಃ ಆನುವಂಶಿಕ ಗುಣಗಳು ನಿಗದಿಪಡಿಸಬಹುದು. ಆದರೆ ಅಂತಿಮವಾಗಿ ಎಂಥ ವ್ಯಕ್ತಿತ್ವವು ಆಕಾರ ಪಡೆಯುತ್ತದೆ ಎಂಬುದನ್ನು ನಿರ್ಧರಿಸುವುದು ಪ್ರಮುಖವಾಗಿ ಒಬ್ಬ ಮನುಷ್ಯ ತನ್ನ ಬೆಳವಣಿಗೆಯ ಸಂದರ್ಭದಲ್ಲಿ ಎಂಥ ಪರಿಸರವನ್ನು ಹೊಂದಿರುತ್ತಾನೆ, ಅವನು ಬೆಳೆಯುವ ಸಮಾಜದ ರಚನೆ, ಆ ಸಮಾಜದಲ್ಲಿ ಇರತಕ್ಕಂಥ ರೂಢಿ, ಸಂಪ್ರದಾಯಗಳು ಮತ್ತು ಅವು ಯಾವ ಯಾವ ವರ್ತನೆಗೆ ಹೇಗೆ ಬೆಲೆ ಕಟ್ಟುತ್ತವೆ ಎಂಬಂತಹ ಅಂಶಗಳು.

ಒಬ್ಬ ಮಾನವ ವ್ಯಕ್ತಿಗೆ ಸಂಬಂಧಿಸಿದಂತೆ ಹೇಳಬೇಕೆಂದರೆ, ಸಮಾಜ ಎಂಬ ಅಮೂರ್ತ ಪರಿಕಲ್ಪನೆಯ ಅರ್ಥ, ಆತ ತನ್ನ ಸಮಕಾಲೀನರೊಂದಿಗೆ ಮತ್ತು ತನ್ನ ಹಿಂದಿನ ತಲೆಮಾರಿನ ಎಲ್ಲ ಜನರೊಂದಿಗೆ ಹೊಂದಿರುವ ಪ್ರತ್ಯಕ್ಷ ಹಾಗೂ ಪರೋಕ್ಷ ಸಂಬಂಧಗಳೆಲ್ಲದರ ಮೊತ್ತ. ಒಬ್ಬ ಮನುಷ್ಯ ವೈಯಕ್ತಿಕ ಮಟ್ಟದಲ್ಲಿ ಆಲೋಚಿಸಬಹುದು, ಭಾವನೆಗಳನ್ನು ಅನುಭವಿಸಬಹುದು, ಪ್ರಯತ್ನಿಸಬಹುದು, ದುಡಿಯಬಹುದು, ಆದರೆ ಅವನು ಭೌತಿಕ, ಬೌದ್ಧಿಕ ಹಾಗೂ ಭಾವನಾತ್ಮಕ ಅಸ್ತಿತ್ವಕ್ಕಾಗಿ ಸಮಾಜದ ಮೇಲೆ ಎಷ್ಟೊಂದು ಅವಲಂಬಿತನಾಗಿರುತ್ತಾನೆಂದರೆ ಸಮಾಜದ ಚೌಕಟ್ಟಿನಿಂದ ಹೊರಗೆ ಅವನ ಕುರಿತು ಯೋಚಿಸುವುದಾಗಲಿ, ಅವನನ್ನು ಅರ್ಥಮಾಡಿಕೊಳ್ಳುವುದಾಗಲಿ ಸಾಧ್ಯವೇ ಇಲ್ಲ. ಮನುಷ್ಯನಿಗೆ ಆಹಾರ, ಬಟ್ಟೆ, ಮನೆ, ದುಡಿಮೆಯ ಉಪಕರಣಗಳು, ಭಾಷೆ ಮತ್ತು ಬಹುಪಾಲು ಅವನ ಚಿಂತನೆಗೆ ವಸ್ತುವನ್ನು ಒದಗಿಸುವುದು 'ಸಮಾಜವೇ'; ಅವನ ಬದುಕು ಸಾಧ್ಯವಾಗಿರುವುದೇ 'ಸಮಾಜ' ಎಂಬ ಒಂದು ಸಣ್ಣ ಪದದ ಹಿಂದೆ ಅಡಗಿರುವ ಇಂದಿನ ಹಾಗೂ ಹಿಂದಿನ ಮಿಲಿಯಾಂತರ ಜನರ ಶ್ರಮ ಹಾಗೂ ಸಾಧನೆ.

ಆದ್ದರಿಂದಲೇ ವ್ಯಕ್ತಿಯು ಸಮಾಜದ ಮೇಲೆ ಅವಲಂಬಿತ ಎಂಬುದು ಇರುವೆಗಳ, ಜೇನ್ನೊಣಗಳ ಬದುಕಿನಲ್ಲಿ ಇದ್ದಂತೆಯೇ ನಿಸರ್ಗಸಹಜ ವಾಸ್ತವಾಂಶ, ಅದನ್ನು ಅಲ್ಲಗಳೆಯಲಾಗದು ಎಂಬುದು ಸ್ವಯಂವೇದ್ಯ. ಆದರೆ ಇರುವೆಗಳ ಹಾಗೂ ಜೇನ್ನೊಣಗಳ ಇಡಿಯ ಬದುಕಿನ ಪ್ರಕ್ರಿಯೆಯೇ ಪೂರ್ವನಿಶ್ಚಿತವಾಗಿದ್ದು, ಒಂದು ಸಣ್ಣ ಸಣ್ಣ ವಿವರವೂ ಬದಲಾವಣೆಗೆ ಒಗ್ಗದಷ್ಟು

ಅತ್ಯಂತ ಗಡುಸಾಗಿದ್ದು, ಆನುವಂಶಿಕ ಮೂಲಪ್ರವೃತ್ತಿಗೆ ಒಳಪಟ್ಟಿರುತ್ತದೆ. ಆದರೆ ಮಾನವಜೀವಿಗಳ ಸಾಮಾಜಿಕ ರಚನೆಯ ವಿನ್ಯಾಸಗಳು ಹಾಗೂ ಅವರೊಳಗಿನ ಅಂಥ ಸಂಬಂಧಗಳು ವಿವಿಧ ರೀತಿಯವಾಗಿರುತ್ತವೆ ಹಾಗೂ ಬದಲಾವಣೆಗೆ ಒಗ್ಗಿಕೊಳ್ಳುತ್ತವೆ. ನೆನಪಿನ ಶಕ್ತಿ, ಹೊಸ ಸಂಯೋಜನೆಗಳನ್ನು ನಿರ್ಮಿಸುವ ಸಾಮರ್ಥ್ಯ, ಬಾಯಿಮಾತಿನ ಮೂಲಕ ಸಂವಹನ ಮಾಡಬಲ್ಲ ನಿಸರ್ಗದತ್ತ ಕೊಡುಗೆ ಇವೆಲ್ಲ ಕೇವಲ ನೈಸರ್ಗಿಕ ಮೂಲ ಪ್ರವೃತ್ತಿಗಳಲ್ಲ ಮತ್ತು ಇವೇ ಮನುಷ್ಯರಲ್ಲಿ ಅಭಿವೃದ್ಧಿ ಹಾಗೂ ಬದಲಾವಣೆಯ ಸಾಧ್ಯತೆಗಳನ್ನು ತೆರೆದಿಟ್ಟಿವೆ. ಇಂಥ ಅಭಿವೃದ್ಧಿಗಳು ರೂಢಿಗಳಾಗಿ, ಸಂಸ್ಥೆಗಳಾಗಿ, ಸಂಘಟನೆಗಳಾಗಿ, ನಮಗೆ ಗೋಚರವಾಗುತ್ತವೆ ಹಾಗೂ ಸಾಹಿತ್ಯ, ವಿಜ್ಞಾನ, ತಾಂತ್ರಿಕ ಮಹತ್ಸಾಧನೆಗಳಲ್ಲಿಯೂ ವ್ಯಕ್ತವಾಗಿವೆ. ಮನುಷ್ಯ ಹೇಗೆ ತನ್ನ ಬದುಕನ್ನು ತಾನೇ ಸ್ವಂತ ಕ್ರಿಯಾಶೀಲತೆಯಿಂದ ಬದಲಾಯಿಸಿಕೊಳ್ಳುತ್ತಾನೆ ಮತ್ತು ಈ ಪ್ರಕ್ರಿಯೆಯಲ್ಲಿ ಅವನ ಪ್ರಜ್ಞಾವಂತ ಚಿಂತನೆ ಹಾಗೂ ಹಾತೊರಿಕೆ ಒಂದು ಪಾತ್ರವನ್ನು ಬೀರುತ್ತದೆ ಎಂಬುದನ್ನು ಇದು ವಿವರಿಸುತ್ತದೆ.

## ವಾಸ್ತವ

ಹೆಂಡತಿ ಬಯ್ದಳು
ಒಂದು ಬೆಳಗ್ಗೆ ಹೋಗಿದ್ದೀರಿ
ಮನೆಯ ನೆನಪು
ಈಗ ಬಂತಾ?
ನೊಂದು ಹೇಳಿದ ಗಂಡ
ಬರಲಿಲ್ಲ ಕಣೇ ಇನ್ನೂ
ಎರಡು ಸಾವಿರದ ನೋಟು
ಕಾದು ಕಾದು
ಸುಸ್ತಾಗಿ ಬಂದೆ !

**ಕಾಸರಗೋಡು ಅಶೋಕ್ ಕುಮಾರ್**
ಮಂಗಳೂರು ೫೭೫ ೦೦೮

ಹುಟ್ಟುವಾಗಲೇ ಮನುಷ್ಯನು ಆನುವಂಶಿಕತೆಯ ಮೂಲಕ ಮಾನವ ಪ್ರಭೇದಕ್ಕೆ ವಿಶಿಷ್ಟವಾದ ಸಹಜ ತೃಷೆಗಳನ್ನೂ ಹಾಗೂ ನಾವು ಬದಲಾಯಿಸಲಿಕ್ಕೆ ಅಸಾಧ್ಯವಾದ ಸ್ಥಿರವಾದ ಒಂದು ಜೈವಿಕ ಶರೀರ ಸ್ವಭಾವವನ್ನೂ ಪಡೆದುಕೊಂಡಿರುತ್ತಾನೆ. ಇದರ ಜೊತೆಗೆ ತನ್ನ ಜೀವಿತ ಕಾಲದಲ್ಲಿ ಸಮಾಜದೊಂದಿಗಿನ ಸಂವಹನ ಮತ್ತು ಇತರ ಅನೇಕ ಪ್ರಭಾವಗಳ ಮೂಲಕ ಒಂದು ಸಾಂಸ್ಕೃತಿಕ ಸ್ವಭಾವವನ್ನು ಅವನು ದೊರಕಿಸಿಕೊಳ್ಳುತ್ತಾನೆ. ಕಾಲ ಕಳೆದಂತೆ ಬದಲಾವಣೆಗೆ ಪಕ್ಕಾಗಿರುವ ಈ ಸಾಂಸ್ಕೃತಿಕ ಸ್ವಭಾವವೇ ವ್ಯಕ್ತಿ ಹಾಗೂ ಸಮಾಜದ ಮಧ್ಯದ ಸಂಬಂಧವನ್ನು ಬಹುಮಟ್ಟಿಗೆ ನಿರ್ಣಯಿಸುತ್ತದೆ. ಆಧುನಿಕ ಮಾನವಶಾಸ್ತ್ರವು ಆದಿಮ ಎಂದು ಕರೆಯಲ್ಪಟ್ಟಿರುವ ಬುಡಕಟ್ಟು ಸಂಸ್ಕೃತಿಗಳ ತೌಲನಿಕ ಶೋಧನೆಯ ಮೂಲಕ ನಮ್ಮ ಅರಿವಿಗೆ ತಂದಿರುವಂತೆ ಯಾವುದೇ ಸಮಾಜದಲ್ಲಿ ಪ್ರಧಾನವಾಗಿರುವ ಸಂಘಟನಾ ರಚನೆಯ ಮಾದರಿಗಳು ಹಾಗೂ ಸಾಂಸ್ಕೃತಿಕ ರೀತಿನೀತಿಗಳಿಗೆ ಅನುಗುಣವಾಗಿ ಮನುಷ್ಯರ ಸಾಮಾಜಿಕ ವರ್ತನೆಗಳು ವಿಭಿನ್ನವಾಗಿರುತ್ತವೆ. ಯಾರು ಮನುಷ್ಯರ ಜೀವನ ರೀತಿಯನ್ನು ಉತ್ತಮಪಡಿಸಬೇಕು ಎಂದು ಯತ್ನಿಸುತ್ತಿರುವರೋ ಅವರು ಈ ವಾಸ್ತವಿಕತೆಯ ನೆಲೆಯ ಮೇಲೆ ತಮ್ಮ ಭರವಸೆಯನ್ನು ಭದ್ರವಾಗಿರಿಸಿಕೊಳ್ಳಬಹುದು. ಏಕೆಂದರೆ ಮನುಷ್ಯರು ತಮ್ಮ ಜೈವಿಕ ಸ್ವಭಾವದ ಕಾರಣದಿಂದ ತಾವು ಒಬ್ಬರನ್ನೊಬ್ಬರು ನಾಶಪಡಿಸಿಕೊಳ್ಳಲಿಕ್ಕಾಗಲಿ ಅಥವಾ ಒಂದು ಸ್ವಯಂಪ್ರೇರಿತ ಕ್ರೂರ ಭವಿತವ್ಯಕ್ಕೆ ಶರಣಾಗಿ ಬದುಕಲಿಕ್ಕಾಗಲಿ ವಿಧಿಬದ್ಧರಲ್ಲ.

ಮಾನವನ ಬದುಕು ಸಾಧ್ಯವಾದ ಮಟ್ಟಿಗೆ ತೃಪ್ತಿಕರವಾಗಿರಲು ನಾವು ಸಮಾಜದ ರಚನೆಯನ್ನು ಹಾಗೂ ಮನುಷ್ಯನ ಸಾಂಸ್ಕೃತಿಕ ಧೋರಣೆಯನ್ನು ಯಾವ ರೀತಿಯಲ್ಲಿ ಬದಲಾಯಿಸಬೇಕು ಎಂದು ನಮ್ಮನ್ನು ನಾವು ಕೇಳಿಕೊಂಡಾಗ, ನಾವು ಕೆಲವೊಂದು ಪರಿಸ್ಥಿತಿಗಳನ್ನು ಬದಲಾಯಿಸಲು ಅಸಮರ್ಥರಾಗಿದ್ದೇವೆ ಎಂಬುದರ ಬಗ್ಗೆ ಸದಾ ಅರಿವನ್ನು ಹೊಂದಿರಬೇಕಾಗುತ್ತದೆ. ಈ ಮೊದಲೇ ಚರ್ಚಿಸಿದಂತೆ ಮನುಷ್ಯನ ಜೈವಿಕ ಸ್ವಭಾವವನ್ನು ಬದಲಾಯಿಸುವುದು ಸಾಧ್ಯವಿಲ್ಲ. ಇದಲ್ಲದೆ, ತಂತ್ರಜ್ಞಾನ ಹಾಗೂ ಜನಸಂಖ್ಯೆಯ ಸಾಂದ್ರತೆ ಇತ್ಯಾದಿಗಳಲ್ಲಿ ಕಳೆದ ಕೆಲವು ಶತಮಾನಗಳಲ್ಲಿ ಆಗಿರುವ ಬದಲಾವಣೆಗಳು ನಾವು ಅಲ್ಲಗಳೆಯಲಾಗದಂಥವು.

ನನ್ನ ಪ್ರಕಾರ ನಮ್ಮ ಕಾಲದ ಬಿಕ್ಕಟ್ಟಿನ ತಿರುಳು ಏನು ಎಂಬುದನ್ನು ಸಂಕ್ಷಿಪ್ತವಾಗಿ ಮಂಡಿಸುವ ಹಂತಕ್ಕೆ ನಾನೀಗ ತಲುಪಿದ್ದೇನೆ. ವ್ಯಕ್ತಿ ಮತ್ತು ಸಮಾಜದ ಮಧ್ಯದ ಸಂಬಂಧವನ್ನು ಅದು ಸುತ್ತುವರಿದಿದೆ. ಸಮಾಜದ ಮೇಲೆ ತಾನೆಷ್ಟು ಅವಲಂಬಿತನಾಗಿದ್ದೇನೆ ಎಂಬುದು ವ್ಯಕ್ತಿಗೆ ಹಿಂದೆಂದಿಗಿಂತಲೂ ಈಗ ಅರಿವಿಗೆ ಬಂದಿದೆ. ಆದರೆ ಆತ ಈ ಅವಲಂಬನೆ ಒಂದು ಧನಾತ್ಮಕ ಗಳಿಕೆ, ಒಂದು ಸಾವಯವ ಬಂಧನ, ಒಂದು ರಕ್ಷಣೆ ನೀಡಬಲ್ಲ ಶಕ್ತಿ ಎಂದುಕೊಳ್ಳದೆ ಅದೊಂದು ತನ್ನ ಸಹಜ ಹಕ್ಕುಗಳಿಗೆ ಒದಗಿದ ಸಂಚಕಾರ ಅಥವಾ ತನ್ನ ಆರ್ಥಿಕ ಭದ್ರತೆಗೇ ಅಪಾಯ ತಂದೊಡ್ಡುವಂಥದ್ದು ಎಂದೇ ಭಾವಿಸುವಂತಾಗಿದೆ. ಇಷ್ಟೇ ಅಲ್ಲದೆ, ಸಮಾಜದಲ್ಲಿ ಅವನ ಸ್ಥಾನಮಾನ ಹೇಗಿದೆ ಎಂದರೆ ಅವನ ಸ್ವಭಾವದಲ್ಲಿನ ಸ್ವಹಿತಾಸಕ್ತಿಯ ಪ್ರಚೋದಕಗಳು ಸತತವಾಗಿ ತೀಕ್ಷ್ಣಗೊಳ್ಳುತ್ತಿವೆ ಮತ್ತು ಅದೇ ಸಮಯದಲ್ಲಿ ಸಹಜವಾಗಿಯೇ ದುರ್ಬಲವಾದ ಅವನ ಸಾಮಾಜಿಕ ಆದರ್ಶದ ಪ್ರಚೋದಕಗಳು ನಿರಂತರವಾಗಿ ನಿಶ್ಶಕ್ತವಾಗುತ್ತಿವೆ. ಅವರವರ ಸಾಮಾಜಿಕ ಸ್ಥಾನಮಾನಗಳೇನೇ ಇರಲಿ ಎಲ್ಲ ಮನುಷ್ಯರೂ ಈ ಕೊಳೆತ, ಅಧಃಪತನದ ಪ್ರಕ್ರಿಯೆಗೆ ಒಳಗಾಗುತ್ತಲೇ ಇದ್ದಾರೆ. ತಮ್ಮ ತಮ್ಮ ಅಹಂಕಾರಕ್ಕೆ ಬಂಧಿಗಳಾದ ಇವರೆಲ್ಲರೂ ಹೆಚ್ಚು ಹೆಚ್ಚು ಅಭದ್ರತೆಗೆ, ಏಕಾಂಗಿತನಕ್ಕೆ ಸಿಕ್ಕಿಕೊಂಡು ಬಳಲುತ್ತಾ ಮುಗ್ಧವೂ, ಸರಳವೂ, ಸಹಜವೂ ಆದ ಜೀವನದ ಸುಖಾನುಭವದಿಂದ ವಂಚಿತರಾಗಿದ್ದಾರೆ. ಸಮಾಜಕ್ಕೆ ತನ್ನನ್ನು ಸಮರ್ಪಿಸಿಕೊಳ್ಳುವ ಮೂಲಕ ಮಾತ್ರ ಮನುಷ್ಯ ತನ್ನ ಅಲ್ಪಾವಧಿಯ, ಸದಾ ಗಂಡಾಂತರದಲ್ಲಿರುವ ಬದುಕಿಗೆ ಅರ್ಥ ಕಂಡುಕೊಳ್ಳಬಹುದು.

ಈ ಕೆಡುಕಿನ ಮೂಲವಿರುವುದು ಇಂದು ಅಸ್ತಿತ್ವದಲ್ಲಿರುವ ಬಂಡವಾಳಶಾಹಿ ವ್ಯವಸ್ಥೆಯ ಆರ್ಥಿಕ ಅರಾಜಕತೆಯಲ್ಲಿಯೇ ಎಂಬುದು ನನ್ನ ಅಭಿಪ್ರಾಯ. ಉತ್ಪಾದನೆಯಲ್ಲಿ ತೊಡಗಿರುವ ಒಂದು ದೊಡ್ಡ ಜನಸಮುದಾಯ ಇಂದು ನಮ್ಮ ಎದುರಿಗಿದೆ. ಅವರೆಲ್ಲರೂ ಸೇರಿ ಮಾಡುವ ಉತ್ಪಾದನೆಯ ಫಲ ಎಲ್ಲರಿಗೂ ದೊರಕದಂತೆ ಅವರಲ್ಲಿನ ಕೆಲವರು ಇನ್ನುಳಿದವರನ್ನು ಬಲಾತ್ಕಾರದಿಂದ ಅಲ್ಲ, ಕಾನೂನಾತ್ಮಕವಾಗಿ ಸ್ಥಾಪಿಸಲ್ಪಟ್ಟ ರಿವಾಜುಗಳನ್ನು ಎಲ್ಲರೂ ನಿಷ್ಠೆಯಿಂದ ಪಾಲಿಸುವಂತೆ ಮಾಡುವ ಮೂಲಕವಾಗಿಯೇ ಒಪ್ಪಿಸುತ್ತಿದ್ದಾರೆ. ಇಂದಿನ ಸಂದರ್ಭದಲ್ಲಿ, ಉತ್ಪಾದಿತ ಸಾಮಗ್ರಿಗಳ ಮೇಲೆ ಅರ್ಥಾತ್ ಗ್ರಾಹಕ ವಸ್ತುಗಳು ಮತ್ತು ಯಂತ್ರ ಸಾಮಗ್ರಿಗಳನ್ನು ತಯಾರಿಸಲು ಬೇಕಾದ ಒಟ್ಟು ಉತ್ಪಾದನಾ ಸಾಮರ್ಥ್ಯವು ಕಾನೂನುಬದ್ಧವಾಗಿಯೇ ವ್ಯಕ್ತಿಗಳ ಖಾಸಗಿ ಆಸ್ತಿಯಾಗಿರಲು ಸಾಧ್ಯ ಮತ್ತು ಬಹುತೇಕವಾಗಿ ಆಗಿಹೋಗಿದೆ ಸಹ.

ನಾನೀಗ ಮುಂದುವರಿಸುವ ಚರ್ಚೆಯಲ್ಲಿ ವಿಷಯವನ್ನು ಸರಳವಾಗಿ ಮಂಡಿಸುವ ದೃಷ್ಟಿಯಿಂದ ಯಾರೆಲ್ಲ ಉತ್ಪಾದನಾ ಸಾಮಗ್ರಿಗಳ ಮೇಲಿನ ಒಡೆತನದಲ್ಲಿ ಭಾಗಿಗಳಾಗಿಲ್ಲವೋ ಅವರೆಲ್ಲರನ್ನೂ ನಾನು 'ಕಾರ್ಮಿಕರು' ಎಂದು ಕರೆಯಲಿಚ್ಛಿಸುತ್ತೇನೆ: ಅದು ಆ ಪದದ ರೂಢಿಗತ ಅರ್ಥಕ್ಕೆ ಸಂಪೂರ್ಣವಾಗಿ ಹೊಂದಿಕೆಯಾಗದಿರಬಹುದಾದರೂ ಸಹ. ಉತ್ಪಾದನಾ ಸಾಮಗ್ರಿಗಳ ಒಡೆಯನು ಕಾರ್ಮಿಕರ ಶ್ರಮಶಕ್ತಿಯನ್ನು ಕೊಂಡುಕೊಳ್ಳುವ ಸ್ಥಿತಿಯಲ್ಲಿರುತ್ತಾನೆ. ಉತ್ಪಾದನಾ ಸಾಮಗ್ರಿಗಳ ಮೇಲೆ ಕೆಲಸ ಮಾಡುತ್ತಾ ಕಾರ್ಮಿಕನು ಹೊಸ ಸರಕುಗಳನ್ನು ಉತ್ಪಾದಿಸಿದಾಗ ಅದರ ಒಡೆತನವು ಬಂಡವಾಳಶಾಹಿ ಯಜಮಾನನಿಗೆ ಸೇರಿಹೋಗುತ್ತದೆ. ಈ ಇಡೀ ವಿದ್ಯಮಾನದಲ್ಲಿ ಅಡಕವಾಗಿರುವ ಮುಖ್ಯ ಪ್ರಶ್ನೆಯೇನೆಂದರೆ ನಿಜವಾದ ಬೆಲೆಯ ಮಾಪನದಲ್ಲಿ ಕಾರ್ಮಿಕನು ಉತ್ಪಾದಿಸಿದ್ದು ಎಷ್ಟು ಮತ್ತು ಆತನಿಗೆ ದಕ್ಕಿದ್ದು ಎಷ್ಟು ಎಂಬುದರ ಮಧ್ಯದ ಸಂಬಂಧ. ಕಾರ್ಮಿಕನೊಂದಿಗೆ ಮಾಲೀಕನು ಮಾಡಿಕೊಂಡಿರುವುದು 'ಮುಕ್ತ' ಒಪ್ಪಂದ ಎನಿಸಿಕೊಂಡಿದ್ದರೂ ಸಹ ಕಾರ್ಮಿಕನಿಗೆ ದಕ್ಕುವ ಸಂಬಳ ಅವನು ನಿಜವಾಗಿಯೂ ಉತ್ಪಾದಿಸಿದ ಸರಕಿನ ಮೌಲ್ಯದ ಮೇಲೆ ಅವಲಂಬಿತವಾಗಿರುವುದಿಲ್ಲ. ಬದಲಿಗೆ, ಕಾರ್ಮಿಕನ ಕನಿಷ್ಠ ಜೀವನಾವಶ್ಯಕತೆಗೆ ಎಷ್ಟು ಕೊಡಬೇಕಾಗುತ್ತದೆ ಎಂಬುದರ ಮೇಲೆ ಮತ್ತು ಬಂಡವಾಳಗಾರನಿಗೆ ಕಾರ್ಮಿಕನ ಅವಶ್ಯಕತೆ ಎಷ್ಟಿದೆ ಹಾಗೂ ಕೆಲಸಕ್ಕಾಗಿ ಎಷ್ಟು ಜನ ಕಾರ್ಮಿಕರು ಪೈಪೋಟಿಯಲ್ಲಿದ್ದಾರೆ ಅನ್ನುವುದರ ಮೇಲೆ ಅದು ನಿರ್ಣಯವಾಗುತ್ತದೆ. ವಾಸ್ತವಿಕ ಆಚರಣೆಯಲ್ಲಿರಲಿ, ತಾತ್ವಿಕವಾಗಿ ಸಹ ಕಾರ್ಮಿಕನಿಗೆ ಕೊಡುವ ವೇತನವು ಅವನು ಉತ್ಪಾದಿಸಿದ ವಸ್ತುವಿನ ಬೆಲೆಯ ಮೇಲೆ

ನಿರ್ಣಯವಾಗುವುದಿಲ್ಲ ಎಂಬುದನ್ನು ಅರ್ಥಮಾಡಿಕೊಳ್ಳುವುದು ಮುಖ್ಯ.



ಬಂಡವಾಳಗಾರರ ಪರಸ್ಪರ ಪೈಪೋಟಿಯೆಂಬ ಕಾರಣದಿಂದಲೂ, ತಾಂತ್ರಿಕ ಅಭಿವೃದ್ಧಿ ಹಾಗೂ ಹೆಚ್ಚುತ್ತಾ ಹೋಗುವ ಶ್ರಮದ ವಿಭಜನೆಯಿಂದಾಗಿ ಸಣ್ಣ ಸಣ್ಣ ಕೈಗಾರಿಕಾ ಘಟಕಗಳು ನಾಶವಾಗಿ ಬೃಹತ್ ಉದ್ದಿಮೆಗಳು ಹುಟ್ಟಿಕೊಳ್ಳುತ್ತವೆ ಎಂಬ ಎರಡನೆಯ ಕಾರಣದಿಂದಾಗಿಯೂ ಖಾಸಗಿ ಬಂಡವಾಳವು ಕೆಲವೇ ಬಂಡವಾಳಶಾಹಿ ಮನೆತನಗಳಲ್ಲಿ ಕೇಂದ್ರೀಕೃತವಾಗುತ್ತದೆ. ಈ ಬೆಳವಣಿಗೆಗಳ ಪರಿಣಾಮವಾಗಿ ವಿಪರೀತವಾದ ಅಧಿಕಾರಶಕ್ತಿಯು ಕೆಲವೇ ಕೆಲವು ಖಾಸಗಿ ಬಂಡವಾಳಗಾರರಲ್ಲಿ ಕೇಂದ್ರೀಕೃತವಾಗಿ ಏಕಾಧಿಪತ್ಯಕ್ಕೆ ಜನ್ಮ ನೀಡುತ್ತದೆ ಹಾಗೂ ಇದನ್ನು ನಿಯಂತ್ರಿಸುವ ಶಕ್ತಿ ಜನತಾಂತ್ರಿಕವಾಗಿ ಸಂಘಟಿತವಾದ ರಾಜಕೀಯ ವ್ಯವಸ್ಥೆಗೂ ಅಸಾಧ್ಯವಾಗುತ್ತದೆ. ಹೀಗಾಗಲು ಕಾರಣವೇನೆಂದರೆ ಶಾಸಕಾಂಗಗಳ ಸದಸ್ಯರನ್ನು ರಾಜಕೀಯ ಪಕ್ಷಗಳು ಆಯ್ಕೆ ಮಾಡುತ್ತಿದ್ದು, ಆ ಪಕ್ಷಗಳಿಗೆ ಬಹುತೇಕ ಹಣ ಒದಗಿಸುವವರು ಹಾಗೂ ಬೇರೆ ಬೇರೆ ರೀತಿಯಲ್ಲಿ ಪ್ರಭಾವ ಬೀರುವವರು ಖಾಸಗಿ ಬಂಡವಾಳಗಾರರಾಗಿದ್ದು ಅವರು ವಾಸ್ತವದಲ್ಲಿ ಮತದಾರರನ್ನು ಶಾಸಕಾಂಗದಿಂದ ಬೇರ್ಪಡಿಸಿ ದೂರವೇ ಉಳಿಯುವಂತೆ ನೋಡಿಕೊಳ್ಳುತ್ತಾರೆ. ಇದರ ಫಲವಾಗಿ ಜನತೆಯ ಪ್ರತಿನಿಧಿಗಳು ಸೌಲಭ್ಯ ವಂಚಿತ ಜನತೆಯ ವಿಭಾಗವನ್ನು ಸೂಕ್ಷ್ಮವಾಗಿ ರಕ್ಷಿಸುವುದಿಲ್ಲ. ಇದಲ್ಲದೆ, ಇಂದಿನ ಸಂದರ್ಭದಲ್ಲಿ ಖಾಸಗಿ ಬಂಡವಾಳಗಾರರು ನೇರವಾಗಿ ಆಗಲೀ ಪರೋಕ್ಷವಾಗಿ ಆಗಲೀ ವಿದ್ಯಾಭ್ಯಾಸ, ರೇಡಿಯೋ, ವೃತ್ತಪತ್ರಿಕೆ ಮುಂತಾದ ಎಲ್ಲ ಮಾಹಿತಿ ಪ್ರಸಾರದ ಮಾಧ್ಯಮದ ಮೇಲೆ ಹಿಡಿತ ಸಾಧಿಸುವುದು ಶತಃಸಿದ್ಧ. ಹೀಗಾಗಿ ನಾಗರಿಕನೊಬ್ಬನು ವಸ್ತುನಿಷ್ಠ ತೀರ್ಮಾನಗಳಿಗೆ ಬರುವುದಾಗಲಿ, ತನ್ನ ರಾಜಕೀಯ ಹಕ್ಕುಗಳನ್ನು ಜಾಣ್ಮೆಯಿಂದ ಉಪಯೋಗಿಸಿಕೊಳ್ಳುವುದಾಗಲಿ ಅತ್ಯಂತ ಕಷ್ಟವೂ ಬಹಳಷ್ಟು ಸಂದರ್ಭಗಳಲ್ಲಿ ಹೆಚ್ಚು ಕಡಿಮೆ ಅಸಾಧ್ಯವೂ ಆಗುತ್ತದೆ.

ಬಂಡವಾಳದ ಮೇಲೆ ಖಾಸಗಿ ಒಡೆತನವಿರುವ ಆರ್ಥಿಕತೆಯ ಪರಿಸ್ಥಿತಿಯಲ್ಲಿ ಎರಡು ಮುಖ್ಯವಾದ ತತ್ತ್ವಗಳು ವಿಶಿಷ್ಟವಾಗಿ ಕಂಡುಬರುತ್ತವೆ. ಮೊದಲನೆಯದಾಗಿ, ಉತ್ಪಾದನಾ ಸಾಮಗ್ರಿಗಳು (ಬಂಡವಾಳ) ಖಾಸಗಿ ಒಡೆತನಕ್ಕೆ ಸೇರಿದ್ದು, ಮಾಲೀಕರು ಅದನ್ನು ಮನಸೋ ಇಚ್ಛೆ ದುಡಿಸಿಕೊಳ್ಳುತ್ತಾರೆ. ಎರಡನೆಯದಾಗಿ, ಕಾರ್ಮಿಕ ಮಾಡಿಕೊಳ್ಳುವ ಒಪ್ಪಂದವೂ ಮುಕ್ತವಾಗಿರುತ್ತದೆ (ಮಾರುಕಟ್ಟೆ ಪೈಪೋಟಿಗೆ ಸಿಕ್ಕಿಕೊಂಡಿರುತ್ತದೆ. – ಅನುವಾದಕ). ಈ ರೀತಿಯ 'ಶುದ್ಧಾಂಗ' ಬಂಡವಾಳಶಾಹಿ ವ್ಯವಸ್ಥೆ ಎಂಬುದು ಇರಲಾಗದು ಎಂಬುದೇನೋ ಸತ್ಯವೇ. ಕಾರ್ಮಿಕರು ದೀರ್ಘವೂ ದಾರುಣವೂ ಆದ ರಾಜಕೀಯ ಹೋರಾಟಗಳ ಮೂಲಕ ಕೆಲವೊಂದು ವಿಭಾಗಗಳ ಕೆಲಸಗಾರರಿಗಾದರೂ ಸ್ವಲ್ಪವಾದರು ಉತ್ತಮವಾದ ಮುಕ್ತ ದುಡಿಮೆಯ ಒಪ್ಪಂದಗಳನ್ನೂ ದೊರಕಿಸಿಕೊಂಡಿದ್ದಾರೆಂಬುದು ಸತ್ಯವೇ. ಆದರೆ ಒಟ್ಟಾರೆ ನೋಡಿದಾಗ ಇಂದಿನ ಆರ್ಥಿಕತೆಯು 'ಶುದ್ಧಾಂಗ' ಬಂಡವಾಳವಾದಕ್ಕಿಂತ ತುಂಬ ಭಿನ್ನವಾಗೇನೂ ಇಲ್ಲ ಎಂಬುದು ಗೋಚರವಾಗುತ್ತದೆ.

ಉತ್ಪಾದನೆ ನಡೆಯುವುದು ಲಾಭಕ್ಕಾಗಿಯೇ ಹೊರತು ಜನತೆಯ ಉಪಯೋಗಕ್ಕಾಗಿ ಅಲ್ಲ. ದುಡಿಯಲು ಸಮರ್ಥರಾಗಿರುವವರೆಲ್ಲರಿಗೂ, ಆಸೆಪಡುವವರೆಲ್ಲರಿಗೂ ಉದ್ಯೋಗ ಸಿಗುತ್ತದೆ ಎಂಬ ಖಾತ್ರಿ ಇಲ್ಲ. ಬದಲಿಗೆ ಯಾವಾಗಲೂ 'ನಿರುದ್ಯೋಗಿಗಳ ಸೈನ್ಯ'ವೇ ಅಸ್ತಿತ್ವದಲ್ಲಿರುತ್ತದೆ. ಕಾರ್ಮಿಕನು ಸದಾಕಾಲವೂ ಕೆಲಸ ಕಳೆದುಕೊಳ್ಳುವ ಭಯದಲ್ಲಿರುತ್ತಾನೆ. ನಿರುದ್ಯೋಗಿಗಳು ಹಾಗೂ ಅತ್ಯಂತ ಕಡಿಮೆ ವೇತನ ಪಡೆಯುವ ಕೆಲಸಗಾರರು ಲಾಭದಾಯಕ ಮಾರುಕಟ್ಟೆಯನ್ನು ಸೃಷ್ಟಿಸಲು ಅಸಮರ್ಥರಾಗುವುದರಿಂದ ಗ್ರಾಹಕ ವಸ್ತುಗಳ ಉತ್ಪಾದನೆಯು ತುಂಬ ಮಿತವಾಗುತ್ತದೆ ಮತ್ತು ಬದುಕು ದುರ್ಭರವಾಗುತ್ತಾ ಹೋಗುತ್ತದೆ. ತಂತ್ರಜ್ಞಾನದ ಅಭಿವೃದ್ಧಿಯಿಂದಾಗಿ ನಿರುದ್ಯೋಗ ಹೆಚ್ಚುತ್ತದೆಯೇ ಹೊರತು ದುಡಿಯುವವರ ಕೆಲಸದ ಭಾರ ಕಡಿಮೆಯಾಗುವುದಿಲ್ಲ. ಉತ್ಪಾದನೆಯಲ್ಲಿ ಇರುವ ಲಾಭದ ಉದ್ದೇಶ ಮತ್ತು ಇದರೊಂದಿಗೆ ಬಂಡವಾಳಗಾರರ ನಡುವೆ ಇರುವ ಪೈಪೋಟಿ ಇವು ಬಂಡವಾಳದ ಸಂಚಯ ಹಾಗೂ ಹೂಡಿಕೆಯಲ್ಲಿ ಏರಿಳಿತಗಳನ್ನು ಉಂಟುಮಾಡುತ್ತ ಹೆಚ್ಚು ಹೆಚ್ಚು ತೀವ್ರವಾದ ಆರ್ಥಿಕ ಕುಸಿತಗಳಿಗೆ ಕಾರಣವಾಗುತ್ತವೆ. ಮಿತಿಯಿಲ್ಲದ ಪೈಪೋಟಿಯು ಶ್ರಮವು ಬೃಹತ್ ಪ್ರಮಾಣದಲ್ಲಿ ನಷ್ಟವಾಗುವುದಕ್ಕೂ ಹಾಗೂ ನಾನು ಈಗಾಗಲೇ ವಿವರಿಸಿದಂತೆ ವ್ಯಕ್ತಿಗಳ ಸಾಮಾಜಿಕ ಆದರ್ಶದ ಪ್ರವೃತ್ತಿಯೇ ಊನವಾಗುವುದಕ್ಕೂ ಕಾರಣವಾಗುತ್ತದೆ.

ವ್ಯಕ್ತಿಗಳು ಹೀಗೆ ಮೌಲ್ಯಾತ್ಮಕವಾಗಿ ವಿಕಲಾಂಗರಾಗುವುದೇ ಬಂಡವಾಳದ ಅತ್ಯಂತ ಘೋರ ಕೆಡಕು ಎಂದು ಭಾವಿಸುತ್ತೇನೆ. ನಮ್ಮ ಇಡೀ ಶಿಕ್ಷಣ ಪದ್ಧತಿಯೇ ಈ ಕೆಡುಕಿಗೆ ತುತ್ತಾಗಿದೆ. ವಿದ್ಯಾರ್ಥಿಯಲ್ಲಿ ವಿಪರೀತವಾದ ಸ್ಪರ್ಧಾ ಮನೋಭಾವವನ್ನು ತುಂಬಿ ಆತ ತನ್ನ ಭವಿಷ್ಯದ ವೃತ್ತಿಯ ಸಿದ್ಧತೆಗಾಗಿ ಸಂಪಾದನೆಯ ಯಶಸ್ಸನ್ನೇ ಆರಾಧಿಸುವಂತೆ ತರಬೇತಿ ನೀಡಲಾಗುತ್ತಿದೆ.

ಈ ಘೋರವಾದ ಕೆಡಕುಗಳನ್ನು ನಿವಾರಿಸಲು ಸಮಾಜವಾದಿ ಆರ್ಥಿಕತೆಯನ್ನು ಸ್ಥಾಪಿಸುವುದು ಮತ್ತು ಅದರ ಜೊತೆಗೆ ಸಾಮಾಜಿಕ ಗುರಿಯನ್ನು ಹೊಂದಿದ ವಿದ್ಯಾಭ್ಯಾಸ ಪದ್ಧತಿಯನ್ನು ಜಾರಿಗೆ ತರುವುದು ಮಾತ್ರ ಏಕೈಕ ಮಾರ್ಗ ಎಂಬುದು ನನಗೆ ಖಚಿತವಾಗಿದೆ. ಅಂಥ ಆರ್ಥಿಕತೆಯಲ್ಲಿ ಉತ್ಪಾದನಾ ಸಾಮಗ್ರಿಗಳ ಒಡೆತನ ಸಮಾಜದ ಕೈಯಲ್ಲಿರುತ್ತದೆ ಮತ್ತು ಅದನ್ನು ಯೋಜನಾಬದ್ಧ ಮಾದರಿಯಲ್ಲಿ ಉಪಯೋಗಿಸಿಕೊಳ್ಳಲಾಗುತ್ತದೆ. ಜನಸಮುದಾಯದ ಅಗತ್ಯತೆಗೆ ತಕ್ಕಂತೆ ಉತ್ಪಾದನೆಯನ್ನು ನಿಗದಿಪಡಿಸುವ ಯೋಜನಾಬದ್ಧ ಆರ್ಥಿಕತೆಯು ದುಡಿಯುವ ಶಕ್ತಿ ಇರುವ ಎಲ್ಲರಿಗೂ ಉದ್ಯೋಗವನ್ನು ಹಂಚುತ್ತಾ ಮಗು ಮತ್ತು ಪ್ರತಿ ಹೆಣ್ಣು, ಗಂಡುಮಗುವಿಗೂ ಜೀವನದ ಭದ್ರತೆಯನ್ನು ಖಚಿತಪಡಿಸುತ್ತದೆ. ಪ್ರತಿ ವ್ಯಕ್ತಿಗೂ ನೀಡುವ ವಿದ್ಯಾಭ್ಯಾಸವು ಅವನಲ್ಲಿ ಅಂತರ್ಗತವಾಗಿರುವ ಸಾಮರ್ಥ್ಯವನ್ನು ಹೊರಗೆ ತೆಗೆಯುವುದರ ಜೊತೆಗೆ ಆತನಲ್ಲಿ ಇಂದಿನ ಸಮಾಜವು ಉಂಟುಮಾಡುವ ಅಧಿಕಾರ ಮತ್ತು ಯಶಸ್ಸಿನ ವೈಭವೀಕರಣದ ಬದಲಿಗೆ ಸಹಮಾನವರ ಕುರಿತಾದ ಜವಾಬ್ದಾರಿ ಪ್ರಜ್ಞೆಯನ್ನು ಬೆಳೆಸಲು ಪ್ರಯತ್ನಿಸುತ್ತದೆ.

ಅದೇನೇ ಇರಲಿ, ಯೋಜನಾಬದ್ಧ ಆರ್ಥಿಕತೆ ಎಂಬುದಷ್ಟೇ ಸಮಾಜವಾದವಲ್ಲ. ವ್ಯಕ್ತಿಗಳನ್ನು ಗುಲಾಮರ ಮಟ್ಟಕ್ಕೆ ಇಳಿಸಿಯೂ ಯೋಜನಾಬದ್ಧ ಆರ್ಥಿಕತೆಯನ್ನು ಸಾಧಿಸಬಹುದು. ಕೆಲವೊಂದು ಅತ್ಯಂತ ಕ್ಲಿಷ್ಟವಾದ ಸಾಮಾಜಿಕ – ಆರ್ಥಿಕ ಸಮಸ್ಯೆಗಳಿಗೆ ಪರಿಹಾರ ಕಂಡುಹಿಡಿಯುವುದರಿಂದ ಮಾತ್ರವೇ ಸಮಾಜವಾದದ ಸಾಧನೆ ಸಾಧ್ಯ. ಅತ್ಯಂತ ದೂರಗಾಮಿಯಾದ ರಾಜಕೀಯ ಆರ್ಥಿಕ ಕೇಂದ್ರೀಕರಣ ಜಾರಿಗೆ ಬಂದಾಗ ಅಧಿಕಾರಶಾಹಿಯು ಸರ್ವಶಕ್ತವೂ ಮದೋನ್ಮತ್ತವೂ ಆಗದಂತೆ ತಡೆಯುವುದು ಹೇಗೆ, ಅಧಿಕಾರಶಾಹಿಯ ಬಲಕ್ಕೆ ಜನತಾಂತ್ರಿಕ ಪ್ರತಿಶಕ್ತಿಯಿಂದ ಅಂಕುಶ ಹಾಕಿ ವ್ಯಕ್ತಿಗಳ ಹಕ್ಕುಗಳನ್ನು ಖಾತರಿಪಡಿಸುವುದು ಹೇಗೆ, ಇವೆಲ್ಲ ಮುಖ್ಯ ಪ್ರಶ್ನೆಗಳೇ ಸರಿ.

*('ಮಂತ್ಲಿ ರಿವ್ಯೂ'ನಲ್ಲಿ ಪ್ರಕಟವಾದದ್ದು, ನ್ಯೂಯಾರ್ಕ್, ಮೇ ೧೯೪೯)*

---

ಅನುವಾದ : **ಡಾ॥ ಬಿ. ಆರ್. ಮಂಜುನಾಥ್**
ನಂ. ೬೧, ೪ನೇ ಅಡ್ಡರಸ್ತೆ, ಅಶೋಕನಗರ, ಬೆಂಗಳೂರು – ೫೬೦ ೦೫೦



ಹುಲಿಕಲ್ಲು ಗುಡಿ

ತೊದವರು ಸೇರಿದಂತೆ ಎಲ್ಲ ಆದಿವಾಸಿಗಳೂ ಪ್ರಕೃತಿಯ ಆರಾಧಕರು. ಪ್ರಕೃತಿ ದೇವತೆಯನ್ನು, ಆ ದೇವತೆಯ ಶಕ್ತಿಯನ್ನು ನಂಬುತ್ತ ಬದುಕಿದವರು. ಆ ಪ್ರಕರಣ ನಡೆದದ್ದು ಸಾವಿರಾರು ವರ್ಷಗಳ ಹಿಂದೆ, ಎಂದು 'ಹುಲಿಕಲ್ಲು' ಕತೆಯನ್ನು ಹೇಳಿದ್ದರು. ಅವರ ನಂಬಿಕೆ ಅವರದು. ಇತರರ ನಂಬಿಕೆಗಳ ಮೇಲಿನ ದುರಾಕ್ರಮಣವಲ್ಲ. ಅವರ ನಂಬಿಕೆಯನ್ನು ಇತರರ ಮೇಲೆ ಹೇರುವುದು ಅವರ ಉದ್ದೇಶವಲ್ಲ.

# ಹುಲಿಕಲ್ ಕಾಡಿನಲ್ಲಿ

ಶ್ರೀಮತಿ ವಾಸಮಲ್ಲಿ ನಮ್ಮನ್ನು ಆತ್ಮೀಯ ನಗುವಿನೊಂದಿಗೆ ಸ್ವಾಗತಿಸಿದರು. ಪೂರ್ವದ ಗುಡ್ಡದ ತುದಿಯಿಂದ ಸೂರ್ಯ ಆಗಷ್ಟೇ ಕಾರ್ಶ್ ಮಂದೆಯ ಅವರ ಮನೆಗಳ ಮೇಲೆ ಬೆಚ್ಚನೆಯ ಬಿಸಿಲು ಹರಡತೊಡಗಿದ್ದ. ಗುಡ್ಡದ ಒಂದು ಬದಿಯಲ್ಲಿ ದೇವರ ಗುಡಿ. ಎಮ್ಮೆ ದೊಡ್ಡಿಯ ಮುಂದೆ ಪೂಜಾರಿ ಹಾಲು ಕರೆದು ಡಬ್ಬಿಗಳಿಗೆ ತುಂಬಿಸುತ್ತಿದ್ದನ್ನು ಕಾಣಬಹುದಿತ್ತು. ಈ ಬಾರಿ ಕಾಡು ಡೇಲಿಯಾ ಗಿಡಗಳು ನಸು ನೇರಳೆ ಬಣ್ಣದ ಹೂ ಅರಳಿಸಿ ನಿಂತಿದ್ದವು.

ನಾವು ಅಲ್ಲಿಗೆ ಭೇಟಿ ನೀಡುತ್ತಿರುವುದು ಮೂರನೆಯ ಬಾರಿಗೆ. ಕಳೆದ ಬಾರಿ ನಾನು ತೆಗೆದಿದ್ದ ಅವರ ಫೋಟೋಗಳನ್ನು ಕೊರಿಯರ್ ಮೂಲಕ ಕಳಿಸಿಕೊಟ್ಟಿದ್ದೆ. ಅವರು ದೂರವಾಣಿ ಮೂಲಕ ಕೃತಜ್ಞತೆ ಹೇಳಿದ್ದರಲ್ಲದೆ 'ಜೀ, ಇಷ್ಟೆಲ್ಲ ಯಾಕೆ ಖರ್ಚು ಮಾಡಲು ಹೋದಿರಿ?' – ಎಂದು ಸಣ್ಣ ಆಕ್ಷೇಪ ವ್ಯಕ್ತಪಡಿಸಿದ್ದರು. ಅವರು ಎಲ್ಲರನ್ನೂ 'ಜೀ' ಎಂದು ಸಂಬೋಧಿಸುತ್ತಾರೆ!

ವಾಸಮಲ್ಲಿ ತೊದವ ಸಮುದಾಯದ ಮೊದಲ ಪದವೀಧರೆ. ಸಮುದಾಯದ ಪ್ರಭಾವಿ ಮಹಿಳೆ. ಒಳ್ಳೆಯ ಹಾಡುಗಾರ್ತಿ. ಹಿಂದುಸ್ತಾನ್ ಫಿಲ್ಮ್ ಫ್ಯಾಕ್ಟರಿಯಲ್ಲಿ ಹುದ್ದೆಯಲ್ಲಿದ್ದರು. ಅದನ್ನು ತ್ಯಜಿಸಿ ಸಮುದಾಯ ಸೇವೆಯಲ್ಲಿ ತೊಡಗಿಕೊಂಡಿದ್ದಾರೆ. ಸ್ಟೇಟ್ ಟ್ರೈಬಲ್ ವೆಲ್‌ಫೇರ್ ಬೋರ್ಡ್‌ನ ಸದಸ್ಯೆ. ಇತ್ತೀಚೆಗೆ ಟ್ರೈಬಲ್ ಮ್ಯೂಸಿಕ್ ಮತ್ತು ಡಾನ್ಸ್ ವೃಂದವನ್ನು ಸ್ಥಾಪಿಸಿ ಚಟುವಟಿಕೆ ನಡೆಸುತ್ತಿದ್ದಾರೆ. ಬುಡಕಟ್ಟು ಸಂಸ್ಕೃತಿಯನ್ನು ರಕ್ಷಿಸಿಡುವ ಹಾಗೂ ಪ್ರದರ್ಶಿಸುವ ಕಾರ್ಯಕ್ರಮಗಳಲ್ಲಿ ತೊಡಗಿಕೊಂಡಿದ್ದಾರೆ. ಸರಕಾರದ ಯಾವುದೇ ಕಾರ್ಯಕ್ರಮವಿದ್ದರೂ ಅವರಿಗೆ ಆಮಂತ್ರಣವಿರುತ್ತದೆ. ಅವರು ತಮಿಳಿನಲ್ಲಿ ಸಂಗ್ರಹಿಸಿ ಕೊಟ್ಟಿರುವ ತೊದವ ಜನಪದ ಕತೆಗಳ ಸಂಗ್ರಹ ಕೇಂದ್ರ ಸಾಹಿತ್ಯ ಅಕಾಡೆಮಿಯಿಂದ ಪ್ರಕಟವಾಗಲಿದೆ.

ಅವರ ಬಗ್ಗೆ ನಾನು ಬರೆದಿದ್ದ, ವಾರಪತ್ರಿಕೆ ಯೊಂದರಲ್ಲಿ ಪ್ರಕಟವಾಗಿದ್ದ ಲೇಖನದ ಒಂದು ಪ್ರತಿಯನ್ನು ಒಯ್ದಿದ್ದೆ. ಅದನ್ನು ನೋಡಿ ಅವರ ಮುಖ ಸಂತೋಷದಿಂದ ಅರಳಿತು. ಅದನ್ನು ಮನೆಯ ಇತರರಿಗೆ ತೋರಿಸಲೆಂದು ಒಳಗೆ ಒಯ್ದರು.

ನಾನು ಬರೆಯುತ್ತಿದ್ದ ಪುಸ್ತಕಕ್ಕಾಗಿ ತೊದವ ಸಮುದಾಯದ ಕುರಿತು ಮಾಹಿತಿ ನೀಡಿ ಸಹಕರಿಸಿದ್ದರು. ಫೋಟೋ ತೆಗೆದುಕೊಳ್ಳಲು ಸಹಾಯ ಮಾಡಿದ್ದರು. ತೊದವ ಭಾಷೆಯಲ್ಲಿ ಹಾಡಿದ್ದರು. ಫೋಟೋಕ್ಕಾಗಿ ತಲೆಕೂದಲನ್ನು ಗುಂಗುರು ಅಲಂಕಾರ ಮಾಡಿಕೊಳ್ಳಲು ಸೊಸೆ ಹಿಂದೆ ಮುಂದೆ, ನೋಡಿದಾಗ ತಮ್ಮ ವಿರಳ ಕೂದಲನ್ನೇ ಅಲಂಕಾರ ಮಾಡಿಕೊಂಡಿದ್ದರು! ತೊದವ ಸಮುದಾಯದವರು ಜೀವಿಸುವ ಪರಿಸರದ ಮತ್ತಷ್ಟು ತಿಳಿವಳಿಕೆ ಮಾಡಿಕೊಳ್ಳಲು ಸಹಾಯಕವಾಗುವಂತೆ ಅವರು ನಮ್ಮನ್ನು ಎಮರಾಲ್ಡ್ ಸಮೀಪದಲ್ಲಿರುವ ಅವರ ತವರು ಮಂದೆಗೆ ಕರೆದೊಯ್ದು, ಆಕೆಯ ತಾಯಿ ಮತ್ತು ಇನ್ನಿತರ ಬಳಗದವರ ಪರಿಚಯ ಮಾಡಿ ಕೊಟ್ಟಿದ್ದರು.

ತಮ್ಮ ಸಮುದಾಯದ ಬಗ್ಗೆ ಭಾರಿ ಅಭಿಮಾನವಿರುವ ಉತ್ಸಾಹಿ. ಇಬ್ಬರು ಗಂಡು ಮಕ್ಕಳ ತಾಯಿ. ಐದು ಮಂದಿ ಮೊಮ್ಮಕ್ಕಳ ಅಜ್ಜಿ. ಅವು ಒಂದು ನಿಮಿಷವೂ ಅಜ್ಜಿಯನ್ನು ಬಿಟ್ಟಿರುವುದಿಲ್ಲ. ಅವರ ತೊಡೆಯ ಮೇಲೆ ಅಥವಾ



ಹುಲಿಕಲ್ಲು

ಚಿತ್ರಲೇಖನ : **ಕೆ. ಪಿ. ಸ್ವಾಮಿ**

## ಅಭಿನಂದನೆಗಳು...

ಮಾಸ್ತಿ ವೆಂಕಟೇಶ ಅಯ್ಯಂಗಾರ್ ಸಮಿತಿ ಮತ್ತು ಕೋಲಾರದ ಮಾಸ್ತಿ ಟ್ರಸ್ಟ್ ಜೊತೆಗೂಡಿ ಕೊಡಮಾಡುವ ೨೦೧೭ನೇ ಸಾಲಿನ 'ಮಾಸ್ತಿ ಪ್ರಶಸ್ತಿ'ಯು ಅ.ರಾ.ಮಿತ್ರ, ಜಿ. ಎಚ್. ನಾಯಕ, ಗಿರಡ್ಡಿ ಗೋವಿಂದರಾಜ ಮತ್ತು ನೀಳಾದೇವಿ ಇವರಿಗೆ ಲಭಿಸಿದೆ. ಇವರೆಲ್ಲರಿಗೂ 'ನವಕರ್ನಾಟಕ' ಮತ್ತು 'ಹೊಸತು' ಬಳಗದ ಅಭಿನಂದನೆಗಳು.

ಬೆನ್ನಿನ ಮೇಲೇರಲು ಸದಾ ಪೈಪೋಟಿ ನಡೆಸುತ್ತವೆ. ಅವರ ತವರು ಮಂದೆಗೆ ನಮ್ಮನ್ನು ಕರೆದೊಯ್ಯುವಾಗ, ಮೊಮ್ಮಕ್ಕಳಿಬ್ಬರು ಜೊತೆಗೆ ಬಂದವು. ಅಜ್ಜಿಯ ಹಾಡಿಗೆ ತಮ್ಮ ದನಿ ಸೇರಿಸಿದವು. ದಾರಿಯಲ್ಲಿ ಮಳೆ ಸುರಿಯತೊಡಗಿತು. ಅವು ಪುಕ್ಕಳಿ ವಸ್ತ್ರ ಹೊದ್ದು ಬೆಚ್ಚಗೆ ಮಲಗಿದವು !

ತೊದವ ಸಮುದಾಯದ ಬಗ್ಗೆ ಅಧ್ಯಯನ ಮಾಡುವ, ಅವರ ಜೀವನದ ಕುರಿತು ಲೇಖನ ಬರೆಯುವ ಉದ್ದೇಶದಿಂದ ಅನೇಕರು ಅವರನ್ನು ಹುಡುಕಿಕೊಂಡು ಬರುತ್ತಾರೆ. ಬೇರೆ ಬೇರೆ ಭಾಷೆಗಳವರೂ ಇರುತ್ತಾರೆ. ಅಂಥವರಲ್ಲಿ ಅನೇಕರಿಗೆ ಆದಿವಾಸಿ ಸಮುದಾಯಗಳ ಬಗ್ಗೆ ನಿಜವಾದ ಕಳಕಳಿ ಅಥವಾ ಸಹಾನುಭೂತಿ ಇರುವುದಿಲ್ಲ. ತಾವು ನಾಗರಿಕರು, ಅವರು ಅನಾಗರಿಕರು ಎಂಬ ದೃಷ್ಟಿ ಇಟ್ಟುಕೊಂಡವರು ಅವರು. ಇಲ್ಲಸಲ್ಲದ್ದನ್ನು ಆರೋಪಿಸಿ ಸಣ್ಣ ವಿಷಯವನ್ನು ಉತ್ಪ್ರೇಕ್ಷೆ ಮಾಡಿ ಬರೆಯುತ್ತಾರೆ ಎಂಬುದು ವಾಸಮಲ್ಲಿಯವರ ಅಭಿಪ್ರಾಯ.

ನನ್ನೊಂದಿಗೆ ಅವರು ನಡೆದುಕೊಳ್ಳುತ್ತಿದ್ದ ರೀತಿಯಿಂದ, ನನ್ನ ಬರವಣಿಗೆಯಲ್ಲಿ ಅವರಿಗೆ ಸಂಪೂರ್ಣ ವಿಶ್ವಾಸವಿದ್ದಂತಿದೆ ಎಂದು ನಾನು ಊಹಿಸಿದ್ದೇನೆ. ನಮ್ಮ ಮಾತಿನ ಮಧ್ಯೆ, ಪರಿಶೀಲನೆಗೆಂದು ಬಂದಿದ್ದ ತಮಿಳು ಪುಸ್ತಕದ ಕರಡು ಪ್ರತಿಯನ್ನು ತೋರಿಸಿದರು. ಅದು ಆದಿವಾಸಿ ಇಲಾಖೆಯವರೇ ಪ್ರಕಟಿಸಲಿದ್ದ ಪುಸ್ತಕ. ಅದರಲ್ಲಿ ತೊದವ ಸಮುದಾಯದ ಆಚಾರ-ವಿಚಾರಗಳ ಬಗ್ಗೆ, ಹಾಗೆಯೇ ಹಿಂದೆ ರೂಢಿಯಲ್ಲಿದ್ದಿರಬಹುದಾದ ರೂಢಿಯ ಬಗ್ಗೆ ತೀರಾ ಬೇಜವಾಬ್ದಾರಿಯಿಂದ ಬರೆದಿದ್ದ ಸಾಲುಗಳಿದ್ದವು. ಅದನ್ನು ನಮಗೆ ಓದಿ ತೋರಿಸಿದರಲ್ಲದೆ, ಆ ಬಗ್ಗೆ ಸಂಬಂಧಪಟ್ಟವರಲ್ಲಿ ಪ್ರತಿಭಟಿಸಲಿರುವುದಾಗಿ ಹೇಳಿದರು.

ಅನಂತರ, ತೊದವರ ಎಮ್ಮೆಗಳ ಪೈಕಿ ದೇವರ ಎಮ್ಮೆ, ಸಾಮಾನ್ಯ ಎಮ್ಮೆ ಮತ್ತು ಕಾಡೆಮ್ಮೆಗಳೊಂದಿಗೆ ಸಂಕರಗೊಂಡಿರುವ ಎಮ್ಮೆ ನಡುವಣ ವ್ಯತ್ಯಾಸ ತೋರಿಸುವ ಉದ್ದೇಶದಿಂದ, ನನ್ನನ್ನು ಎಮ್ಮೆಗಳು ಮೇಯುತ್ತಿದ್ದ ಹುಲ್ಲುಗಾವಲಿನತ್ತ ಕರೆದೊಯ್ದರು.

ನನ್ನ ಪತ್ನಿ ಶಾಂತಾ, ಬರಿಯ ತೊದವ ಭಾಷೆಯಷ್ಟೇ ತಿಳಿದಿದ್ದ, ತಮಿಳಿನ ಪರಿಚಯವಾಗಿರದಿದ್ದ ಅವರ ಮೊಮ್ಮಕ್ಕಳೊಂದಿಗೆ ಮಾತುಕತೆಯಾಡುತ್ತ, ಅಂಗಳದಲ್ಲೇ ಉಳಿದಳು.

ತೊದವರ ಎಮ್ಮೆಗಳು ಮೇಯಲೆಂದು ಮೀಸಲಿರಿಸಿದ್ದ ಹುಲ್ಲುಗಾವಲು ಅದು. ಅಲ್ಲಿ ಎಚ್ಚರಿಕೆಯಿಂದ ತಿರುಗಾಡಬೇಕಿತ್ತು ! ಊಟಿಯ ಕೆಲವು ನಾಗರಿಕರು ತಮ್ಮ ಬಿಡುವಿನ ವೇಳೆಯನ್ನು ಅಲ್ಲಿ ಮೋಜು ಮಾಡುತ್ತ ಕಳೆದಿದ್ದಕ್ಕೆ ಸಾಕ್ಷಿಯಾಗಿ ಅಲ್ಲೆಲ್ಲ ಪ್ಲಾಸ್ಟಿಕ್ ವಸ್ತುಗಳನ್ನು, ಮದ್ಯದ ಖಾಲಿ ಬಾಟಲುಗಳನ್ನು ಚೆಲ್ಲಾಡಿ ಹೋಗಿದ್ದರು. ವಾಸಮಲ್ಲಿ ಅವರನ್ನು ನಿಂದಿಸುತ್ತ, ಆ ಬಗ್ಗೆ ಕಲೆಕ್ಟರಲ್ಲಿಗೆ ದೂರು ಒಯ್ಯಲು ಸಾಕ್ಷಿಗೆಂದು ಅಲ್ಲಿನ ಕೆಲವು ಫೋಟೋ ತೆಗೆಸಿದರು. ಜೊತೆಗೆ, ಶ್ರೀಮಂತರೊಬ್ಬರು ಎಮ್ಮೆಗಳ ಜಾಗವನ್ನು ಅತಿಕ್ರಮಿಸಿ ಬಂಗಲೆ ನಿರ್ಮಿಸಿಕೊಂಡಿದ್ದನ್ನು ತೋರಿಸಿ ದೂರದಿಂದಲೇ ಅದರ ಒಂದು ಫೋಟೋ ತೆಗೆಸಿದರು.

ಹಿಂದಿರುಗಿ ಬರುವಾಗ, ಮತ್ತೊಂದು ಪ್ರಸ್ತಾಪ ಮಾಡಿ ನನ್ನ ಕುತೂಹಲವನ್ನು ಕೆರಳಿಸಿದರು. 'ಜೀ, ಇಲ್ಲೇ ಹತ್ತಿರದಲ್ಲಿ ಹುಲಿಕಲ್ಲು ಗುಡಿ ಇದೆ. ನಿಮಗೆ ಆಯಾಸವೆನ್ನಿಸದಿದ್ದರೆ ಹೋಗೋಣ !' ಅವರು ಬರೆಯಲಿದ್ದ ಲೇಖನದಲ್ಲಿ ಹುಲಿಕಲ್ಲಿನ ಫೋಟೋ ಬಳಸಿಕೊಳ್ಳುವ ಉದ್ದೇಶ ಅವರದ್ದು.

ಅದನ್ನು ಕೇಳಿದ ನಂತರ ನನಗೆ ಆಯಾಸ ಮರೆತುಹೋಯಿತು. ಮನೆ ಅಂಗಳದಲ್ಲಿ ಕುಳಿತಿದ್ದ ನನ್ನ ಪತ್ನಿಯೂ ಜೊತೆಯಾದಳು. ಅವರ ಇಬ್ಬರು ಮೊಮ್ಮಕ್ಕಳು ನಮ್ಮೊಂದಿಗೆ ಹೊರಟವು. ಅವರ ತೊದವ ಬಾಲ ಭಾಷೆ ಅರ್ಥವಾಗದಿದ್ದರೂ, ಶಾಂತಾಳನ್ನು ಅವರು 'ಗ್ರ್ಯಾಂಡ್ಮಾ' - ಎಂದು ಕರೆದು ಒಲಿಸಿಕೊಂಡಿದ್ದರು !

ತಮಿಳಗಂ ಅತಿಥಿ ಗೃಹದ ಮಾರ್ಗದಲ್ಲಿ ಸ್ವಲ್ಪ ದೂರ ನಡೆಯಬೇಕು. ನಮ್ಮ ಜೊತೆಗೆ ವಾಸಮಲ್ಲಿಯವರ ಇಬ್ಬರು ಮೊಮ್ಮಕ್ಕಳೂ ಹೊರಟು ನಿಂತವು.

ನನ್ನ ಅಪೇಕ್ಷೆಯ ಮೇರೆಗೆ, ವಾಸಮಲ್ಲಿ ನಾಲ್ಕೈದು ಜಾನಪದ ಕತೆಗಳನ್ನು ನನಗೆ ಹೇಳಿದ್ದರು. ಪುಸ್ತಕದಲ್ಲಿ ಪ್ರಕಟಿಸಲು ಆ ಪೈಕಿ ಒಂದನ್ನು ಆಯ್ಕೆ ಮಾಡಿಕೊಂಡಿದ್ದೆ. ಸಾಧಾರಣವಾಗಿ ಅವರ ಕತೆಗಳಲ್ಲಿ ಪ್ರಕೃತಿ, ಬೆಟ್ಟಗಳು, ಅವರ ಎಮ್ಮೆಗಳು, ಪೂಜಾರಿ, ಹುಲಿ ಇತ್ಯಾದಿ ಇದ್ದೇ ಇರುತ್ತವೆ ! ನೀಲಗಿರಿ ಜಿಲ್ಲೆಯ ಹಲವು ಕಡೆಗಳಲ್ಲಿರುವ ತೊದವ ಮಂದೆಗಳ 'ಹುಲಕಲ್ ಮಂದೆ' - ಎಂಬ ತೊದವರ ಗ್ರಾಮವೂ ಇದೆ.

ಸಾಮಾನ್ಯವಾಗಿ, ತೊದವರ ಹೆಂಗಸರು ಗುಡಿಗಳತ್ತ ಸುಳಿಯುವುದಿಲ್ಲ, ಆದರೆ ಕೆಲವು ವಿಶೇಷ ಸಂದರ್ಭಗಳಲ್ಲಿ ಗುಡಿಗೆ ಹೋಗುವ ಅವಕಾಶವಿರುತ್ತದೆ. ಈಗ ವಾಸಮಲ್ಲಿ ಮೊಮ್ಮಕ್ಕಳು ಮತ್ತು ನಮ್ಮಂತೆ ಪರಿಚಿತರ ಜೊತೆಗೆ ಹುಲಿಕಲ್ ಗುಡಿಗೆ ಹೋಗುತ್ತಿದ್ದಾರೆ ! ಇದು ನನ್ನ ಕುತೂಹಲ ಹೆಚ್ಚಲು ಕಾರಣ.



ವಾಸಮಲ್ಲಿ ಫೋಟೋಕ್ಕಾಗಿ ತಲೆಕೂದಲನ್ನು ಗುಂಗುರು ಅಲಂಕಾರ ಮಾಡಿಕೊಳ್ಳುತ್ತಿರುವುದು

ಅವರ ಮನೆಗಳ ಕಡೆಯಿಂದ ತಮಿಳಗಂ ಅತಿಥಿ ಗೃಹದ ರಸ್ತೆಯಲ್ಲಿ ನಡೆದೆವು. ಪುಟ್ಟಮಕ್ಕಳು ಕೇಕೆ ಹಾಕುತ್ತ, ಅತ್ತಿತ್ತ ಪುಟಿಯುತ್ತ ನಮ್ಮ ಆಯಾಸವನ್ನು ಕಡಿಮೆ ಮಾಡಿದ್ದವು.

ಒಂದು ಕಾಲಕ್ಕೆ ಅದು ದಟ್ಟಕಾಡಾಗಿದ್ದಿರ ಬೇಕು. ಮಧ್ಯೆ ರಸ್ತೆ ಹಾದುಹೋಗಿರುವ ಕಾರಣ, ಮರಗಳು ವಿರಳವಾಗಿದ್ದವು. ಆದರೆ, ಕುರುಚಲು ಗಿಡಗಳು ಬೆಳೆದು ನಿಂತಿದ್ದವು. ಅವುಗಳ ನೆರಳು ಕತ್ತಲಿನ ವಾತಾವರಣ ಉಂಟುಮಾಡಿತ್ತು.

ವಾಸಮಲ್ಲಿ ಒಂದು ಕಡೆ ರಸ್ತೆಯಿಂದ ಎಡಗಡೆಗೆ ಇಳಿದರು. ದಾರಿಗೆ ಅಡ್ಡವಾಗಿದ್ದ ಗಿಡಗಳ ರೆಂಬೆಗಳನ್ನು ಮುರಿದು, ನಮಗೆ ನಡೆಯಲು ದಾರಿ ಮಾಡಿಕೊಡುತ್ತ ಮುಂದೆ ಸಾಗಿದರು. ಮಕ್ಕಳನ್ನು ಮುನ್ನಡೆಸುತ್ತ ನಾವೂ ನಿಧಾನವಾಗಿ ಅವರನ್ನು ಅನುಸರಿಸಿದೆವು.

ಮುಂದೆ ದನಕರುಗಳು ನಡೆದಾಡಿದ್ದ ದಾರಿಯ ಜಾಡು ಸಿಕ್ಕಿತು. ಕಾಡಿನ ಮತ್ತೊಂದು ಕಡೆ ಹೆಂಗಸರು ಮಾತಾಡಿಕೊಳ್ಳುತ್ತ ಒಣ ಕಟ್ಟಿಗೆ ಸಂಗ್ರಹಿಸುತ್ತಿದ್ದರು.

ಮನೆಯಿಂದ ಹೊರಟಾಗ, ವಾಸಮಲ್ಲಿ ನಮಗೆ ಆ ಹುಲಿಕಲ್ ಗುಡಿಗೆ ಸಂಬಂಧಿಸಿದ ಕತೆ ಹೇಳಿದ್ದರು. ಸಾಮಾನ್ಯವಾಗಿ ಅವರ

ಜನಪದ ಕತೆಗಳಲ್ಲಿ ಕಾಡು, ಹುಲ್ಲುಮೇಡು, ಸೂರ್ಯ, ಚಂದ್ರ, ಹೊಳೆ, ಜೇನುಗೂಡು, ದೇವರ ಪೂಜಾರಿ, ಓನ್ ದೇವರು, ಒಂದು ಕಾಲದಲ್ಲಿ ಹುಲಿಯೇ ಅವರ ಎಮ್ಮೆಗಳನ್ನು ಕಾಡಿನಲ್ಲಿ ಮೇಯಿಸಿ ಕರೆತರುತ್ತಿದ್ದ ಪ್ರಕರಣ – ಇತ್ಯಾದಿ ಸ್ವಾರಸ್ಯಗಳಿರುತ್ತವೆ!

ಸಾವಿರಾರು ವರ್ಷಗಳಿಂದಲೂ ಕಾರ್ಶ್ ಮಂದೆ ಅದೇ ಸ್ಥಳದಲ್ಲಿದೆ. ದೇವರ ಗುಡಿ, ಎಮ್ಮೆ ದೊಡ್ಡಿ ಒಂದು ಕಡೆ. ವಾಸದ ಮನೆಗಳು ಮತ್ತೊಂದು ಕಡೆ. ಎಮ್ಮೆಗಳ ಹಾಲು ಕರೆಯುವುದು, ಎಳೆಕರುಗಳನ್ನು ಕಾಡುಪ್ರಾಣಿಗಳಿಂದ ರಕ್ಷಿಸುವುದು, ಮಜ್ಜಿಗೆ ಕಡೆದು ಬೆಣ್ಣೆ ತೆಗೆದು ಎಲ್ಲರಿಗೂ ಹಂಚುವುದು ಪೂಜಾರಿಯ ಕರ್ತವ್ಯಗಳಲ್ಲೊಂದು.

ಅಂದು ಎಮ್ಮೆಗಳು ಮೇಯುತ್ತ ಹುಲ್ಲುಗಾವಲಿನಲ್ಲಿ ದೂರ ಹೋಗಿದ್ದವು. ಎಳೆಕರುಗಳನ್ನು ಚಪ್ಪರದ ನೆರಳಿನಲ್ಲಿ ಕೂಡಿಹಾಕಿ ಪೂಜಾರಿ ಬೆಣ್ಣೆ ತೆಗೆಯುವ ಕೆಲಸದಲ್ಲಿ ನಿರತನಾಗಿದ್ದ. ಸ್ವಲ್ಪ ಹೊತ್ತಿನನಂತರ, ಆತನಿಗೆ ತೀರಾ ಹತ್ತಿರದಲ್ಲಿ ಕಾಡುಮೃಗವೊಂದು ಅಡಗಿ ಕುಳಿತು ತನ್ನನ್ನು ಗಮನಿಸುತ್ತಿದೆ ಎನ್ನಿಸಿತು. ಕೈಯಲ್ಲಿ ಬೆಣ್ಣೆ ಮುದ್ದೆ ಹಿಡಿದುಕೊಂಡೇ ನಿಂತು ಸ್ವಲ್ಪ ಹೊತ್ತು ಮರಗಳ ಬುಡದತ್ತ ದೃಷ್ಟಿ ಹಾಯಿಸಿದ. ಮರಗಳ ಎಲೆಗಳ ಕಿಂಡಿಗಳಿಂದ ಜಿಗಿದ ಸೂರ್ಯಕಿರಣಗಳು ಅಲ್ಲಲ್ಲಿ ಹರಡಿದ್ದವು. ಅಲ್ಲಿ ಹುಲಿಯೊಂದು ಹೊಂಚು ಹಾಕಿ ಕುಳಿತಿರುವುದು ಪೂಜಾರಿಯ ಸೂಕ್ಷ್ಮ ದೃಷ್ಟಿಗೆ ಬಿದ್ದಿತು! ಹುಲಿಯ ಬಾಯಿಂದ ಎಳೆಕರುಗಳನ್ನು ರಕ್ಷಿಸುವ ಜವಾಬ್ದಾರಿ ಆತನ ಪಾಲಿಗಿತ್ತು. ಆದರೆ ಆತನಲ್ಲಿ ಬೇರೆ ಆಯುಧಗಳಿರಲಿಲ್ಲ. ನಿಂತಲ್ಲಿಂದ ಸರಿಯುವಂತೆಯೂ ಇಲ್ಲ. ಆಯುಧ ತರಲು ಹೋದಾಗ, ಹುಲಿ ಕರುಗಳ ಮೇಲೆ ಹಾರಬಹುದು. ಪೂಜಾರಿ ಮನಸ್ಸಿನಲ್ಲಿ 'ಓನ್' ದೇವತೆಯನ್ನು ಸ್ಮರಿಸಿಕೊಂಡ. ಧೈರ್ಯ ಮಾಡಿ 'ಏ ದುಷ್ಟ ಹುಲಿಯೇ... ತೊಲಗು ಇಲ್ಲಿಂದ' ಎಂದು ಜೋರಾಗಿ ಕೂಗಾಡುತ್ತ, ತನ್ನ ಕೈಯಲ್ಲಿದ್ದ ಬೆಣ್ಣೆ ಮುದ್ದೆಯನ್ನು ಅದರತ್ತ ಎಸೆದ. ಹುಲಿ ಪೂಜಾರಿಯ ಏಟಿನಿಂದ ತಪ್ಪಿಸಿಕೊಳ್ಳುವ ಪ್ರಯತ್ನವಾಗಿ ಕುಳಿತಲ್ಲಿಂದ ಹಿಂದುಗಡೆಗೆ ತಿರುಗಿತು. ಆ ಕ್ಷಣದಲ್ಲಿ ಅದು ಕಲ್ಲಾಯಿತು!

ರಸ್ತೆಯಿಂದ ಸುಮಾರು ನಲವತ್ತು ಅಡಿಗಳಷ್ಟು ಕೆಳಗಡೆಗಿಳಿದು ಗುಡಿ ತಲುಪಿದೆವು. ನಾನು ಕಲ್ಪಿಸಿಕೊಂಡಿದ್ದಂತೆ ಅಲ್ಲಿ ಗುಡಿಯೇನೂ ಇರಲಿಲ್ಲ. ಅದೊಂದು ಬಯಲಿನ ಗುಡಿ. ತೊದವರು ಸಾವಿರಾರು ವರ್ಷಗಳಿಂದ ತಮ್ಮ ಜನಪದ ಇತಿಹಾಸದಲ್ಲಿ ಅದನ್ನು ಉಳಿಸಿಕೊಂಡು ಬಂದಿದ್ದಾರೆ.

ನಮ್ಮನ್ನು ಸ್ವಲ್ಪ ದೂರದಲ್ಲಿ ನಿಲ್ಲಿಸಿ, ವಾಸಮಲ್ಲಿ ಸುತ್ತಲೂ ಬೆಳೆದಿದ್ದ ಗಿಡಗಳನ್ನು ಕತ್ತರಿಸಿಹಾಕಿದರು. ಮುಂದುಗಡೆಯಿಂದ ಅದೊಂದು ಸಾಧಾರಣ ಕಲ್ಲು ಎನ್ನುವಂತಿದ್ದರೂ ಹಿಂಬದಿಯಿಂದ ನೋಡಿದಾಗ ಹುಲಿ, ಪೂಜಾರಿಯ ಅಬ್ಬರಿಕೆಗೆ ಹೆದರಿ ಬೆನ್ನು ತಿರುಗಿಸಿದ ಭಂಗಿಯಲ್ಲಿತ್ತು. ಪಾದರಕ್ಷೆಗಳನ್ನು ದೂರದಲ್ಲಿ ಕಳಚಿಟ್ಟು ಬರಿಗಾಲಿನಲ್ಲಿ ಅದರ ಸಮೀಪ ಸರಿದು ಬೇರೆ ಬೇರೆ ಕೋನಗಳಿಂದ ಅದರ ಫೋಟೋ ಕ್ಲಿಕ್ಕಿಸಿದೆ. ವಾಸಮಲ್ಲಿಯ ಮೊಮ್ಮಕ್ಕಳು ಸಹ ಹುಲಿಕಲ್ಲಿನ ಸಮೀಪ ನಿಂತು ಫೋಟೋ ತೆಗೆಸಿಕೊಂಡವು.

ಹತ್ತಿರದಿಂದ ನೋಡಿದಾಗ ಕೆಲವು ಸೂಕ್ಷ್ಮಗಳು ಕಣ್ಣಿಗೆ ಬಿದ್ದವು. ಮುಂದುಗಡೆ ಕಲ್ಲು ಒಂದು ಕಡೆ ಮುಕ್ಕಾಗಿತ್ತು. ಕಾಡಿನಲ್ಲಿ ಬಹಳ ಹೊತ್ತು ವಿಶ್ರಮಿಸಿಕೊಳ್ಳಲು ಬಂದಿದ್ದ ಪ್ರೇಮಿಗಳು ಹುಲಿಯ ಬೆನ್ನಿನ ಮೇಲೆ ನಾಗರಿಕತೆಯ ಮುದ್ರೆ ಅಥವಾ ಪ್ರೇಮದ ಮುದ್ರೆ ಕೊರೆದಿದ್ದರು.

ತೊದವರು ಸೇರಿದಂತೆ ಎಲ್ಲ ಆದಿವಾಸಿಗಳೂ ಪ್ರಕೃತಿಯ ಆರಾಧಕರು. ಪ್ರಕೃತಿ ದೇವತೆಯನ್ನು, ಆ ದೇವತೆಯ ಶಕ್ತಿಯನ್ನು ನಂಬುತ್ತ ಬದುಕಿದವರು. ಆ ಪ್ರಕರಣ ನಡೆದದ್ದು ಸಾವಿರಾರು ವರ್ಷಗಳ ಹಿಂದೆ, ಎಂದು 'ಹುಲಿಕಲ್ಲು' ಕತೆಯನ್ನು ಹೇಳಿದ್ದರು. ಅವರ ನಂಬಿಕೆ ಅವರದು. ಇತರರ ನಂಬಿಕೆಗಳ ಮೇಲಿನ ದುರಾಕ್ರಮಣವಲ್ಲ. ಅವರ ನಂಬಿಕೆಯನ್ನು ಇತರರ ಮೇಲೆ ಹೇರುವುದು ಅವರ ಉದ್ದೇಶವಲ್ಲ.

ಕಳೆದ ಬಾರಿ, ಕೋತರ ಹುಡುಗಿ ಪದ್ಮಾವತಿ ನಮಗೆ ಮಾರ್ಗದರ್ಶಿಯಾಗಿದ್ದಳು. ಅವರ ಊರಿನಲ್ಲಿದ್ದ ದಿಬ್ಬದ ಮೇಲಿನ ಪಾಂಡವರ ಗುಡಿಗೆ ಕರೆದೊಯ್ದಳು. ನೂರಾರು ವರ್ಷಗಳ ಹಿಂದಿನ ವೀರಗಲ್ಲುಗಳ ಒಂದು ಸಂಕೀರ್ಣದಂತಿದ್ದ ಗುಡಿ. ಪದ್ಮಾವತಿ ನನ್ನನ್ನು ಕೇಳಿದಳು, "ಅಂಕಲ್ ಮನುಷ್ಯ



**ವಾಸಮಲ್ಲಿಯ ಮೊಮ್ಮಕ್ಕಳು ಸಹ ಹುಲಿಕಲ್ಲಿನ ಸಮೀಪ ನಿಂತು ಫೋಟೋ ತೆಗೆಸಿಕೊಳ್ಳುತ್ತಿರುವುದು**

ಮಾತ್ರದವರು ಇಂಥ ಶಿಲ್ಪಗಳನ್ನು ಮಾಡಲು ಸಾಧ್ಯವೇ?" – ಎಂದು. ಸಾಕ್ಷಾತ್ ದೇವರೇ ಅವನ್ನು ಕೆತ್ತಿರಬೇಕೆಂದು ಆಕೆಯ ನಂಬಿಕೆ. ಆಕೆಯೊಂದಿಗೆ ವಾದ ಮಾಡಿ ನನ್ನ ನಾಗರಿಕ ಬುದ್ಧಿವಂತಿಕೆಯನ್ನು ಸಾಬೀತು ಮಾಡಲು ಹೋಗಲಿಲ್ಲ. ಅವರವರ ಭಾವ, ಅವರವರ ಭಕುತಿ!

ಅಂಥ ವೀರಗಲ್ಲುಗಳ ಬೆನ್ನು ಹತ್ತಿದರೆ, ಆ ಪ್ರದೇಶ ಒಂದು ಕಾಲದಲ್ಲಿ ಜನರು ವಾಸಿಸುತ್ತಿದ್ದ ಸ್ಥಳವಾಗಿತ್ತು, ಪ್ರಾಯಶಃ ಅಲ್ಲಿ ಒಂದು ಯುದ್ಧವೂ ನಡೆದಿರಬಹುದು, ಯುದ್ಧದಲ್ಲಿ ಹುತಾತ್ಮರಾದವರನ್ನು ಸ್ಮರಿಸುವ ವೀರಗಲ್ಲುಗಳು ಅವು, ಮುಂದೆ ಎಷ್ಟೋ ವರ್ಷಗಳ ನಂತರ ಅದು ಆದಿವಾಸಿಗಳ ಬೀಡಾಗಿದ್ದಿರಬಹುದು. ಪೊದೆಗಳ ಮಧ್ಯೆ ಹೂತುಹೋಗ ಬಹುದಾಗಿದ್ದ ಅವು ಅಕಸ್ಮಾತ್ ಪತ್ತೆಯಾದಾಗ, ಆದಿವಾಸಿಗಳಲ್ಲಿ ಅವನ್ನು ದೇವರೇ ಕೆತ್ತಿ ನಿಲ್ಲಿಸಿರಬಹುದು ಎಂಬ ನಂಬಿಕೆ ಹುಟ್ಟಿರಬಹುದು...

ಹುಲಿಕಲ್ ದರ್ಶನ ಮಾಡಿ ವಾಸಮಲ್ಲಿಯವರ ಮನೆಯ ದಾರಿ ಹಿಡಿದೆವು. ಅಂದಿನ ತಿರುಗಾಟದಿಂದ ನಿಜವಾಗಿ ದಣಿವಾಗಿತ್ತು. ಜೊತೆಗೆ ಹೊಟ್ಟೆ ಹಸಿವು. ಆದರೆ ಅವರ ಮಂದೆಯ ಸಮೀಪದಲ್ಲಿ ಹೋಟೆಲು, ಟೀ ಅಂಗಡಿ ಮುಂತಾದ ಯಾವುದೂ ಇರಲಿಲ್ಲ. ಊಟಕ್ಕೆ ಹೋಗಬೇಕಾದರೆ ಫಿಂಗರ್ ಪೋಸ್ಟ್‌ನಿಂದ ಆಟೋದವನನ್ನು ಕರೆಸಬೇಕು. ಅಲ್ಲಿಂದ ದೂರದ ಹೋಟೆಲಿಗೆ ಹೋಗಬೇಕು.

ಪರಿಸ್ಥಿತಿಯನ್ನು ಅರ್ಥ ಮಾಡಿಕೊಂಡವರಂತೆ, ವಾಸಮಲ್ಲಿ ಅಡುಗೆ ಮಾಡಲು ತಯಾರಿಗೆ ತೊಡಗಿದರು. ಮನೆಯೊಳಕ್ಕೆ ಹೊರಕ್ಕೆ ತಿರುಗಾಡುತ್ತಲೇ ಸ್ವಲ್ಪ ಹೊತ್ತಿಗೆಲ್ಲ ಅಡುಗೆ ಮಾಡಿ ನಮಗೆ ಊಟ ನೀಡಿದರು.

ಚಿತ್ರಲೇಖನ: **ಕೆ. ಪಿ. ಸ್ವಾಮಿ**
ನಂ. ೧೧, ೨ನೇ ಮಹಡಿ, ೨೧–ಬಿ ಕ್ರಾಸ್
ಶ್ರೀರಾಮ ದೇವಾಲಯ ರಸ್ತೆ ಈಜಿಪುರ
ಬೆಂಗಳೂರು – ೫೬೦ ೦೪೭



# ಬೀದರ
# ಐತಿಹಾಸಿಕ ಸಾಂಸ್ಕೃತಿಕ ವೈಭವ

## ಪೀಠಿಕೆ

ಬೀದರ ಕರ್ನಾಟಕ ರಾಜ್ಯದ ಅತ್ಯಂತ ಚಿಕ್ಕ ಜಿಲ್ಲೆಗಳಲ್ಲಿ ಒಂದು. ೫೪೫೮ ಚ.ಕಿ.ಮೀ. ವಿಸ್ತೀರ್ಣ ಹೊಂದಿರುವ ಈ ಜಿಲ್ಲೆಯಲ್ಲಿ ಐದು ತಾಲ್ಲೂಕುಗಳು, ೩೦ ಹೋಬಳಿಗಳು, ೬೨೬ ಹಳ್ಳಿಗಳಿವೆ. ಇದು ಸಮುದ್ರ ಮಟ್ಟದಿಂದ ಸುಮಾರು ೨೨೦೬ ಅಡಿ ಎತ್ತರದಲ್ಲಿದೆ. ಮಾಂಜರಾ, ಕಾರಂಜಾ, ಚುಳಕಿ ಇಲ್ಲಿ ಹರಿಯುವ ಪ್ರಮುಖ ನದಿಗಳು. ಎತ್ತರವಾದ ಬಯಲುಪ್ರದೇಶ, ಸಮಶೀತೋಷ್ಣ ಹವಾಗುಣ, ಸಮಯಕ್ಕೆ ಸರಿಯಾಗಿ ಬೀಳುವ ಮಳೆ ಈ ಜಿಲ್ಲೆಯ ಲಕ್ಷಣಗಳು. ಉದ್ದು, ಹೆಸರು, ಕಡಲೆ, ತೊಗರಿ, ಕುಸುಬಿ, ಜೋಳದಂಥ ಜೀವನಕ್ಕೆ ಅತ್ಯವಶ್ಯಕವಾದ ಬೆಳೆಗಳನ್ನು ಬೆಳೆಯುವ ಫಲವತ್ತಾದ ಕಪ್ಪು ಮಣ್ಣು, ಕೆಲವಷ್ಟು ಭಾಗ ಕೆಂಪು ಮಣ್ಣಿನ ಭೂಮಿ. ಭೂಮಿಯ ಹೊಟ್ಟೆಯನ್ನು ತಂಪಾಗಿ ಇಡುವ ಜಂಬುಕಲ್ಲು, ಸಿಹಿ ಸಿಹಿಯಾದ ನೀರು, ಸೀತಾಫಲ, ಮಾವು, ಪೇರಲ, ಬೋರೆಯಂಥ ರುಚಿ ರುಚಿಯಾದ ಹಣ್ಣುಗಳು, ಮಾವು, ಬೇವು, ನೇರಳೆ ಮೊದಲಾದ ಗಿಡಮರಗಳು, ಗಿಡಮರಗಳಲ್ಲಿ ಸುಂದರವಾದ ಹುಲ್ಲಿನ ಮನೆಗಳನ್ನು ಕಟ್ಟಿಕೊಂಡು ನೆಮ್ಮದಿಯ ಸಂಸಾರ ಹೂಡುವ ಗೀಜಗನ ಹಕ್ಕಿಗಳು, ಚಿಂವ್ ಚಿಂವ್ ನಾದದ ಪುಟ್ಟ ಪುಟ್ಟ ಗುಬ್ಬಿಗಳು, ಮುಗಿಲು ಹೊಳಪಿನ ಸುಂದರ ನೀಲಕಂಠ ಪಕ್ಷಿಗಳು, ಚಿಲಿಮಿಲಿ ಎಂದು ಓದುವ ಗಿಳಿಗಳು, ಸ್ವರವೆತ್ತಿ ಪಾಡುವ ಕೋಗಿಲೆಗಳು, ಎರಗಿ ಬಂದಾಡುವ ದುಂಬಿಗಳು, ಕೊಳದ ತಡಿಯೊಳಾಡುವ ಹಂಸಗಳು, ಗಿರಿ-ಗಹ್ವರದೊಳಾಡುವ ನವಿಲುಗಳು... ಹೀಗೆ ಇವೆಲ್ಲವುಗಳಿಂದ ಕೂಡಿದ ಬೀದರ ಜಿಲ್ಲೆ ತುಂಬ ಸುಂದರವಾಗಿದೆ. ಅತ್ಯಂತ ಸಮೃದ್ಧವಾಗಿದೆ. ನಿಸರ್ಗ ರಮ್ಯತೆಯಿಂದ ಕೂಡಿದೆ. ಬೆಂಗಳೂರು, ಮೈಸೂರು ಬಿಟ್ಟರೆ ಇಡೀ ಕನ್ನಡ ನಾಡಿನ ಸರಕಾರಿ ನೌಕರರು ನೌಕರಿ ಮಾಡಲು ಬಯಸುವುದು ಇದೇ ಜಿಲ್ಲೆಯಲ್ಲಿ. ಜೀವನ ಮಾಡುವುದಕ್ಕೆ ಅಷ್ಟೊಂದು ಹಿತವಾಗಿವೆ ಈ ಜಿಲ್ಲೆಯ ಗಾಳಿ, ಬೆಳಕು, ನೆಲ, ಜಲ, ಜನ, ಸಾಹಿತ್ಯ, ಸಂಸ್ಕೃತಿ, ಧರ್ಮ ಇತ್ಯಾದಿ.

ಬೀದರ ಜಿಲ್ಲೆ ಮಹಾರಾಷ್ಟ್ರ ಹಾಗೂ ಆಂಧ್ರಪ್ರದೇಶದಂಥ ಅನ್ಯ ರಾಜ್ಯಗಳ ಗಡಿಗೆ ಅಂಟಿಕೊಂಡಿದೆ. ರಾಜಧಾನಿ ಕೇಂದ್ರ ಬೆಂಗಳೂರಿನಿಂದ ಈ ಜಿಲ್ಲೆ ತುಂಬ ದೂರವಿದೆ. ಪ್ರಾಯಶಃ ಇದರಷ್ಟು ದೂರ ಉಳಿದ ಯಾವ ಜಿಲ್ಲೆಯೂ ಇಲ್ಲ. ಆದರೆ ಉಳಿದೆಲ್ಲ ಜಿಲ್ಲೆಗಳಿಗಿಂತಲೂ ಇದು ತುಂಬ ಮಹತ್ವದ ಜಿಲ್ಲೆಯಾಗಿದೆ. ಭೌಗೋಳಿಕವಾಗಿ ಕರ್ನಾಟಕ ರಾಜ್ಯದ ದಕ್ಷಿಣಕ್ಕೆ ಅಭಿಮುಖವಾಗಿ ಉತ್ತರ ದಿಕ್ಕಿನಲ್ಲಿ ಅತ್ಯಂತ ತುತ್ತತುದಿಯಲ್ಲಿರುವ ಬೀದರ ಜಿಲ್ಲೆ ಅದರ ಕಿರೀಟ ಎಂದೇ ಹೆಸರಾಗಿದೆ.

**ಡಾ|| ಗುರುಲಿಂಗಪ್ಪ ಧಬಾಲೆ**

ನಿಜಕ್ಕೂ ಬೀದರ ಜಿಲ್ಲೆ ಕರ್ನಾಟಕದ ಕಿರೀಟವೇ ಆಗಿದೆ. ಭೌಗೋಳಿಕವಾಗಿ ಮಾತ್ರವಲ್ಲ ಐತಿಹಾಸಿಕ, ಸಾಂಸ್ಕೃತಿಕ, ಸಾಹಿತ್ಯಿಕ, ಧಾರ್ಮಿಕ, ಪ್ರಾಕೃತಿಕ ಹೀಗೆ ಯಾವ ದೃಷ್ಟಿಯಿಂದ ನೋಡಿದರೂ ಅದು ಈ ರಾಜ್ಯದ ಕಿರೀಟವೇ ಸರಿ. ಕಿರೀಟ ಅಸ್ತಿತ್ವದ, ಗೌರವದ, ಅಧಿಕಾರದ, ಪ್ರತಿಷ್ಠೆಯ ಗುರುತು. ಹೀಗಾಗಿ ಬೀದರ ಎಂದರೆ ಕರ್ನಾಟಕದ ಗೌರವ, ಅದರ ಪ್ರತಿಷ್ಠೆ ಮತ್ತು ಅದರ ಅಸ್ತಿತ್ವ ಎಂದೇ ಹೇಳಬೇಕು.

### ಐತಿಹಾಸಿಕ-ಸಾಂಸ್ಕೃತಿಕ ವೈಭವ

ಬೀದರ ಮಹಾಭಾರತದ ಕಾಲದಷ್ಟು ಹಳೆಯದು. ಮಹಾಭಾರತದ ಕಾಲ ಕ್ರಿ. ಪೂ. ೨-೩ನೇ ಶತಮಾನ. ಈ ಕಾಲದಲ್ಲಿ ಬೀದರಕ್ಕೆ 'ವಿದುರಾನಗರ' ಎಂದು ಕರೆದರೆ, ಬೀದರ ಪ್ರದೇಶಕ್ಕೆ 'ಕುಂತಳನಾಡು' ಎಂದು ಕರೆಯುತ್ತಿದ್ದರು. 'ಮರಾಠಿಯ ಗುರುರಾಜ ಚಾರಿತ್ರ' ಎಂಬ ಗ್ರಂಥದಲ್ಲೂ ಬೀದರವನ್ನು 'ವಿದುರಾನಗರ' ಎಂದೇ ಕರೆಯಲಾಗಿದೆ. ಈ ವಿದುರಾನಗರದಲ್ಲಿ ಆ ಕಾಲದಲ್ಲಿ ಮಹಾಭಾರತದ ನಳ-ದಮಯಂತಿಯರು ವಾಸವಾಗಿದ್ದರು. ಅವರು ತಮಗಾಗಿಯೇ ಇಲ್ಲಿ ಸುಂದರವಾದ ಉದ್ಯಾನವೊಂದನ್ನು ನಿರ್ಮಿಸಿಕೊಂಡಿದ್ದರು ಎಂದು ಹೇಳಲಾಗುತ್ತದೆ.

ಬೀದರ ಜಿಲ್ಲೆಯ ನಿಜವಾದ ಇತಿಹಾಸ ನಂದರಿಂದ ಪ್ರಾರಂಭವಾಗುತ್ತದೆ. 'ನಂದಗಾಂವ' ಹೆಸರಿನ ಎರಡು ಊರುಗಳು ಈ ಜಿಲ್ಲೆಯಲ್ಲಿವೆ. ಆಮೇಲೆ ಇಲ್ಲಿ ಶಾತವಾಹನರು ಆಳ್ವಿಕೆ ನಡೆಸಿದರು. ಈ ಮನೆತನದ ಹಾಲಾಹಲ ಎಂಬ ಅರಸ ಕಲಿ ಹಾಗೂ ಕವಿ ಎರಡೂ ಆಗಿದ್ದ. ಅವನು ಬರೆದ 'ಗಾಥಾ ಸಪ್ತಶತಿ' ಎಂಬ ಪ್ರಾಕೃತ ಕಾವ್ಯ ತುಂಬ ಪ್ರಸಿದ್ಧವಾಗಿದೆ. ಅದರಲ್ಲಿ ತುಪ್ಪ, ಪೊಟ್ಟ, ರೊಟ್ಟಿ, ಊರೋ ಎಂಬ ಮೊದಲಾದ ಕನ್ನಡದ ಪದಗಳಿವೆ. ಈ ಹಾಲಾಹಲನ ಹೆಸರಿನ 'ಹಾಲಹಳ್ಳಿ' ಎಂಬ ಎರಡು

ಗ್ರಾಮಗಳು ಬೀದರ ಜಿಲ್ಲೆಯಲ್ಲಿವೆ. ಒಂದು ಈ ಜಿಲ್ಲೆಯ ಬಸವಕಲ್ಯಾಣ ತಾಲ್ಲೂಕಿನಲ್ಲಿದ್ದರೆ, ಇನ್ನೊಂದು ಭಾಲ್ಕಿ ತಾಲ್ಲೂಕಿನಲ್ಲಿದೆ. ನೆರೆಯ ಮಹಾರಾಷ್ಟ್ರದ ನೀಲಂಗಾ ತಾಲ್ಲೂಕಿನಲ್ಲೂ ಒಂದು ಹಾಲಹಳ್ಳಿ ಇದೆ. ಈ ಹಾಲಹಳ್ಳಿ ಬಸವಕಲ್ಯಾಣಕ್ಕೆ ತುಂಬ ಸಮೀಪವಾಗುತ್ತದೆ. ಆ ಕಾಲದಲ್ಲಿ ಇದು ಬೀದರ ಪ್ರದೇಶದ ವ್ಯಾಪ್ತಿಗೆ ಒಳಪಟ್ಟಿತ್ತು. ರಾಜಶೇಖರ ಎಂಬ ಸಂಸ್ಕೃತ ಕಾವ್ಯ ಮೀಮಾಂಸಕ ತನ್ನ 'ಕಾವ್ಯ ಮೀಮಾಂಸೆ' ಎಂಬ ಗ್ರಂಥದಲ್ಲಿ ಶಾತವಾಹನನು ಕುಂತಳಾಧೀಶ್ವರನು ಎಂದು ಹೇಳಿದ್ದಾನೆ. ಈ ಶಾತವಾಹನರ ಕಾಲ ಕ್ರಿ. ಪೂ. ೨೩೫ರಿಂದ ಕ್ರಿ. ಶ. ೨೨೫. ಹೀಗಾಗಿ ಬೀದರ, ಬೀದರ ಪ್ರದೇಶ ಹಾಗೂ ಕನ್ನಡ ಭಾಷೆ ಶಾತವಾಹನರ ಕಾಲದಷ್ಟು ಹಳೆಯವು. ಈ ದೃಷ್ಟಿಯಿಂದ ನಾವು ಕನ್ನಡ ನಾಡು-ನುಡಿ-ಸಂಸ್ಕೃತಿಯ ಮೂಲ ನೆಲೆ ಎಂದರೆ ಬೀದರ ಜಿಲ್ಲೆ ಎಂದು ಹೇಳಬಹುದು.

ನಂದ, ಶಾತವಾಹನರ ನಂತರ ಬೀದರ ಜಿಲ್ಲೆಯನ್ನು ವಾಕಾಟಕ, ರಾಷ್ಟ್ರಕೂಟ, ಬಾದಾಮಿ, ಚಾಲುಕ್ಯ, ಕಲ್ಯಾಣಿ ಚಾಲುಕ್ಯ, ಕಳಚೂರಿ, ಬಹಮನಿ ಹಾಗೂ ಹೈದ್ರಾಬಾದ ನಿಜಾಮ... ಹೀಗೆ ಎಲ್ಲ ಅರಸು ಮನೆತನಗಳು ಆಳಿದವು. ಇವುಗಳಲ್ಲಿ ಬಾದಾಮಿ ಚಾಲುಕ್ಯರ ಕಾಲಕ್ಕೆ ಈ ಜಿಲ್ಲೆ ಮಹತ್ವದ ದಿನಗಳನ್ನು ಕಾಣಲು ಪ್ರಾರಂಭಿಸಿತು. ಮುಂದೆ ರಾಷ್ಟ್ರಕೂಟ, ಕಲ್ಯಾಣಿ, ಚಾಲುಕ್ಯ, ಕಳಚೂರಿ, ಬಹಮನಿ ಅರಸರ ಕಾಲದಲ್ಲಿ ಅದು ವೈಭವದ ಎತ್ತರವನ್ನು ಕಂಡಿತು. ಈ ನಾಲ್ಕೂ ಮನೆತನಗಳ ಅರಸರು ಬೀದರ ಜಿಲ್ಲೆಯನ್ನೇ ಕೇಂದ್ರವಾಗಿಟ್ಟುಕೊಂಡು ಕನ್ನಡ ಸಾಮ್ರಾಜ್ಯವನ್ನು ಕಟ್ಟಿದರು.

ರಾಷ್ಟ್ರಕೂಟರ ಪ್ರಾರಂಭದ ರಾಜಧಾನಿ ಈ ಜಿಲ್ಲೆಯ ಮೋರಖಂಡಿ. ಇದರ ಆಗಿನ ಹೆಸರು ಮಯೂರಖಂಡಿ. ಗೋವಿಂದ, ದಂತಿದುರ್ಗ, ಅಮೋಘವರ್ಷ ನೃಪತುಂಗ, ಮೊದಲನೇ ಕೃಷ್ಣ ಈ ಮೊದಲಾದವರು ರಾಷ್ಟ್ರಕೂಟ ಮನೆತನದ ಪ್ರಮುಖ ಅರಸರು. ಇವರಲ್ಲಿ ಅಮೋಘವರ್ಷ ನೃಪತುಂಗ ತನ್ನ ರಾಜಧಾನಿಯನ್ನು ಮೋರಖಂಡಿಯಿಂದ ಗುಲಬರ್ಗಾ ಜಿಲ್ಲೆಯ ಮಳಖೇಡಕ್ಕೆ ಸ್ಥಳಾಂತರಿಸಿದ. ಈ ಮಳಖೇಡ ಬೀದರದಿಂದ ಅಷ್ಟೇನೂ ದೂರವಿಲ್ಲ. ಅತ್ಯಂತ ಸಮೀಪದಲ್ಲಿಯೇ ಇದೆ. ಕಾಲದ ಬದಲಾವಣೆಗೆ ಒಳಗಾಗಿ ಇಂದು ಇದು ಗುಲ್ಬರ್ಗಾ ಜಿಲ್ಲೆಯಲ್ಲಿದ್ದಿರಬಹುದು. ಆದರೆ ಅಂದು ಬೀದರದ ಒಂದು ಭಾಗವೇ ಆಗಿತ್ತು. ಹೀಗಾಗಿ ರಾಷ್ಟ್ರಕೂಟರು ಬೀದರದ ಅರಸರು ಎಂಬುದು ಮುಖ್ಯ ಅಂಶ.

ಬೀದರದ ಈ ರಾಷ್ಟ್ರಕೂಟ ಅರಸರಿಗೆ ಕನ್ನಡ ಸಾಹಿತ್ಯ-ಸಂಸ್ಕೃತಿ-ಕಲೆ ಎಂದರೆ ಎಲ್ಲಿಲ್ಲದ ಅಭಿಮಾನ. ಇವರ ಕಾಲದಲ್ಲಿ ಕನ್ನಡದ ಅರ್ಥಾತ್ ಬೀದರದ ಸಾಮ್ರಾಜ್ಯ ಕಾವೇರಿಯಿಂದ ಗೋದಾವರಿವರೆಗೆ ಹರಡಿತ್ತು. ಮುಂಬೈ, ಅಜಂತಾ-ಎಲ್ಲೋರಾ ಮೊದಲಾದ ಕಡೆ ಅದ್ಭುತವಾದ ಗುಹಾಂತರ ದೇವಾಲಯಗಳು ನಿರ್ಮಾಣವಾದವು. ಶೈವ, ವೈಷ್ಣವ, ಜೈನ ಧರ್ಮದ ಅನೇಕ ಸುಂದರ ಶಿಲ್ಪಗಳು ಕೆತ್ತಲ್ಪಟ್ಟವು. ಶ್ರೀವಿಜಯ ಎಂಬ ಕವಿ ಈ ಕಾಲದಲ್ಲಿ 'ಕವಿರಾಜ ಮಾರ್ಗ'ವೆಂಬ ಲಾಕ್ಷಣಿಕ ಗ್ರಂಥವನ್ನು ಬರೆದ. ಕನ್ನಡದ ಇನ್ನೊಂದು ಕೃತಿ 'ವಡ್ಡಾರಾಧನೆ' ಇದೇ ಕಾಲದಲ್ಲಿ ಈ ಜಿಲ್ಲೆಯ ಹಳ್ಳಿಖೇಡ ಗ್ರಾಮದಲ್ಲಿ ಭ್ರಾಜಿಷ್ಣು ಎಂಬ ಕವಿಯಿಂದ ರಚನೆಯಾಯಿತು. ಇವುಗಳಲ್ಲಿ 'ಕವಿರಾಜ ಮಾರ್ಗ' ಕನ್ನಡದ ಮೊದಲನೇ ಉಪಲಬ್ಧ ಗ್ರಂಥವಾದರೆ, 'ವಡ್ಡಾರಾಧನೆ' ಕನ್ನಡದ ಪ್ರಪ್ರಥಮ ಗದ್ಯಕಾವ್ಯವಾಗಿದೆ. ಇವೆರಡೂ ಕೃತಿಗಳು ಕನ್ನಡ ಸಾಹಿತ್ಯದ ಬಹುದೊಡ್ಡ ಮೈಲಿಗಲ್ಲುಗಳು ಎಂದೆನಿಸಿವೆ. ಕನ್ನಡಕ್ಕೆ ಇವು ಬೀದರ ಜಿಲ್ಲೆ ನೀಡಿರುವ ಬಹುದೊಡ್ಡ ಕೊಡುಗೆಗಳಾಗಿವೆ. ಕನ್ನಡ ಭಾಷೆಗೆ ಹೇಗೋ ಹಾಗೇ ಕನ್ನಡ ಸಾಹಿತ್ಯಕ್ಕೂ ಬೀದರ ಮೂಲ ನೆಲೆ ಎಂಬುದಕ್ಕೆ ಇವು ದಟ್ಟ ಸಾಕ್ಷಿಯಾಗಿವೆ.

ರಾಷ್ಟ್ರಕೂಟರ ನಂತರ ಬೀದರದಲ್ಲಿ ಕನ್ನಡ ಸಾಮ್ರಾಜ್ಯವನ್ನು ಕಲ್ಯಾಣಿ ಚಾಲುಕ್ಯರು ಕಟ್ಟಿದರು. ಈ ಅರಸರು ಈ ಜಿಲ್ಲೆಯ ಕಲ್ಯಾಣವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಅತ್ಯಂತ ವೈಭವದಿಂದ ಆಳಿದರು. ಇವರ ಕಾಲದಲ್ಲಿ ಬೀದರದ ವೈಭವ ಇನ್ನಷ್ಟು ಉಚ್ಛ್ರಾಯ ಸ್ಥಿತಿಗೆ ಹೋಗಿ ಮುಟ್ಟಿತು. ಅದು ಸುವರ್ಣ ಯುಗವನ್ನೇ ಕಂಡಿತು. ಈ ಮನೆತನದ ಪ್ರಮುಖ ಅರಸ ಆರನೇ ವಿಕ್ರಮಾದಿತ್ಯ ತನ್ನ ಹೆಸರಿನಲ್ಲಿಯೇ ವಿಕ್ರಮಶಕೆಯನ್ನು ಪ್ರಾರಂಭ ಮಾಡಿದ. ಕಲ್ಯಾಣ ಸಾಮ್ರಾಜ್ಯವನ್ನು ಈತ ಉತ್ತರದಲ್ಲಿ ಅಸ್ಸಾಂ, ನೇಪಾಳಗಳವರೆಗೆ, ದಕ್ಷಿಣದಲ್ಲಿ ಸಿಂಹಳ ದ್ವೀಪದವರೆಗೆ, ಪೂರ್ವ ಮತ್ತು ಪಶ್ಚಿಮಗಳಲ್ಲಿ ಸಮುದ್ರದವರೆಗೂ ವಿಸ್ತರಿಸಿದ. ಹೀಗಾಗಿ ಈತನ ಕಾಲದಲ್ಲಿ ಬೀದರದ ಹಿರಿಮೆ ದೇಶ ವಿದೇಶಗಳವರೆಗೂ ಹರಡಿತು.

ಆರನೇ ವಿಕ್ರಮಾದಿತ್ಯ ಅಪ್ರತಿಮ ವೀರನಾಗಿರುವುದಷ್ಟೇ ಅಲ್ಲ ಸಾಹಿತ್ಯ, ಕಲೆ, ಧರ್ಮಗಳ ಬಗ್ಗೆಯೂ ತುಂಬ ಶಕ್ತಿ ಹೊಂದಿದವನಾಗಿದ್ದನು. ತನ್ನ ಸಾಮ್ರಾಜ್ಯವ್ಯಾಪಿ ಈತ ಶೈವ, ಜೈನ, ವೈಷ್ಣವ ಮೊದಲಾದ ಧರ್ಮಗಳ ಗುಡಿಗಳನ್ನು, ಶಿಲ್ಪಗಳನ್ನು ನಿರ್ಮಾಣ ಮಾಡಿದನು. ಈತನ ಪಟ್ಟದ ರಾಣಿ ಚಂದಲದೇವಿ ಹಾಗೂ ಅವನ ಪ್ರಿಯಾಂಗನೆ ಹಿರಿಯ ಕೇತಲದೇವಿ ಶ್ರೇಷ್ಠದರ್ಜೆಯ ನೃತ್ಯಗಾತಿ ಹಾಗೂ ಸಂಗೀತ ವಿದುಷಿಯರಾಗಿದ್ದರು. ಅನೇಕ ಸಂಗೀತ ವಿದ್ವನ್ಮಣಿಗಳಿಗೆ ಹಾಗೂ ನಾಟ್ಯ ವಿಶಾರದೆಯರಿಗೆ ಇವರು ಆಶ್ರಯ ನೀಡಿದ್ದರು. ಅಂದು ಬೀದರ ಜಿಲ್ಲೆಯ ಗೋರ್ಟಾ ಸಂಗೀತ ವಿದ್ಯಾಲಯದ ಪ್ರಮುಖ ಕೇಂದ್ರವಾಗಿತ್ತು. ಇಲ್ಲಿ ಆಗ ಸಂಗೀತದ ಇನ್ನೂರು ಅಧ್ಯಾಪಕರು ಸಾವಿರಾರು ವಿದ್ಯಾರ್ಥಿಗಳಿಗೆ ಸಂಗೀತದ ಅಭ್ಯಾಸ ಹೇಳಿಕೊಡುತ್ತಿದ್ದರು.

ವಿಕ್ರಮಾದಿತ್ಯ ಅರಸ ಶಿಲ್ಪ, ಸಂಗೀತ, ನೃತ್ಯ ಕಲೆಗಳ ಜೊತೆಗೆ ಸಾಹಿತ್ಯಪ್ರೇಮಿಯೂ ಆಗಿದ್ದನು. ಬಿಲ್ಹಣ, ವಿಜ್ಞಾನೇಶ್ವರ, ವಾದಿರಾಜ ಮೊದಲಾದವರು ಇಲ್ಲಿ ಇವನ ಆಶ್ರಯದಲ್ಲಿ ಸಾಹಿತ್ಯದ ನಿರ್ಮಾಣ ಮಾಡಿದರು. ಇವರಲ್ಲಿ ಬಿಲ್ಹಣ ಕಾಶ್ಮೀರದವನಾಗಿದ್ದರೆ, ವಿಜ್ಞಾನೇಶ್ವರ ಇದೇ ಜಿಲ್ಲೆಯ ಭಾಲ್ಕಿ ತಾಲ್ಲೂಕಿನ ಮಾಸಿಮಾಡ ಗ್ರಾಮದವನು.

ಈ ಬೀದರ ಜಿಲ್ಲೆ ಇದೇ ಕಲ್ಯಾಣದಿಂದ ರಾಜ್ಯಭಾರ ಮಾಡಿದ ಕಳಚೂರಿ ಅರಸರ ಕಾಲ ೧೨ನೇ ಶತಮಾನ. ಈ ಕಾಲ ಬೀದರ ಜಿಲ್ಲೆ, ಕರ್ನಾಟಕ ರಾಜ್ಯ, ಭಾರತ ದೇಶ ಮಾತ್ರವಲ್ಲ, ಇಡೀ ಜಗತ್ತಿನ ಇತಿಹಾಸದಲ್ಲಿಯೇ ಅತ್ಯಂತ ವಿಶಿಷ್ಟವಾಗಿದೆ, ತುಂಬ ಮಹತ್ವಪೂರ್ಣವಾಗಿದೆ. ಬೀದರ ಅದ್ಭುತ ಕ್ರಾಂತಿಯ ನೆಲ ಎಂಬುದಕ್ಕೆ ಅದು ಸಾಕ್ಷಿಯಾಗಿದೆ. ಸಾಮಾಜಿಕ, ಸಾಹಿತ್ಯಿಕ, ಧಾರ್ಮಿಕ, ಸಾಂಸ್ಕೃತಿಕ ಹೀಗೆ ಮಾನವನ ಜೀವನದ ಎಲ್ಲ ಕ್ಷೇತ್ರಗಳಲ್ಲೂ ಈ ಕಾಲದಲ್ಲಿ ಈ ಜಿಲ್ಲೆ ಅದ್ಭುತ ಬದಲಾವಣೆಗಳನ್ನು ಕಂಡಿತು. ಬಸವಣ್ಣನವರು ಈ ಜಿಲ್ಲೆಯ ಬಸವಕಲ್ಯಾಣದಲ್ಲಿ ಅನುಭವ ಮಂಟಪವನ್ನು ಸ್ಥಾಪಿಸಿದರು. ಶೂದ್ರ ವರ್ಗದ ಅಲ್ಲಮಪ್ರಭು ಈ ಅನುಭವ ಮಂಟಪದ ಅಧ್ಯಕ್ಷರಾದರು. ಜಗತ್ತಿನ ಎಲ್ಲ ಜಾತಿ, ವರ್ಗ, ವರ್ಣ, ಲಿಂಗದ ಶರಣರು ದೇಶ-ವಿದೇಶಗಳಿಂದ ಬಂದು ಇಲ್ಲಿ ಸೇರಿದರು. ಮಾನವ ಕಲ್ಯಾಣ ಕುರಿತು ಚಿಂತಿಸಿದರು. ಅದ್ಭುತವಾದ ವಚನ ಸಾಹಿತ್ಯವನ್ನು ರಚಿಸಿದರು.

ಕಳಚೂರಿ ಅರಸರ ಆಳ್ವಿಕೆಯ ನಂತರ ಕ್ರಿ. ಶ. ೧೧೮೯ರಿಂದ ಕ್ರಿ. ಶ. ೧೩೨೧ರವರೆಗಿನ ಕಾಲದಲ್ಲಿ ಬೀದರ ಜಿಲ್ಲೆ ರಾಜಕೀಯವಾಗಿ ಅಸ್ಥಿರತೆಯನ್ನು ಕಂಡಿತು. ಆಮೇಲೆ ಇಲ್ಲಿ ೧೩೨೧ರಲ್ಲಿ ಮುಸ್ಲಿಮ್ ಅರಸರು ಕಾಲಿರಿಸಿದರು. ಮುಸ್ಲಿಮ್ ಅರಸರ ಯುಗ ಪ್ರಾರಂಭವಾಯಿತು. ತೊಘಲಕ್, ಬಹಮನಿ, ಬರೀದ್‌ಶಾಹಿ, ಆದಿಲ್‌ಶಾಹಿ, ಮೊಗಲ್, ನಿಜಾಂಶಾಹಿ ಈ ಮೊದಲಾದ ಮುಸ್ಲಿಮ್ ಮನೆತನಗಳ ಅರಸರು ಈ ಜಿಲ್ಲೆಯಲ್ಲಿ ಕ್ರಿ. ಶ. ೧೩೨೧ರಿಂದ ಭಾರತ ದೇಶಕ್ಕೆ ಸ್ವಾತಂತ್ರ್ಯ ಸಿಗುವವರೆಗೆ, ಅಂದರೆ ೧೯೪೭ರವರೆಗೆ ಸುಮಾರು ೬೨೭ ವರ್ಷಗಳ ಕಾಲ ರಾಜ್ಯಭಾರ ಮಾಡಿದರು.

ಈ ಮುಸ್ಲಿಮ್ ಮನೆತನಗಳ ಅರಸರಲ್ಲಿ ಬಹಮನಿ ಮನೆತನದ ಅರಸರ ಕಾಲ



**ಕೋಟೆಯ ಮೇಲೆ ದೊಡ್ಡ ದೊಡ್ಡ ಫಿರಂಗಿಗಳು**

ಬೀದರ ಜಿಲ್ಲೆಯ ಇತಿಹಾಸದಲ್ಲಿ ಅತ್ಯಂತ ಗಮನಾರ್ಹವಾಗಿದೆ. ಬೀದರವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳ್ವಿಕೆ ನಡೆಸಿದ ಈ ಅರಸರು ಬೀದರ ಜಿಲ್ಲೆಗೆ ಮತ್ತೆ ಗತಕಾಲದ ವೈಭವವನ್ನು ತಂದುಕೊಟ್ಟರು. ೧೪, ೧೫ನೇ ಶತಮಾನಗಳಲ್ಲಿ ಬೀದರ ಈ ಅರಸರಿಂದ ಅನೇಕ ಹೊಸ ಬದಲಾವಣೆಗಳನ್ನು ಕಂಡಿತು.

ಬಹಮನಿ ಅರಸರು ಬೀದರಕ್ಕೆ ಮೊಹಮದಾಬಾದ ಬೀದರ ಎಂದು ಮರುನಾಮಕರಣ ಮಾಡಿದರು. ಅವರು ಬೀದರದ ಹಳೆ ಹಿಂದೂ ಶೈಲಿಯ ಕೋಟೆಯನ್ನು ಪುನರ್‌ಅಭಿವೃದ್ಧಿಪಡಿಸಿದರು. ಕೋಟೆಯ ಮೇಲೆ ದೊಡ್ಡ ದೊಡ್ಡ ಫಿರಂಗಿಗಳು ಸ್ಥಾಪನೆಗೊಂಡವು. ಬೀದರ ನಗರದಲ್ಲಿ ಸುಂದರವಾದ ಉದ್ಯಾನಗಳು, ಕಾರಂಜಿಗಳು ನಿರ್ಮಾಣವಾದವು. ಇದೇ ವೇಳೆಗೆ ಇಲ್ಲಿ ಸೂಫಿ ಸಂತರ ಆಗಮನವಾಯಿತು. ಸೂಫಿ ಸಂತರು ಉರ್ದು ಹಾಗೂ ಪರ್ಷಿಯನ್ ಭಾಷೆಗಳಲ್ಲಿ ಸೂಫಿ ಸಾಹಿತ್ಯವನ್ನು ನಿರ್ಮಾಣ ಮಾಡಿದರು. ವಿಶ್ವವಿಖ್ಯಾತ ಬಿದ್ರಿಕಲೆ ಕಾಲಿರಿಸಿತು. ಮಹ್ಮದ್ ಗವಾನ ಎಂಬ ಪ್ರಧಾನಮಂತ್ರಿ ಬೀದರದಲ್ಲಿ 'ಮದ್ರಸ್' ಎಂಬ ಮಹಾವಿದ್ಯಾಲಯವನ್ನು ಸ್ಥಾಪಿಸಿದನು. ಸುಂದರವಾದ ಪರ್ಷಿಯನ್ ಕಲಾ ನೈಪುಣ್ಯತೆಯಿಂದ ಕೂಡಿದ ಈ ಮಹಾವಿದ್ಯಾಲಯ ೩೦೦೦ ಹಸ್ತಪ್ರತಿಯ ಗ್ರಂಥಾಲಯ ಹೊಂದಿದ್ದಿತು. ಬೀದರ ಶೈಕ್ಷಣಿಕವಾಗಿ ಈ ಕಾಲದಲ್ಲಿ ಅಂತರರಾಷ್ಟ್ರೀಯ ಖ್ಯಾತಿ ಗಳಿಸಿತು. ಅಂದು ಇಲ್ಲಿಗೆ ಮಧ್ಯಪ್ರಾಚ್ಯದಿಂದ ಬಂದಿದ್ದ ಫರಿಸ್ತಾ ಎಂಬ ಚರಿತ್ರಕಾರನು 'ಬೀದರ ಕಾರಂಜಿಗಳಿಂದ, ಆಹ್ಲಾದಕರ ಹವಾಮಾನದಿಂದ ಸುಂದರವಾಗಿದೆ' ಎಂದು ಬೀದರ ನಗರವನ್ನು ಕುರಿತು ಕೊಂಡಾಡಿದ ಮಾತು ಬಹಮನಿ ಅರಸರ ಕಾಲದ ಬೀದರಕ್ಕೆ ಕನ್ನಡಿ ಹಿಡಿಯುತ್ತದೆ.

**ಐತಿಹಾಸಿಕ–ಸಾಂಸ್ಕೃತಿಕ ವೈಭವಕ್ಕೊಂದು ಕಪ್ಪು ಚುಕ್ಕೆ**

ಇಂಥ ಅತ್ಯಂತ ಅದ್ಭುತವಾದ, ವೈಭವೋಪೇತವಾದ ಚರಿತ್ರೆಯನ್ನು ಹೊಂದಿದ ಬೀದರದ ಇತಿಹಾಸದಲ್ಲಿ ನಿಜಾಂಶಾಹಿ ಮನೆತನದ ಅರಸರ ಕಾಲ ಎಂದೆಂದೂ ಮರೆಯಲಾರದಂಥ ತುಂಬ ಭಯಾನಕ ಕಹಿ ಘಟನೆಗಳಿಂದ ಕೂಡಿದೆ. ಈ ಮನೆತನದ ಒಟ್ಟು ೭ ಜನ ನಿಜಾಮರು ಕ್ರಿ. ಶ. ೧೭೨೪ರಿಂದ ೧೭ನೇ ಸೆಪ್ಟೆಂಬರ್ ೧೯೪೮ರವರೆಗೆ ಈ ಭಾಗವನ್ನು ಹೈದ್ರಾಬಾದದಿಂದ ಆಳಿದರು. ಅವರಲ್ಲಿ ಈ ಮನೆತನದ ಉಸ್ಮಾನ್ ಅಲಿಖಾನ್ ಬಹಾದ್ದೂರ ಎಂಬ ಕೊನೆಯ ಅರಸ ಇಡೀ ಹೈದ್ರಾಬಾದ ಭಾಗವನ್ನು ಮುಸ್ಲಿಮ್ ರಾಜ್ಯವನ್ನಾಗಿ ನಿರ್ಮಾಣ ಮಾಡುವ ಕೆಟ್ಟ ಉದ್ದೇಶವನ್ನು ಹೊಂದಿದ್ದನು. ತನ್ನ ಈ ಉದ್ದೇಶದ ಈಡೇರಿಕೆಗಾಗಿ ಈತ ಈ ಭಾಗದ ಜನರಲ್ಲಿ ಮತೀಯ ಭಾವನೆ ತುಂಬಲು ಪ್ರಾರಂಭಿಸಿದನು. ಆದರೆ ಇದು ಶರಣರ ಹಿನ್ನೆಲೆ ಹೊಂದಿದ ಪವಿತ್ರ ನೆಲ. ಹೀಗಾಗಿ ಈ ಮೊದಲು ಇಲ್ಲಿನ ಜನರಲ್ಲಿ ಇಂಥ ಯಾವ ಭಾವನೆಯೂ ಇದ್ದಿರಲಿಲ್ಲ. ಜಾತಿ–ಮತ–ಪಂಥ–ಧರ್ಮ–ಸಂಸ್ಕೃತಿ–ಭಾಷೆಗಳಲ್ಲಿ ಯಾವುದೇ ಭೇದವನ್ನೆಣಿಸದೆ ಅವರು ಒಬ್ಬರಿಗೊಬ್ಬರು ಪರಸ್ಪರ ಸ್ನೇಹ–ಪ್ರೀತಿಯಿಂದ ಅನ್ಯೋನ್ಯವಾಗಿ ಜೀವನ ಮಾಡುತ್ತಿದ್ದರು. ಆದರೆ ಈ ಅರಸ ಅವರ ಈ ಸೌಹಾರ್ದತೆಯ, ಸಮನ್ವಯತೆಯ, ಧರ್ಮಸಹಿಷ್ಣುತೆಯ ಸುಂದರ ಜೀವನದಲ್ಲಿ ಬಿರುಗಾಳಿ ಎಬ್ಬಿಸಿದ. ಈ ಸಂದರ್ಭದಲ್ಲಿ ಈ ಭಾಗದ ಈ ಕಾಲದ ಶರಣರು, ಅನುಭಾವಿಗಳು, ತತ್ವಪದಕಾರರು, ಮಠಾಧೀಶರು ಜಾಗೃತರಾದರು. ಜನರಲ್ಲಿ ಈ ಮತೀಯ ಭಾವನೆ ಪ್ರಬಲಗೊಳ್ಳದಂತೆ ಎಚ್ಚರ ವಹಿಸಿದರು.

ಭಾಲ್ಕಿ ಹಿರೇಮಠ ಸಂಸ್ಥಾನದ ಲಿಂಗೈಕ್ಯ ಪೂಜ್ಯ ಡಾ॥ ಚನ್ನಬಸವ ಪಟ್ಟದ್ದೇವರು ಬೀದರ ಭಾಗದ ಅತ್ಯಂತ ಪ್ರಮುಖ ಮಠಾಧೀಶರು. ಆಧುನಿಕ ಬಸವಣ್ಣ ಎಂದೇ ಖ್ಯಾತರಾದ ಇವರು ಈ ನಿಜಾಮನ ಕಾಲದಲ್ಲಿ ಶಾಂತಿವರ್ಧಕ ಎಂಬ ಶಿಕ್ಷಣ ಸಂಸ್ಥೆಯೊಂದನ್ನು ತೆರೆಯುವುದಲ್ಲದೆ ಹೊರಗೆ ಉರ್ದು ಬೋರ್ಡ ಹಾಕಿ ಒಳಗೆ ಕನ್ನಡ ಕಲಿಸುವುದರ ಮೂಲಕ ಈ ಭಾಗದ ಕನ್ನಡ ಭಾಷೆಯ ಶಿಕ್ಷಣವನ್ನು ಉಳಿಸಿದರು. ಮಾತ್ರವಲ್ಲ, ಇವರು ಇಲ್ಲಿನ ಜನರಲ್ಲಿನ ಮತೀಯ ಭಾವನೆಯನ್ನು ಹೋಗಲಾಡಿಸಲು ಮಾಡಿರುವ ಪ್ರಯತ್ನ ಕೂಡ ಇಲ್ಲಿ ಉಲ್ಲೇಖನಾರ್ಹವಾದುದು. ಒಮ್ಮೆ ಮುಸ್ಲಿಮರ ಗುಂಪೊಂದು ಉದ್ದೇಶಪೂರ್ವಕವಾಗಿಯೇ ಮಠದಲ್ಲಿ ಗೋವು ಕಡಿಯುವಂಥ ಕಾರ್ಯಕ್ರಮವೊಂದನ್ನು ಹಮ್ಮಿಕೊಳ್ಳಲು ಯೋಜಿಸಿದ್ದರು. ಈ ವಿಷಯ ಪೂಜ್ಯ ಶ್ರೀಗಳಿಗೆ ತಿಳಿಯಿತು. ತಕ್ಷಣ ಅವರು ನಿಜಾಂ ಸರಕಾರದಲ್ಲಿ ಸೈನಿಕನಾಗಿದ್ದ ಗಣಪತಿ ಟೋಕರೆ ಎಂಬುವವನನ್ನು ಕರೆಸಿ ಅವನ ಮೂಲಕ ಈ ಮುಸ್ಲಿಮ್ ಜನರಿಗೆ ಬಸವಣ್ಣನವರ ಜೀವಪರ ವಿಚಾರಗಳನ್ನು ಮನವರಿಕೆ




ಮಾಡಿಕೊಟ್ಟರು. ಆಗ ಆ ಮುಸ್ಲಿಮ್ ಬಂಧುಗಳು ಪೂಜ್ಯ ಶ್ರೀಗಳ ವ್ಯಕ್ತಿತ್ವ ಹಾಗೂ ಬಸವಣ್ಣನವರ ತತ್ವಗಳಿಗೆ ಮಾರುಹೋಗಿ ಮಠದಲ್ಲಿ ತಾವು ಮಾಡಬೇಕೆಂದಿದ್ದ ಈ ಹೀನಕೃತ್ಯವನ್ನು ಕೈಬಿಟ್ಟರು. ಶ್ರೀಗಳ ಕಾಲಿಗೆ ಬಿದ್ದು ಕ್ಷಮೆ ಕೇಳಿದರು.

ಹೀಗೆ ಭಾಲ್ಕಿಯ ಡಾ॥ ಚನ್ನಬಸವ ಪಟ್ಟದ್ದೇವರರಂಥ ಮಠಾಧೀಶರಾದಿಯಾಗಿ ಮುಡಬಿಯ ಮಸ್ತ ಅಲಿಶಾ ಖಾದರಿ, ಬೋರಗಿ ರೆಹಮಾನ ಸಾಬ, ಧುಮ್ಮನಸೂರ ಸಿದ್ಧಪ್ರಭು, ನಿಡವಂಚಿ ಭದ್ರೇಶ್ವರ, ಕೊಳ್ಳೂರು ಹುಸನಾ, ಕಾಳಗಾಪುರ ಸಿದ್ರಾಮಪ್ಪ ಬಿರಾದಾರ, ಅಣದೂರದ ಜಹೂರ ಅಲಿಶಾರಂಥ ಅನೇಕ ತತ್ವಪದಕಾರರು, ಮುಚಳಂಬಿಯ ನಾಗಭೂಷಣ ಶಿವಯೋಗಿ, ನಾವದಗಿ ರೇವಪಯ್ಯರಂಥ ಅನುಭಾವಿಗಳು ಮೊದಲಾದವರೆಲ್ಲರೂ ನಿಜಾಮನಿಂದ ಪ್ರಕ್ಷುಬ್ಧವಾಗಿದ್ದ ಇಲ್ಲಿನ ಜನರ ಮನಸ್ಸುಗಳನ್ನು ತಿಳಿಗೊಳಿಸಲು ಪ್ರಯತ್ನಿಸಿದರು. ಆದರೆ ಈ ನಿಜಾಮ್ ಈ ಭಾಗವನ್ನು ಎರಡನೇ ಪಾಕಿಸ್ತಾನ ಮಾಡಬೇಕೆಂಬ ತನ್ನ ಹಟವನ್ನು ಕೈಬಿಡಲಿಲ್ಲ. ಅದನ್ನು ಸಾಧಿಸುವ ಸಲುವಾಗಿ ಅವನು ಕಾಸಿಂ ರಜವಿ ಎಂಬ ವಕೀಲನೊಬ್ಬನ ನೇತೃತ್ವದಲ್ಲಿ 'ಇತ್ತೆ–ಹಾದ–ಉಲ್–ಮುಸಲ್ಮೀನ್' ಎಂಬ ಸಂಸ್ಥೆಯೊಂದನ್ನು ಹುಟ್ಟುಹಾಕಿದನು. ರಜಾಕಾರ ಚಳವಳಿ ಪ್ರಾರಂಭವಾಯಿತು. ಈ ಚಳವಳಿ ಈ ಭಾಗದ ಇಡೀ ಮುಸ್ಲಿಮೇತರ ಧರ್ಮಗಳ ಜನರನ್ನು ಸಂಪೂರ್ಣ ನಿರ್ನಾಮ ಮಾಡುವ ಅತ್ಯಂತ ನೀಚ ಉದ್ದೇಶ ಹೊಂದಿತ್ತು. ಚಳುವಳಿ ತೀವ್ರವಾಯಿತು. ರಜಾಕಾರರ ಪುಂಡಾಟಿಕೆ ಅತಿಯಾಯಿತು. ರಕ್ತಕ್ರಾಂತಿ ಪ್ರಬಲಗೊಂಡಿತು. ಬೀದರದ ಜನ ಕಂಗಾಲಾಗಿಹೋದರು. ಹಲವರು ಪ್ರಾಣಬಿಟ್ಟರು. ಹಲವರು ಮನೆ–ಮಾರು ಬಿಟ್ಟು ಸೊಲ್ಲಾಪುರ, ಅಕ್ಕಲಕೋಟ, ದುದನಿ ಮೊದಲಾದ ಕಡೆ ಹೋಗಿ ಜೀವ ಉಳಿಸಿಕೊಂಡರು. ಬಸವಕಲ್ಯಾಣ ತಾಲ್ಲೂಕಿನ ಗೋರ್ಟಾ ಗ್ರಾಮ ಸುಟ್ಟು ಭಸ್ಮವಾಯಿತು. ಹೀಗೆ ಈ ನಿಜಾಂಶಾಹಿ ಅರಸರ ರಾಜಕೀಯ ದೌರ್ಜನ್ಯದಿಂದ ಈ ಕಾಲದಲ್ಲಿ ಈ ಭಾಗದಲ್ಲಿ ಅನೇಕ ಅವಘಡಗಳು ಸಂಭವಿಸಿದವು.

ನಿಜಾಂಶಾಹಿಯ ಈ ರಾಜಕೀಯ ದೌರ್ಜನ್ಯವನ್ನು ಹತ್ತಿಕ್ಕಲು ಈ ಸಂದರ್ಭದಲ್ಲಿ ಇಡೀ ಬೀದರ ಜಿಲ್ಲೆಯೇ ಎದ್ದು ಕುಳಿತಿತ್ತು. ಡೊಣಗಾಂವದ ಗಣಪತರಾವ ಮುಳೆ, ಬಿಜಲ್‌ಗಾಂವದ ನಾಗಭೂಷಣ ಬಿಚ್ಚುಂದೆ, ಖೇಡ ಹುಲಸೂರಿನ ಪಾಂಡುರಂಗ ಬಿರಾದಾರ, ಗೋರ್ಟಾದ ಕಾಶೆಪ್ಪ ಭಾಲ್ಕೆ, ಶಂಕರೆಪ್ಪ ಪತಂಗೆ, ಜಾನಾಪುರದ ಏಕನಾಥರಾವ ಜಗತಾಪ, ಗಣಪತರಾವ ಸಿಂಧೆ, ನಿರಗುಡಿಯ ನರಸಿಂಗರಾವ ನೇಳಗೆ, ಮುಡಬಿಯ ಮಲ್ಲಾರೆಡ್ಡಿ, ಮರೂರದ ಭೀಮಣ್ಣ ಮಜಗೆ, ಮೆಹಕರದ ಮಾಧವರಾವ ಹಸೂರೆ, ದಾಡಗಿಯ ಧೂಳಪ್ಪ ಗುಳಸೆಟ್ಟಿ, ದುಬಲಗುಂಡಿಯ ವೀರಣ್ಣ ಎಲಿ ಮೊದಲಾದ ಜಿಲ್ಲೆಯ ನೂರಾರು ಜನರು ನಿಜಾಂಶಾಹಿಯ ಈ ದೌರ್ಜನ್ಯದ ವಿರುದ್ಧ ತಮ್ಮ ಪ್ರಾಣದ ಹಂಗನ್ನೇ ತೊರೆದು ಧೈರ್ಯದಿಂದ ಹೋರಾಡಿದರು. ಅವರ ಈ ಹೋರಾಟ ಬೀದರ ಜಿಲ್ಲೆ ಮಾತ್ರವಲ್ಲ ದೇಶದ ಇತಿಹಾಸದಲ್ಲಿಯೇ ಎಂದೆಂದಿಗೂ ಸ್ಮರಣೀಯವಾದುದು.

**ಡಾ॥ ಗುರುಲಿಂಗಪ್ಪ ಧಬಾಲೆ**
ಮುಖ್ಯಸ್ಥರು, ಕನ್ನಡ ವಿಭಾಗ, ಸಿ. ಬಿ. ಖೇಡಗಿ ಬಸವೇಶ್ವರ ವಿಜ್ಞಾನ, ಆರ್. ವ್ಹಿ. ವಾಣಿಜ್ಯ ಮತ್ತು ಆರ್. ಜೆ. ಕಲಾ ಮಹಾವಿದ್ಯಾಲಯ, ಅಕ್ಕಲಕೋಟ – ೪೧೩ ೨೧೬, ಸೊಲ್ಲಾಪುರ (ಮಹಾರಾಷ್ಟ್ರ) ಜಿಲ್ಲೆ

# ಕೃಷಿಕನ ಕಲಾ ಪ್ರೀತಿ, ಕಾಳಜಿ...



ಬದಲಾದ ಕಾಲದಲ್ಲಿ 'ಕಂಪ್ಯೂಟರ್'ಗಳಿಂದ ಚಿತ್ರ ರಚಿಸುವುದು ಸುಲಭ ಎನಿಸಿದೆ. ಆದರೂ ಕುಂಚ, ಜಲವರ್ಣ ಬಳಸಿಕೊಂಡು ಕೈಯಿಂದ ಬರೆವ ಚಿತ್ರದ ಖುಷಿಯೇ ಬೇರೆ. ಕೈಯಿಂದ ರಚಿತವಾದ ಚಿತ್ರಗಳ ಸಹಜತೆ, ಆಕರ್ಷಣೆಗಳು ಡಿಜಿಟಲ್ ಚಿತ್ರಗಳಲ್ಲಿ ಬರಲಾರವು ಎನ್ನುತ್ತಾರೆ ಕೃಷಿಕ–ಕಲಾವಿದ ಮತ್ತಿಘಟ್ಟದ **ಗಣಪತಿ ಹೆಗಡೆ.**



ಕಲ್ಲು ಬಂಡೆಗಳ ಶಿಖರ 'ಯಾಣ' ವಿಶ್ವ ಪ್ರಸಿದ್ಧ. ಯಾಣದ ಹತ್ತಿರವೇ 'ಮತ್ತಿಘಟ್ಟ' ಎಂಬ ಕುಗ್ರಾಮವಿದೆ. ಹಸಿರು ಕಾಡು, ಗುಡ್ಡ, ಜಲಪಾತಗಳಿಂದ ಕೂಡಿರುವ ಇಲ್ಲಿನ ಪ್ರದೇಶ ಪ್ರಾಕೃತಿಕವಾಗಿ ಅತೀ ಶ್ರೀಮಂತ. ಸುತ್ತಲಿನ ಪ್ರಕೃತಿಯ ಸೌಂದರ್ಯವನ್ನು ಜಲವರ್ಣಗಳಿಂದ ಚಿತ್ರಿಸಿ ಸಂತೋಷಪಡುತ್ತಿದ್ದ ಗಣಪತಿ ಹೆಗಡೆ, ದೂರದ ಮೈಸೂರಿಗೆ ತೆರಳಿ, ಮೈಸೂರಿನ ಚಾಮರಾಜೇಂದ್ರ ದೃಶ್ಯಕಲಾ ತರಬೇತಿ ಕೇಂದ್ರ(ಕಾವಾ)ದಲ್ಲಿ 'ಬಿಎಫ್‌ಎ' ಪದವಿಯೊಂದಿಗೆ ಚಿತ್ರಕಲೆಯನ್ನು ಶಾಸ್ತ್ರೀಯವಾಗಿ ಕಲಿತು ಊರಿಗೆ ಮರಳಿ, ಸಾಂಪ್ರದಾಯಿಕ ಅಡಿಕೆ ಕೃಷಿಯನ್ನು ಮಾಡುತ್ತ, ಚಿತ್ರಕಲೆಯನ್ನು ಆಸಕ್ತ ಮಕ್ಕಳಿಗೆ ಕಲಿಸುವ ಉಪಯುಕ್ತ ಕಾರ್ಯದಲ್ಲಿ ತೊಡಗಿದ್ದಾರೆ.

ಚಿತ್ರಕಲೆಯಲ್ಲಿ ವಿಶೇಷವಾಗಿ 'ಜಲವರ್ಣ' ಮಾಧ್ಯಮದಲ್ಲಿ ಚಿತ್ರ ರಚನೆ ಮಾಡುವುದು ಒಂದು ಸವಾಲು. ಕಲೆಯಲ್ಲಿ ಜಲವರ್ಣ ಮಾಧ್ಯಮ ಎಲ್ಲರಿಗೂ ಇಷ್ಟವಾಗುವ ಮಾಧ್ಯಮವೂ ಹೌದು, ಕಷ್ಟದ ಮಾಧ್ಯಮವೂ ಸಹ. ಜಲವರ್ಣ ಮಾಧ್ಯಮದಲ್ಲಿ ವಿಶೇಷ ಸಾಧನೆ, ಹೆಚ್ಚಿನ ಹಿಡಿತ ಸಾಧಿಸಿದವರು ಶಿರಸಿಯ ಮತ್ತಿಘಟ್ಟದ ಜಿ. ಡಿ. ಹೆಗಡೆಯವರು. ಇವರು ಜಲವರ್ಣಗಳಿಂದ ಚಿತ್ರಿಸಿರುವ ಹಲವಾರು ಬಗೆಯ ಬಣ್ಣದ ಹೂಗಳು. ಬಣ್ಣದ ಚಿಟ್ಟೆಗಳು ಸಹಜವಾದ ಹೂ–ಚಿಟ್ಟೆಗಳಿಗಿಂತಲೂ ಆಕರ್ಷಕವಾಗಿ ಮೂಡಿವೆ. ಜಲವರ್ಣದ ಚಿತ್ರಗಳಲ್ಲಿ 'ತ್ರೀ–ಡಿ' ಎಫೆಕ್ಟ್ ತೋರಿಸುವುದರಲ್ಲಿ ಇವರ ಕರಕುಶಲತೆ ಮೆಚ್ಚುವಂತಿದೆ.

**ಚಿತ್ರ–ಬರಹ : ಜಿ. ಎಂ. ಬೊಮ್ನಳ್ಳಿ, ಪೋ: ಬೊಮ್ನಳ್ಳಿ, ತಾ: ಶಿರಸಿ (ಉ.ಕ)–581402**





Printed & published by Dr. Siddanagouda Patil on behalf of Navakarnataka Publications (P) Ltd., Embassy Centre, Crescent Road, Bengaluru-1 and printed at Sri Vinayaka Printers, No. 738/10, 60th Cross, 5th Block, Rajajinagar, Bengaluru-560 010. Published at Bengaluru. Editor : Dr. Siddanagouda Patil. 

